# ಕರ್ನಾಟಕ ಲಿಂಗಾಯತ ರಾಣಿಯರು : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್. ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

**ಸುಮಂಗಲಾ ಎಸ್. ಮೇಟಿ**



ಮಾರ್ಗದರ್ಶಕರು

**ಡಾ. ಕೆ. ರವೀಂದ್ರನಾಥ**

ಸಹ ಪ್ರಾಧ್ಯಾಪಕರು,

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ






ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩-೨೭೬

೨೦೧೩

# ಕರ್ನಾಟಕ ಲಿಂಗಾಯತ ರಾಣಿಯರು
# ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

**ಸುಮಂಗಲಾ ಮೇಟಿ**

ಮಾರ್ಗದರ್ಶಕರು

**ಡಾ.ಕೆ.ರವೀಂದ್ರನಾಥ**

ಸಹ ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ,ಹಂಪಿ

ವಿದ್ಯಾರಣ್ಯ





**ಹಸ್ತಪ್ರತಿಶಾಸ್ತ್ರ ವಿಭಾಗ**

**ಭಾಷಾನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ ೫೮೩ ೨೭೬**

**೨೦೧೩**

**ಡಾ. ಕೆ.ರವೀಂದ್ರನಾಥ**
ಮಾರ್ಗದರ್ಶಕರು ಮತ್ತು
ಸಹ ಪ್ರಾಧ್ಯಾಪಕರು



**ಹಸ್ತಪ್ರತಿಶಾಸ್ತ್ರ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಸುಮಂಗಲಾ ಮೇಟಿ** ಅವರು ನನ್ನ ಮಾರ್ಗದರ್ಶನದಲ್ಲಿ **ಕರ್ನಾಟಕ ಲಿಂಗಾಯತ ರಾಣಿಯರು: ಒಂದು ಅಧ್ಯಯನ** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ** ಪಿಎಚ್.ಡಿ.ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಸಮಗ್ರ ವಿಷಯವನ್ನು ಅಥವಾ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

(ಡಾ. ಕೆ.ರವೀಂದ್ರನಾಥ)

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೬/೧೧/೧೨

# ಪ್ರಮಾಣ ಪತ್ರ

**ಡಾ.ಕೆ.ರವೀಂದ್ರನಾಥ** ಅವರ ಮಾರ್ಗದರ್ಶನದಲ್ಲಿ **ಕರ್ನಾಟಕ ಲಿಂಗಾಯತ ರಾಣಿಯರು: ಒಂದು ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ **ಹಸ್ತಪ್ರತಿಶಾಸ್ತ್ರ ವಿಭಾಗ**ಕ್ಕೆ ಸಾದರಪಡಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಮತ್ತು ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೭/೧೧/೧೨

**ಸುಮಂಗಲಾ ಮೇಟಿ**
ಸಂಶೋಧಕರು
**ಹಸ್ತಪ್ರತಿಶಾಸ್ತ್ರ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವೈಧನಿಕತೆ ವ್ಯಾಪ್ತಿ ಹಾಗೂ ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಮಹತ್ವ

೧.೩. ಅಧ್ಯಯನದ ವೈಧಾನಿಕತೆ

೧.೪. ಅಧ್ಯಯನದ ವ್ಯಾಪ್ತಿ

೧.೫. ಅಧ್ಯಯನದ ಸ್ವರೂಪ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವೈಧಾನಿಕತೆ, ವ್ಯಾಪ್ತಿ ಹಾಗೂ ಸ್ವರೂಪ

### ೧.೧. ಅಧ್ಯಯನದ ಉದ್ದೇಶ

ಕರ್ನಾಟಕದ ಲಿಂಗಾಯತ ರಾಣಿಯರು ಕುರಿತಾದ ಈ ಮಹಾಪ್ರಬಂಧ ಕೆಲವು ಉದ್ದೇಶಗಳನ್ನು ಹೊಂದಿದೆ. ನಮ್ಮ ನಾಡಿನ ಚರಿತ್ರೆಯೆಂದರೆ ರಾಜಮನೆತನದ ಹುಟ್ಟು, ವಂಶಾವಳಿ, ಅವರು ನೀಡಿದ ಆಡಳಿತ, ಸಾಂಸ್ಕೃತಿಕ ಬದುಕು, ಯುದ್ಧ ಮತ್ತು ಪರಿಣಾಮಗಳನ್ನು ಕುರಿತು ಅಂಕಿ–ಅಂಶಗಳ ಮೂಲಕ ವಿವರಿಸುವ ಕಥಾನಕವೆಂದು ತಿಳಿದಿದ್ದೇವೆ. ಇತಿಹಾಸವೆಂದರೆ ಅದು ಮೂಕಸಾಕ್ಷಿಯಲ್ಲ ಪ್ರಬಲ ಮಾಧ್ಯಮ ಎಂದು ಪರಿಭಾವಿಸಬೇಕಾಗಿದೆ. ಹೀಗಾಗಿ ನಮ್ಮ ಕವಿಗಳು ಚಿತ್ರಿಸಿದ ಕಾಳಗದ ಕಥೆಗಳನ್ನು, ಕರಣಿಕರು ಬರೆದಿಟ್ಟ ಕೃತಕ ದಾಖಲೆಗಳನ್ನು ಮುಂದಿಟ್ಟುಕೊಂಡು ಚರಿತ್ರೆಯ ನಿರ್ಮಾಣ ಮಾಡುವ ಉಪಕ್ರಮ ಬಹುಕಾಲದಿಂದ ಬೆಳೆದು ಬಂದಿದೆ. ಇದರಿಂದಾಗಿ ರಾಜಮನೆತನ ಮತ್ತು ರಾಜರ ಹೆಸರಿನಲ್ಲಿ ಒಂದು ಅರಸುಮನೆತನವನ್ನು ಗುರುತಿಸುವ ನಾವು 'ರಾಣಿಯರ' ಹೆಸರಿನಲ್ಲಿ ತಪ್ಪಿಯೂ ಒಂದು ಸಂಸ್ಥಾನವನ್ನು ಗುರುತಿಸುವ ಪ್ರಯತ್ನ ಮಾಡಿಲ್ಲ. ಇದಕ್ಕೆ ಕಾರಣ ಹಲವಾರು.

ಕರ್ನಾಟಕ ರಾಣಿಯರ ಅಧ್ಯಯನದ ತಾತ್ವಿಕತೆ ಇದುವರೆಗೂ ಪೂರ್ಣಪ್ರಮಾಣದಲ್ಲಿ ನಿರೂಪಿತವಾಗಿಲ್ಲ. ಅವರನ್ನು ಕುರಿತ ಸಾಂಸ್ಕೃತಿಕ ನಿರ್ವಚನ ನ್ಯಾಯಸಮ್ಮತವಾಗಿ ಚರ್ಚೆಯಾಗಿಲ್ಲ. ಅದರಲ್ಲೂ ರಾಜ್ಯಾಧಿಕಾರದ ಸಂದರ್ಭದಲ್ಲಿ ರಾಣಿಯರು ನಿರ್ವಹಿಸಿದ ಪಾತ್ರ ಮತ್ತು ಚಾರಿತ್ರಿಕ ಸಂದರ್ಭ ದಾಖಲಾರ್ಹವಾದುದು. ಇಂಥ 'ರಾಣಿ' ಕೇಂದ್ರಿತ ಸಾಂಸ್ಕೃತಿಕ ಅಧ್ಯಯನದ ಅಗತ್ಯವನ್ನು ಪೂರೈಸುವುದು ಈ ಮಹಾಪ್ರಬಂಧ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಲಿಂಗಾಯತ ರಾಣಿಯರ ಚಾರಿತ್ರಿಕ ಬದುಕನ್ನು ನಿರೂಪಿಸುವ ಆಕರಗಳಲ್ಲಿ ಸಾಹಿತ್ಯ ಕೃತಿಗಳು, ದಾಖಲೆಗಳು, ಶಾಸನಗಳು, ಪ್ರವಾಸಿ ವರದಿಗಳು, ಕೈಫಿಯತ್ತುಗಳು, ನಾಮೆಗಳು,

ಸ್ಮಾರಕಗಳಂಥ ಅನೇಕ ಆಕರಗಳು ಕನ್ನಡ ನಾಡಿನಲ್ಲಿ ರಚನೆಯಾಗಿವೆ. ಉದಾಹರಣೆಗೆ ಹರಿಹರನ ತೆಲುಗು ಜೊಮ್ಮಯ್ಯನ ರಗಳೆ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಲಿಂಗಣ್ಣ ಕವಿಯ ಕೆಳದಿನೃಪ ವಿಜಯ, ಬಸಪ್ಪನಾಯಕನ ಶಿವತತ್ವ ರತ್ನಾಕರ ಹಾಗೂ ಪಾರ್ವತಿ ಪರಿಣಯ ಮುಂತಾದ ಕಾವ್ಯಸಾಹಿತ್ಯದ ಜೊತೆಗೆ ಜನಪದ ಸಾಹಿತ್ಯ ಗುಂಪಿಗೆ ಸೇರುವ ಐತಿಹ್ಯಗಳು, ವದಂತಿಗಳು, ಲಾವಣಿಗಳು ರಚನೆಯಾಗಿವೆ. ಮುಂದುವರೆದು ನಮ್ಮ ನಾಡಿನ ಶಾಸನಗಳಲ್ಲಿ ಕಲ್ಯಾಣ ಚಾಲುಕ್ಯರ ದೇವೂರಿನ ಶಾಸನ, ಡೋಣಿ ಶಾಸನ, ಕೆರೆಸಂತೆ ಶಾಸನ, ಕವಲೆದುರ್ಗದ ತಾಮ್ರಶಾಸನಗಳು, ಯಳಂದೂರಿನ ಶಾಸನ ಮುಂತಾದವು ರಾಣಿಯರ ಸಾಮಾಜಿಕ ಕಾರ್ಯಗಳ ಕಡೆಗೆ ಬೆರಳು ಮಾಡಿ ತೋರಿಸುತ್ತವೆ. ಸ್ಥಳೀಯ ಚರಿತ್ರೆ ನಿರೂಪಿಸುವ ಕೈಫಿಯತ್ತುಗಳು ರಾಣಿಯರನ್ನು ಕುರಿತು ಮಾತನಾಡುತ್ತವೆ. ಅವುಗಳಲ್ಲಿ ಶೃಂಗೇರಿ, ಸಾಗರ, ಹೈದರ, ಕಡಬಾ ಸಂಸ್ಥಾನ ಹಾಗೂ ಕುರುಗೋಡು ಕೈಫಿಯತ್ತುಗಳು ಪ್ರಮುಖವಾದವು. ಕೈಫಿಯತ್ತುಗಳಂತೆ ರಚನೆಯಾದ ನಾಮೆಗಳಲ್ಲಿ ಹೈದರನಾಮೆ, ರಾಜೇಂದ್ರನಾಮೆ, ಹುಕುಂನಾಮೆ ಯಲ್ಲೆಲ್ಲಾ ರಾಣಿಯರ ಕೌಟುಂಬಿಕ ಮತ್ತು ಸಾಮಾಜಿಕ ವಿಷಯಗಳ ಪ್ರತಿಪಾದನೆಯನ್ನು ನೋಡಬಹುದು. ಐತಿಹಾಸಿಕ ಕಾಗದ ಪತ್ರಗಳಿಗೆ ಹಾಗೆಯೇ ಪ್ರವಾಸಿಗರ ವರದಿಗಳಲ್ಲಿ ಕರ್ನಾಟಕ ಲಿಂಗಾಯತ ರಾಣಿಯರು ಚಿತ್ರಿತಗೊಂಡಿರುವುದನ್ನು ಕಾಣಬಹುದು. ಈ ಎಲ್ಲ ಆಕರಗಳನ್ನು ಬಳಸಿಕೊಂಡು ಲಿಂಗಾಯತ ರಾಣಿಯರ ಚಾರಿತ್ರಿಕ ಅಧ್ಯಯನದಲ್ಲಿ ಈ ಆಕರಗಳ ಪಾಲು ಮತ್ತು ಪಾತ್ರವನ್ನು ನಿರ್ವಚಿಸುವ ಮತ್ತೊಂದು ಉದ್ದೇಶವನ್ನು ಈ ಮಹಾಪ್ರಬಂಧ ಒಳಗೊಂಡಿದೆ.

ರಾಣಿಯೆಂದರೆ ಯಾರು? ಈ ಪದದ ಅರ್ಥವ್ಯಾಪ್ತಿಯನ್ನು ಖಚಿತಪಡಿಸಿಕೊಳ್ಳುವ ಹಿನ್ನೆಲೆಯಲ್ಲಿ ನಮ್ಮದೇ ಆದ ಕೆಲವು ಪ್ರಮೇಯಗಳನ್ನು ರೂಪಿಸಿಕೊಂಡಿದ್ದೇವೆ. ಕರ್ನಾಟಕ ಆಡಳಿತ ವಿಭಾಗಗಳಲ್ಲಿ ಅನೇಕ ಹಂತಗಳು ಕಂಡುಬರುತ್ತವೆ. ದೇಶ, ವಿಷಯ, ನಾಡು, ಪ್ರಾಂತ, ಗ್ರಾಮ ಇತ್ಯಾದಿ. ಅವುಗಳ ವ್ಯಾಪಕತೆಯ ಹಿನ್ನೆಲೆಯಲ್ಲಿ ಆಡಳಿತ ವಿಭಾಗಗಳನ್ನು ರೂಪಿಸಿಕೊಳ್ಳ ಲಾಗಿದೆ. ಹೀಗೆ ರೂಪಿಸಿಕೊಂಡ ಭೂಪ್ರದೇಶದ ಆಳ್ವಿಕೆಯಲ್ಲಿ ಚಕ್ರವರ್ತಿಗಳು, ಸಾಮಂತರು, ಮಾಂಡಲಿಕರು, ಪ್ರಭುಗಳು, ನಾಡಪ್ರಭುಗಳು, ದೇಸಾಯಿಗಳು, ನಾಡ ದೇಸಾಯಿಗಳು ಇತ್ಯಾದಿ ವರ್ಗೀಕರಿಸುತ್ತೇವೆ. ಈ ಎಲ್ಲ ಘಟಕಗಳನ್ನು ಸಾಮ್ರಾಜ್ಯದ ಚಕ್ರವರ್ತಿಗಳಂತೆ ಇತರ ಅಧಿಕಾರಿ ವರ್ಗದವರನ್ನು ಒಳಗೊಂಡ ಅವರ ಪತ್ನಿಯರನ್ನು 'ರಾಣಿಯರ' ಅರ್ಥವ್ಯಾಪ್ತಿ ಅಡಿಯಲ್ಲಿ ಸೇರಿಸಿಕೊಂಡಿದ್ದೇವೆ. ಅಂದರೆ ಒಂದು ಪಾಳೇಪಟ್ಟದ ಯಜಮಾನನ ಹೆಂಡತಿಯನ್ನೊಳಗೊಂಡಂತೆ ಒಬ್ಬ ಚಕ್ರವರ್ತಿಯನ್ನು ಕೈಹಿಡಿದವರನ್ನು ರಾಣಿಯೆಂದು ಪರಿಭಾವಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದರಿಂದ ರಾಣಿಯರ ಅಧ್ಯಯನದ ಸೈದ್ಧಾಂತಿಕತೆಯ ಅಗತ್ಯವೇನು? ಇದುವರೆಗೂ ನಡೆದ ಅಧ್ಯಯನಗಳ ತಾತ್ವಿಕತೆಯ ಸ್ವರೂಪವೇನು? ಚರಿತ್ರೆಯ ನಿರೂಪಣೆಯಲ್ಲಿ

ಸ್ತ್ರೀವಾದಿ ಸಂಕಥನಗಳ ಅನಿವಾರ್ಯತೆ ಮತ್ತು ಸಹಭಾಗಿತ್ವದ ನಿಲವುಗಳನ್ನು ನಿರ್ವಚಿಸುವ ಪ್ರಯತ್ನ ಮಾಡಬೇಕಾಗಿದೆ. ವಿಶೇಷವಾಗಿ ರಾಜ್ಯಾಧಿಕಾರದ ಸಂದರ್ಭದಲ್ಲಿ ರಾಣಿಯರ ಸ್ಥಾನಮಾನಗಳನ್ನು, ಅವರ ಅನಿಸಿಕೆ, ಆಲೋಚನೆಗಳನ್ನು ಚರ್ಚಿಸುವುದು ಪ್ರಸ್ತುತ ಸಂದರ್ಭದಲ್ಲಿ ಮಹತ್ವಪೂರ್ಣ ಅಂಶವಾಗಿದೆ. ಸ್ತ್ರೀವಾದವನ್ನು ಪ್ರತ್ಯೇಕವಾಗಿ ಮತ್ತು ಗಂಭೀರವಾಗಿ ಅಧ್ಯಯನ ಮಾಡುವ ಇಂದಿನ ದಿನಮಾನಗಳಲ್ಲಿ ರಾಣಿಯರ ಸಾಂಸ್ಕೃತಿಕ ನಿರ್ವಚನ ಮತ್ತು ಸ್ತ್ರೀವಾದಿ ಸಂಕಥನದ ಸೈದ್ಧಾಂತಿಕ ನಿಲುವುಗಳನ್ನು ನಿರೂಪಿಸುವ ಉದ್ದೇಶವನ್ನು ಈ ಮಹಾಪ್ರಬಂಧ ಒಳಗೊಂಡಿದೆ.

ರಾಜರಂತೆ ರಾಣಿಯರೂ ರಾಜಕೀಯ, ಸಾಹಿತ್ಯಕ, ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ರೀತಿಯನ್ನು ಸಾಂಸ್ಕೃತಿಕ ಅಧ್ಯಯನದ ಹಿನ್ನೆಲೆಯಲ್ಲಿ ಚರ್ಚಿಸಬೇಕಾಗಿದೆ. ಕೆಳದಿ ಚೆನ್ನಮ್ಮ, ಕಿತ್ತೂರ ಚೆನ್ನಮ್ಮ ಹಾಗೂ ಕಿತ್ತೂರ ರುದ್ರಮ್ಮ ಮುಂತಾದವರು ರಾಜಕೀಯ ಕ್ಷೇತ್ರದಲ್ಲಿ ತಮ್ಮ ಛಾಪನ್ನು ಮೂಡಿಸಿದವರು. ರಾಜ್ಯದ ಆಂತರಿಕ ಹಾಗೂ ಬಾಹ್ಯ ಸಮಸ್ಯೆಗಳನ್ನು ಸಮರ್ಥವಾಗಿ ಪರಿಹರಿಸಿದ ಇವರ ರಾಜಕೀಯ ಮನೋಬಲ ಯಾವ ರಾಜರಿಗಿಂತ ಕಡಿಮೆಯಿಲ್ಲ. ಆಡಳಿತವ್ಯವಸ್ಥೆ, ಕರ್ತವ್ಯ ನಿರ್ವಹಣೆ, ಅಧಿಕಾರಿವರ್ಗ ನೇಮಕ, ನ್ಯಾಯಾಡಳಿತ, ರಕ್ಷಣಾವ್ಯವಸ್ಥೆ, ರಾಜನೈತಿಕ ಸಂಬಂಧಗಳನ್ನು ಇವರು ಮೈಗೂಡಿಕೊಂಡು ಬೆಳೆದಿದ್ದಾರೆ.

ಸಾಹಿತ್ಯಕವಾಗಿ ಕರ್ನಾಟಕ ಲಿಂಗಾಯತ ರಾಣಿಯರ ಚರಿತ್ರೆ ಅಧ್ಯಯನ ಯೋಗ್ಯವಾದುದು. ರಾಣಿಯರು ಬರೆದ ಸಾಹಿತ್ಯ ಮತ್ತು ರಾಣಿಯರನ್ನು ಕುರಿತ ಸಾಹಿತ್ಯ ಎಂಬ ಎರಡು ಮುಖಗಳಲ್ಲಿ ಚಿತ್ರಿತಗೊಂಡ ಇವರ 'ಸಾಹಿತ್ಯ ಚರಿತ್ರೆ'ಯಲ್ಲಿ ಚೆಲುವಾಂಬೆಯ ಮಹಾತ್ಮೆಗಳು, ಲಾಲೀಪದಗಳು, ಮಂಗಳಾರತಿ ಪದಗಳು, ಚೌಪದಿಗಳು, ಗುಣಾತ್ಮಕ ಸಾಹಿತ್ಯ ಕೃತಿಗಳಾಗಿವೆ. ಬಹುಭಾಷಾ ಪಾಂಡಿತ್ಯ ಹೊಂದಿದ ಈ ರಾಣಿಯರಿಂದ ಅನೇಕ ಕೃತಿಗಳು ಹುಟ್ಟಿಕೊಂಡಿವೆ. ಮಧುಗಿರಿಯ ತಿಮ್ಮಾಂಬೆಯ 'ಬಿಲ್ವವೃಕ್ಷೋತ್ಸವ ತಾರಾವಳಿ' ಅಪರೂಪದ ಕೃತಿ. ಕೊಡಗಿನ ಹಾಲೇರಿ ಮನೆತನದ ರಾಣಿಯರ ಶಿಕ್ಷಣ ಪ್ರೇಮ, ಕಿತ್ತೂರಿನ ರಾಣಿ ರುದ್ರಮ್ಮನ 'ರಸಪಾಕ ವಿಧಾನ', ಕೆಳದಿ ಗಂಗಾದೇವಿಯ 'ಕೆಳದಿ ರಾಜ್ಯಾಭ್ಯುದಯಂ' ಕೃತಿಗಳು ಲಿಂಗಾಯತ ರಾಣಿಯರ ಸಾಹಿತ್ಯ ರಚನಾಪ್ರೌಢಿಮೆಗೆ ನಿದರ್ಶನಗಳಾಗಿವೆ.

ಚಾರಿತ್ರಿಕ ಆಕರಗಳೆಂದು ಪರಿಭಾವಿಸಿಬಹುದಾದ ಕೆಲವು ಕೃತಿಗಳಲ್ಲಿ ರಾಣಿಯರ ಚರಿತ್ರೆ ಪ್ರಾಸಂಗಿಕವಾಗಿ ದಾಖಲಾಗಿದೆ. ಇದರಿಂದ ರಾಣಿಯರ ವ್ಯಕ್ತಿತ್ವದ ಮೇಲೆ ಬರೆದ ಜೀವನ ಚರಿತ್ರೆಯ ಒಂದು ಭಾಗವಾಗಿ ಈ ಕೃತಿಗಳು ಗೋಚರಿಸುತ್ತವೆ. ಲಿಂಗಣ್ಣ ಕವಿಯ 'ಕೆಳದಿ ನೃಪ

ವಿಜಯ', ಬಸಪ್ಪ ನಾಯಕನ 'ಶಿವತತ್ವ ರತ್ನಾಕರ', ದೇವಚಂದ್ರನ 'ರಾಜಾವಳಿ ಕಥಾಸಾರ' ಮತ್ತು ಕಿತ್ತೂರ ಸಂಸ್ಥಾನಕ್ಕೆ ಸಂಬಂಧಪಟ್ಟಂತೆ 'ಮಲ್ಲೇಂದ್ರ ಭಕ್ತಿ ತರಂಗಿಣಿ', 'ಮಲ್ಲೇಂದ್ರವಿಜಯ', 'ಕಿತ್ತೂರ ಅರಸರ ಕೋಲುಪದ', 'ಮಲ್ಲಸರ್ಜನ ಕಾವ್ಯ', 'ಕಿತ್ತೂರಿನ ಮುತ್ತಿಗೆ', 'ಕಿತ್ತೂರಿನ ರಾಣಿ ಅಂತ್ಯ', 'ಕಿತ್ತೂರ ಚೆನ್ನವ್ವನ ಸೊಸಿ' ಮುಂತಾದ ಇಡಿಯಾದ ಕೃತಿಗಳು, ಬಿಡಿಯಾದ ಹಾಡುಗಳು ರಾಣಿಯರ ಕುರಿತ ಸಾಹಿತ್ಯ ಸಂಪತ್ತಾಗಿದೆ. ಈ ಎಲ್ಲ ಸಾಹಿತ್ಯವನ್ನು ಪುನರವಲೋಕನ ಮಾಡುವ ಆ ಮೂಲಕ ಇತಿಹಾಸವನ್ನು ನಿರೂಪಿಸುವ ಉದ್ದೇಶವನ್ನು ಹೊಂದಿದೆ.

ಧಾರ್ಮಿಕವಾಗಿ ಲಿಂಗಾಯತ ರಾಣಿಯರು ಜೈನ, ವೈಷ್ಣವ, ಶೈವ, ಇಸ್ಲಾಂ, ಕ್ರೈಸ್ತ ಧರ್ಮಗಳಿಗೆ ಆಶ್ರಯ ನೀಡಿ ಪರಮತ ಸಹಿಷ್ಣು ವ್ಯಕ್ತಿತ್ವವನ್ನು ಮೆರೆದಿದ್ದಾರೆ. ಕೌಟುಂಬಿಕ ಬದುಕನ್ನು ನಿರ್ವಚಿಸುವ ರಾಣಿಯರು ಸಾಮಾಜಿಕ ಬದುಕನ್ನು ರೂಪಿಸಿಕೊಂಡು ಸಾಂಘಿಕ ಬದುಕಿಗೆ ಶ್ರೀಕಾರ ಹಾಕಿದವರು. ಸಮಾಜದಲ್ಲಿ ಶ್ರಮಿಕವರ್ಗ, ಅವರ ದುಡಿಮೆ, ಸ್ಥಾನಮಾನಗಳಿಗೆ ರಾಣಿಯರು ರೂಪಿಸಿಕೊಂಡ ಯೋಜನೆಗಳು ಕರ್ನಾಟಕ ಲಿಂಗಾಯತ ರಾಣಿಯರ ಸಾಂಸ್ಕೃತಿಕ ಅನನ್ಯತೆಯನ್ನು ಎತ್ತಿ ಹೇಳುವಂಥವು. ಈ ಎಲ್ಲ ಅಂಶಗಳನ್ನು ಕರ್ನಾಟಕ ಲಿಂಗಾಯತ ರಾಣಿಯರ ಕೊಡುಗೆಗಳ ಹಿನ್ನೆಲೆಯಲ್ಲಿ ಅವರ ಸಾಂಸ್ಕೃತಿಕ ಮುಖವನ್ನು ಅನಾವರಣಗೊಳಿಸುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ.

### ೧.೨. ಅಧ್ಯಯನದ ಮಹತ್ವ

ಕರ್ನಾಟಕ ರಾಜಕೀಯ ಇತಿಹಾಸದಲ್ಲಿ ರಾಣಿಯರ ಪಾತ್ರ ತುಂಬಾ ಮಹತ್ವದ್ದು. ನಮ್ಮ ರಾಜಕೀಯ ಇತಿಹಾಸವೆಂಬುದು ಮೊದಲು ಸಾಮ್ರಾಟಪ್ರಭುತ್ವ, ನಂತರ ಸಾಮಂತಪ್ರಭುತ್ವ, ಅನಂತರ ಪ್ರಜಾಪ್ರಭುತ್ವ ಮಾರ್ಗದಲ್ಲಿ ಕ್ರಮಿಸಿದೆ. ಹೀಗೆ ಕ್ರಮಿಸಿದ ಹಾದಿಯನ್ನು ಒಮ್ಮೆ ಸಿಂಹಾವಲೋಕನ ಮಾಡಿದರೆ ರಾಣಿಯರ ಪ್ರಭುತ್ವ ಎಷ್ಟೆಂಬುದು ತಿಳಿದುಬರುತ್ತದೆ. ಇಂಥ ಕುತೂಹಲ ಕಾರಣವಾಗಿ ಈ ಅಧ್ಯಯನ ತನ್ನ ಮಹತ್ವವನ್ನು ಪಡೆದುಕೊಳ್ಳುತ್ತದೆ. ಅದರಲ್ಲೂ ಗಣ್ಯ ರಾಜಮನೆತನಗಳ ಕೆಲವು ರಾಣಿಯರ ಸಾಧನೆಗಳು ದಾಖಲಾಗಿದ್ದು, ಅಗಣ್ಯ ರಾಜ ಮನೆತನಗಳು ಉಪೇಕ್ಷೆಗೆ ಗುರಿಯಾಗಿವೆ. ಅಲ್ಲಿ ಮಹಿಳೆಯರ ಪ್ರಭುತ್ವ ಕುರಿತು ಏನೇನೂ ಪ್ರಸ್ತಾಪ ಆಗದಿರುವ ಸಂದರ್ಭಗಳೇ ಹೆಚ್ಚು. ಹೀಗಿರುವಾಗ ಸಾಮ್ರಾಟರ ಅಧ್ಯಯನದ ಜೊತೆಗೆ ಸಾಮಂತ ರಾಣಿಯರ ಇತಿಹಾಸವನ್ನು ನಿರೂಪಿಸುವ ದೃಷ್ಟಿಯಿಂದ ಈ ಅಧ್ಯಯನದ ಮಹತ್ವ ಇಮ್ಮಡಿಗೊಳ್ಳುತ್ತದೆ. ವಿಶೇಷವಾಗಿ ಇತಿಹಾಸವೆನ್ನುವುದು ಕೇವಲ ಗತಕಾಲಕ್ಕೆ ಸೀಮಿತವಾದ ಘಟನೆಯಲ್ಲ, ವರ್ತಮಾನವನ್ನು ನಿಯಂತ್ರಿಸುವ ಸಾಧನ. ಸಮುದಾಯದ ಬದುಕಿಗೆ ಹೊಸ ಪ್ರಜ್ಞೆಯನ್ನು ಮೂಡಿಸುವ ಕಥಾನಕ. ಈ ಕಾರಣವಾಗಿ ರಾಣಿಯರ ಚಾರಿತ್ರಿಕ ಬದುಕು,

ರಾಜ್ಯಾಧಿಕಾರದ ಸಂದರ್ಭದಲ್ಲಿ ರೂಪಗೊಂಡ ಬಗೆ ಹೇಗೆ? ಚಾರಿತ್ರಿಕ ಮತ್ತು ಸೈದ್ಧಾಂತಿಕ ದೃಷ್ಟಿಯಿಂದ ಚರಿತ್ರೆಯ ನಿರೂಪಣೆಯಲ್ಲಿ ನಮ್ಮ ಚರಿತ್ರೆಕಾರರು ಕಟ್ಟಿಕೊಟ್ಟ ಸ್ತ್ರೀವಾದಿ ಮೂಲದ ಚರಿತ್ರೆಯ ಸಾಧಕ–ಬಾಧಕವನ್ನು ಮತ್ತು ಉತ್ಪ್ರೇಕ್ಷೆ–ಉಪೇಕ್ಷೆಯನ್ನು ಪ್ರಸ್ತುತ ವರ್ತಮಾನದ ಕಾಲದಲ್ಲಿ ನಿರ್ವಚಿಸುವುದರ ಮೂಲಕ ಈ ಅಧ್ಯಯನಕ್ಕೆ ಸ್ತ್ರೀವಾದಿ ಸೈದ್ಧಾಂತಿಕ ಮಹತ್ವ ಸಲ್ಲುತ್ತದೆ.

ಒಂದು ದೇಶದ ಇತಿಹಾಸ ರಾಷ್ಟ್ರೀಯ ದೃಷ್ಟಿಕೋನದಿಂದ ರಚನೆಯಾದಂತೆ, ಪ್ರಾದೇಶಿಕ ದೃಷ್ಟಿಕೋನದಿಂದಲೂ ರಚನೆಯಾಗುವುದು ಅನಿವಾರ್ಯ ಮತ್ತು ಅಗತ್ಯ. ಆದರೆ ಬಹುತೇಕ ಇತಿಹಾಸ ಆರ್ಯೀಕರಣದ ಹಂತದಲ್ಲಿ ಮತ್ತು ಆಂಗ್ಲೀಕರಣದ ಹಂತದಲ್ಲಿ ರೂಪುಗೊಳ್ಳುತ್ತಾ, ಚರಿತ್ರೆಯ ನಿಜದ ನೆಲೆ ಸಿಗದೇ ಹೋಗುತ್ತದೆ. ಇಂಥ ಅಪಖ್ಯಾತಿಯಿಂದ ಇತಿಹಾಸವನ್ನು ಮುಕ್ತಗೊಳಿಸುವ ಮತ್ತು ದ್ರಾವಿಡ ಚಿಂತನಾಕ್ರಮವನ್ನು ಅಂದರೆ, ಪ್ರಾದೇಶಿಕ ನಿಜಚರಿತ್ರೆಯನ್ನು ದಾಖಲಿಸುವ ಕೆಲಸ ಆಗಬೇಕಾಗಿದೆ. ಈ ದೃಷ್ಟಿಕೋನದಿಂದ ಹಲವಾರು ವಿದ್ವಾಂಸರು ಈಗಾಗಲೇ ಸ್ಥಳೀಯ ಹಾಗೂ ಉಪೇಕ್ಷಿತ ನೆಲೆಯ ಅಧ್ಯಯನವನ್ನು ಪೂರೈಸಿದ್ದಾರೆ. ಆ ಪ್ರಯತ್ನದ ಒಂದು ಭಾಗವಾಗಿ ಕರ್ನಾಟಕದ ಕೆಳದಿ, ಕಿತ್ತೂರು, ಸುಗಟೂರು, ಬಿಳಗಿ, ಕಳಲೆ, ಹಾಲೇರಿ, ಗೆಜ್ಜಲಗಟ್ಟೆ, ಮಾನ್ವಿ, ಕೆಂಚನಗುಡ್ಡ, ಬೆಳವಡಿ, ಸಿರಸಂಗಿ, ಕುರುಗೋಡು ಮುಂತಾದ ಅರಸುಮನೆತನಗಳ ಸಾರ್ವಭೌಮತ್ವದಲ್ಲಿ ರಾಣಿಯರ ಕೊಡುಗೆಯನ್ನು ನಿರೂಪಿಸುವ ಮಹತ್ವದ ಅಂಶ ಈ ಮಹಾಪ್ರಬಂಧದ್ದಾಗಿದೆ.

ಒಂದು ಅಧ್ಯಯನ ಪ್ರಧಾನ ಆಕರ ಮತ್ತು ಪ್ರಾಸಂಗಿಕ ಆಕರಗಳ ನೆಲೆಯಲ್ಲಿ ಬಿಚ್ಚಿಕೊಳ್ಳುತ್ತದೆ. ಕರ್ನಾಟಕದ ಶಾಸನಗಳು, ಗುಡಿಗುಂಡಾರಗಳು, ಪ್ರಮುಖ ಕಾವ್ಯಗಳು, ಆಕರಗಳಾದಂತೆ, ಜನರ ನಂಬಿಕೆ, ಐತಿಹ್ಯ ಆಚರಣೆ, ಸಂಪ್ರದಾಯಗಳು ಪ್ರಾಸಂಗಿಕವಾದ ಸ್ಥಾನವನ್ನು ಪ್ರತಿನಿಧಿಸುತ್ತವೆ. ಈ ಹಿನ್ನೆಲೆಯಲ್ಲಿ ಶಾಸನೋಕ್ತ ಮತ್ತು ಕಾವ್ಯೋಕ್ತ ಕೆಲವು ರಾಣಿಯರ ಚರಿತ್ರೆ ನಿರೂಪಿತವಾಗಿದೆ. ಅದೇ ರೀತಿ ಕಿತ್ತೂರು ದೇಸಗತಿಗಳ ಕುರಿತ ಲಾವಣಿ ಸಾಹಿತ್ಯದಂಥ ಮಾಹಿತಿಗಳನ್ನು ಬಳಸಿಕೊಂಡು ಚರಿತ್ರೆಯ ನಿರ್ಮಾಣದಲ್ಲಿ ಕಂಠಸ್ಥ ಇತಿಹಾಸದ ಮಹತ್ವವನ್ನು ಸಿದ್ಧಿಸಿಕೊಳ್ಳುವ ಪ್ರಯತ್ನವಾಗಿ ಈ ಅಧ್ಯಯನ ಇನ್ನೂ ವಿಸ್ತಾರಣೆಗೊಂಡಿರುವುದು ಗಮನಿಸಬೇಕಾದ ಸಂಗತಿ. ಒಟ್ಟಿನಲ್ಲಿ ಕರ್ನಾಟಕ ಇತಿಹಾಸದಲ್ಲಿ ರಾಜಸತ್ತೆ ಮತಸತ್ತೆ ಹಾಗೂ ಪುರುಷಸತ್ತೆಗಳ ಸಾಮಾಜಿಕ ನಿಯಂತ್ರಣದಲ್ಲಿ ಮಹಿಳಾಸತ್ತೆಯ ಸ್ಥಾನಮಾನವನ್ನು ಚಾರಿತ್ರಿಕವಾಗಿ ಕಟ್ಟಿಕೊಡುವ ಮತ್ತು ಆ ಮೂಲಕ ಅಲಕ್ಷಿತ ಸಮುದಾಯವೊಂದನ್ನು(ಸ್ತ್ರೀ ಸಮುದಾಯ) ಮುಖ್ಯವಾಹಿನಿಯ ಭಾಗವಾಗಿ ಗುರುತಿಸುವ ಪ್ರಯತ್ನದಿಂದಾಗಿ ಈ ಅಧ್ಯಯನ ಮಹತ್ವವೆನಿಸಿದೆ.

### ೧.೩. ಅಧ್ಯಯನದ ವೈಧಾನಿಕತೆ

ಈಗಾಗಲೇ ಅರಸುಮನೆತನಗಳನ್ನು ಕುರಿತು ಹಲವಾರು ಅಧ್ಯಯನಗಳು ನಡೆದಿವೆ. ಆದರೆ ರಾಣಿಯರ ಕುರಿತಾಗಿ ಸತಿಪದ್ಧತಿ, ಸ್ತ್ರೀಸಮಾಜದ ಹೆಸರಿನಲ್ಲಿ ಅಧ್ಯಯನಗಳು ಅಲ್ಪ ಪ್ರಮಾಣದಲ್ಲಿ ನಡೆದಿವೆ. ಅದರಲ್ಲೂ ಆಕರಶೋಧ ಹಂತದ ಅಧ್ಯಯನಗಳು ನಡೆದಿರುವುದೆ ಹೆಚ್ಚು. ಆದರೆ ಆಕರಗಳನ್ನು ಬಳಸಿಕೊಳ್ಳುತ್ತಾ, ಅವುಗಳ ವ್ಯಾಖ್ಯಾನವನ್ನು ಮತ್ತು ಆಕರಗಳ ಹಿಂದೆ ಹುದುಗಿರುವ ಕಾರಣಸತ್ಯವನ್ನು ವಿಮರ್ಶಿಸುವ ವಿಧಾನವನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಉದಾಹರಣೆಗೆ ದತ್ತುಮಕ್ಕಳಿಗೆ ಹಕ್ಕಿಲ್ಲವೆಂಬ ನೆಪದಲ್ಲಿ ಕಿತ್ತೂರು ಚೆನ್ನಮ್ಮ ಇಂಗ್ಲಿಷರ ವಿರುದ್ಧ ಹೋರಾಟ ಮಾಡಿದ್ದು ಜಗತ್ಪ್ರಸಿದ್ಧವಾಯಿತು. ಆದರೆ ತಲ್ಲೂರ ದೇಸಗತಿಯನ್ನು ಬಳಸಿಕೊಂಡು ಮಲ್ಲಸರ್ಜನನ್ನು ಸೆರಮನೆಯಿಂದ ಬಿಡಿಸುವ ಕಿತ್ತೂರು ರುದ್ರಮ್ಮನ ವೀರಚರಿತ್ರೆಯ ಜೊತೆಗೆ ಪತಿಯ ಬಿಡುಗಡೆಗಾಗಿ 'ಸೋಮವಾರ ವ್ರತ' ಆಚರಿಸಿದ ಧಾರ್ಮಿಕ ಚರಿತ್ರೆಯನ್ನು ಪರಿಭಾವಿಸುವುದರ ಮೂಲಕ ಚೆನ್ನಮ್ಮನಿಗಿಂತ ರುದ್ರಮ್ಮ ಒಂದು ಕೈ ಮಿಗಿಲೆಂಬುದನ್ನು ಯಾವ ಚರಿತ್ರೆಕಾರರೂ ಗುರುತಿಸಲಿಲ್ಲ. ಹೀಗೆ ಆಕರಗಳನ್ನು ವ್ಯಾಖ್ಯಾನಿಸುವ, ವಿಮರ್ಶಿಸುವ ಮತ್ತು ಆಕರಗಳ ಮೌಲ್ಯಮಾಪನ ಮಾಡುವ ವೈಧಾನಿಕತೆಯನ್ನು ಈ ಅಧ್ಯಯನದಲ್ಲಿ ಅನುಸರಿಸಲಾಗಿದೆ.

ಕರ್ನಾಟಕ ಲಿಂಗಾಯತ ರಾಣಿಯರ ಸಾಂಸ್ಕೃತಿಕ ಅಧ್ಯಯನವನ್ನು ಮಾಡುವುದು ಈ ಮಹಾಪ್ರಬಂಧದ ಪ್ರಮೇಯಗಳಲ್ಲಿ ಒಂದು. ಸಮೂಹ ಸಮ್ಮತ ಜೀವನಪದ್ಧತಿಯಾಗಿರುವ ಸಂಸ್ಕೃತಿಯ ಶೋಧ ಕರ್ನಾಟಕದಂಥ ಬಹುಸಂಸ್ಕೃತಿ ನೆಲದಲ್ಲಿ ವಿಶಿಷ್ಟವಾಗಿರುವಂಥದ್ದು. ಶ್ರೇಣೀಕೃತ ಸಮೂಹಜೀವನ ಕೇಂದ್ರಗಳಾದ ಅರಮನೆಗಳು ರಾಣಿಯರ ರಾಜಕೀಯ, ಧಾರ್ಮಿಕ, ಸಾಹಿತ್ಯಕ ಮತ್ತು ಸಾಮಾಜಿಕ ಜೀವನವನ್ನು ಮಾನ್ಯ ಮಾಡಿದ ರೀತಿಯನ್ನು ಶಾಸನಗಳ ಮೂಲಕ, ಕಾವ್ಯ ಪುರಾಣಗಳ ಮೂಲಕ ಮತ್ತು ಐತಿಹ್ಯ, ಆಚರಣೆ, ನಂಬಿಕೆ, ಸ್ಮಾರಕಗಳ ಮೂಲಕ ನಿರ್ವಚಿಸುವ ಪ್ರಯತ್ನ ಮಾಡಲಾಗಿದೆ. ಹೀಗೆ ಮಾಡುವಾಗ ಬಹುರೂಪದ ಆಕರಗಳನ್ನು ಪ್ರಸ್ತುತ ಸಂದರ್ಭದಲ್ಲಿ ಅರ್ಥೈಸುವ ವಿಧಾನವನ್ನು ಈ ಅಧ್ಯಯನ ಒಳಗೊಂಡಿದೆ. ಉದಾಹರಣೆಗೆ ವಾರಸುದಾರರು ಇಲ್ಲದಾದಾಗ ದತ್ತು ಸ್ವೀಕಾರದಿಂದ ತಮ್ಮ ರಾಜಕೀಯ ಪರಂಪರೆ ಮುಂದುವರಿಯ ಬೇಕು ಎಂಬ ಮಹತ್ವಾಕಾಂಕ್ಷೆಯ ಮನೋಧರ್ಮದ ಪ್ರವೃತ್ತಿಯನ್ನು ಇಂದಿನ ದಿನಮಾನಗಳಲ್ಲೂ ಕಾಣಲು ಸಾಧ್ಯವಿದೆ. ಹೀಗಾಗಿ ಅಧಿಕಾರ ಎನ್ನುವುದು ಅರಮನೆಯ ಮಟ್ಟದಲ್ಲಿ ಮಾತ್ರ ಇರಬೇಕೆಂದೇನಿಲ್ಲ. ಅದು ಶ್ರೀಸಾಮಾನ್ಯರ ಮನೆತನದ ಯಜಮಾನಿಕೆಗೂ ಅನ್ವಯಿಸುವಂಥದ್ದು. ಹೀಗೆ ಪ್ರಾಚೀನ ಚರಿತ್ರೆ ಆಧುನಿಕ ಕಾಲಮಾನದ ಬದುಕಿನಲ್ಲಿ ಹೇಗೆ ಪ್ರೇರಣೆ ಮತ್ತು ಪ್ರಭಾವ ಬೀರಿದೆ ಎಂಬುದನ್ನು ಚದುರಿ ಹೋಗಿರುವ ಬಿಡಿ ಬಿಡಿ ಮಾಹಿತಿಗಳ ಸಹಾಯದಿಂದ ಅಂತರ್ ಸಂಬಂಧವನ್ನು ನಿರೂಪಿಸುವ ಚಾರಿತ್ರಿಕ ವಿಧಾನವನ್ನು ಈ ಅಧ್ಯಯನ ಒಳಗೊಂಡಿದೆ.

ಮೂಲ ಆಕರ ಮತ್ತು ಪೂರಕ ಆಕರಗಳ ಜೊತೆಗೆ ಈ ಅಧ್ಯಯನ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಕಿತ್ತೂರು, ಕೆಳದಿ, ಬಿಳಗಿ, ಕಳಲೆ, ಬೆಳವಡಿ, ಧಾರವಾಡ, ಯಾದವಾಡ, ಸಿರಸಂಗಿ ಮುಂತಾದ ಸ್ಥಳಗಳಲ್ಲಿ ರಾಣಿಯರ ಕುರಿತಾದ ಅವಶೇಷಗಳು, ಗದ್ದುಗೆಗಳು ಇತ್ಯಾದಿ ಮಾಹಿತಿಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ಚದುರಿ ಹೋಗಿದ್ದ ಕರ್ನಾಟಕ ಲಿಂಗಾಯತ ರಾಣಿಯರ ಬದುಕಿನ ಸಿದ್ಧಾಂತವನ್ನು ಬಹುಮೂಲ ಆಕರ ಸಂಗ್ರಹ ಮತ್ತು ಅವುಗಳ ವಿಶ್ಲೇಷಣಾತ್ಮಕ ಅಧ್ಯಯನವನ್ನು ಅನುಸರಿಸಲಾಗಿದೆ.

### ೧.೪. ಅಧ್ಯಯನದ ವ್ಯಾಪ್ತಿ

ಅಧ್ಯಯನದ ವ್ಯಾಪ್ತಿಯೆಂದರೆ ಅಧ್ಯಯನದ ಚೌಕಟ್ಟು ಎಂದರ್ಥ. ಯಾವುದೇ ಅಧ್ಯಯನ ಸೈದ್ಧಾಂತಿಕವಾಗಬೇಕಾದರೆ ಅದಕ್ಕೆ ಒಂದು ನಿರ್ದಿಷ್ಟವಾದ ಚೌಕಟ್ಟು ಮುಖ್ಯ. ಇದರಿಂದ ನಿಶ್ಚಿತ ಫಲಿತಗಳನ್ನು ಕಂಡುಕೊಳ್ಳಲು ಸಾಧ್ಯ. ಪ್ರಸ್ತುತ ಅಧ್ಯಯನವು ಕರ್ನಾಟಕ ಲಿಂಗಾಯತ ರಾಣಿಯರನ್ನು ಕುರಿತು ಸಾಂಸ್ಕೃತಿಕವಾಗಿ ನಿರ್ವಚಿಸುವುದಾಗಿದೆ. ಲಿಂಗಾಯತ ರಾಜಮನೆತನಗಳಲ್ಲದೆ ಜೈನ, ವೈಷ್ಣವ ಮತ್ತು ಇತರ ಸಮುದಾಯಗಳ ಪಾಳೇಗಾರರು ಕರ್ನಾಟಕವನ್ನು ಪ್ರತಿನಿಧಿಸಿದ್ದಾರೆ. ಅವರ ಸಾಧನೆಯೂ ಇತಿಹಾಸದ ದೃಷ್ಟಿಯಿಂದ ಕಡಿಮೆಯೇನಲ್ಲ. ಹೀಗಾಗಿ ನಮ್ಮ ಅಧ್ಯಯನವನ್ನು ಲಿಂಗಾಯತ ರಾಣಿಯರಿಗೆ ಮಾತ್ರ ಸೀಮಿತಗೊಳಿಸಿಕೊಂಡಿದ್ದೇವೆ. ಕರ್ನಾಟಕೇತರ ಪ್ರಾಂತ್ಯಗಳಲ್ಲಿ ಲಿಂಗಾಯತ ಧರ್ಮ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ನಿದರ್ಶನಕ್ಕೆ ಆಂಧ್ರಪ್ರದೇಶ, ಮಹಾರಾಷ್ಟ್ರ ತಮಿಳುನಾಡು ಪ್ರಾಂತಗಳಲ್ಲಿ ಈ ಧರ್ಮದ ಅಸ್ತಿತ್ವವನ್ನು ವಿದ್ವಾಂಸರು ಗುರುತಿಸಿದ್ದಾರೆ. ಹೀಗಾಗಿ ಅಲ್ಲಿಯ ಅರಸುಮನೆತನಗಳ ಪೋಷಣೆ, ಪ್ರಸಾರ, ಲಿಂಗಾಯತ ಧರ್ಮಕ್ಕೆ ದೊರತಿರಬಹುದು. ಅಧ್ಯಯನದ ಅತಿವ್ಯಾಪ್ತಿ ಮತ್ತು ಅವ್ಯಾಪ್ತಿ ದೋಷವನ್ನು ನಿವಾರಿಸಿಕೊಳ್ಳುವ ಉದ್ದೇಶದಿಂದ 'ಕರ್ನಾಟಕ' ಮತ್ತು 'ಲಿಂಗಾಯತ' ಎಂಬ ಭೌಗೋಳಿಕ ಮತ್ತು ಸಾಮುದಾಯಿಕ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ.

ಲಿಂಗಾಯತ ರಾಣಿಯರು ಎಂಬ ಅಧ್ಯಯನದ ಶೀರ್ಷಿಕೆಯಲ್ಲಿ ಪರಿಭಾವಿಸಿಕೊಂಡ ಕ್ರಮ ಅಧ್ಯಯನದ ವ್ಯಾಪ್ತಿಗಿಂತಲೂ ಅದರ ಅನನ್ಯತೆಯ ಪ್ರಶ್ನೆಯನ್ನು ಎತ್ತಿಹಿಡಿಯುತ್ತದೆ. 'ಲಿಂಗಾಯತ' ಪದದ ಸ್ಥಾನದಲ್ಲಿ 'ವೀರಶೈವ' ಪದವನ್ನು ಬಳಸಬಹುದು. ಹಾಗೆ ಬಳಸಿದರೆ ಆಗುವ ಬಾಧಕಗಳೇನು? ಎಂಬ ಪ್ರಶ್ನೆಯೂ ಕಾಡುವುದು ಸಹಜ. ಇತ್ತೀಚಿನ ಅಧ್ಯಯನಗಳಿಂದ ಲಿಂಗಾಯತ ಬೇರೆ, ವೀರಶೈವ ಬೇರೆ ಎಂಬ ನಿಲುವುಗಳಿಗೆ ಪ್ರಬಲವಾದ ಆಕರಗಳು ಲಭ್ಯವಾಗಿವೆ. 'ಲಿಂಗಾಯತ' ಎನ್ನುವುದು ಒಂದು ಜಾತಿಯಲ್ಲ, ಧರ್ಮ. ಅದೊಂದು ಜೀವನ ಪದ್ಧತಿ. ಹೀಗಾಗಿ ಅದೊಂದು ಜನಾಂಗವಾಗಿ ಉಳಿದಿಲ್ಲ. ಒಂದು ಸಮಾಜವಾಗಿ ಬೆಳೆದಿದೆ. ಈ ಧರ್ಮದ ಪ್ರಥಮ ಸಾಹಿತ್ಯಕ ದಾಖಲೆಗಳು ವಚನಗಳು, ವಚನಕಾರರ ಮೂಲ ಆಶಯ

ವರ್ಗ, ವರ್ಣ ಮತ್ತು ಲಿಂಗಬೇಧ ಇಲ್ಲದ ಸಮಾಜ ನಿರ್ಮಾಣ. ಅಂದರೆ ಆಲೋಚನಾ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಕ್ರಿಯಾ ಯೋಜನಾ ಸ್ವಾತಂತ್ರ್ಯ ಈ ಧರ್ಮದ ಸ್ಥಾಯಿ ಭಾವ. ಹಾಗಾಗಿ ಲಿಂಗಾಯತ ಎಂಬ ಪದಕ್ಕೆ ವಿಶಾಲವಾದ ಮತ್ತು ವ್ಯಾಪಕವಾದ ಅರ್ಥ ಪ್ರಾಪ್ತವಾಗಿದೆ. ಈ ಹಿಂದೆ ಬಳಸಿಕೊಂಡು ಬರುತ್ತಿದ್ದ 'ವೀರಶೈವ' ಎಂಬ ಪದ ಮತ ಅಲ್ಲ, ವ್ರತ ಎಂಬ ಅಭಿಪ್ರಾಯ ಇಂದು ಗಟ್ಟಿಗೊಂಡಿದೆ. ಭೇದ(ದ್ವೈತ) ಸಂಸ್ಕೃತಿಯನ್ನು ಹುಟ್ಟು ಹಾಕುವ, ಪರಧರ್ಮವನ್ನು, ಪರವಿಚಾರಗಳನ್ನು, ಪರಧರ್ಮೀಯರ ಸ್ಮಾರಕಗಳನ್ನು ನಾಶಪಡಿಸುವ ಶೈವ ಸಂಸ್ಕೃತಿಯ ವಿಶಿಷ್ಟ ಆಚರಣೆ ವೀರಶೈವ. ಶರಣೆ ಅಮ್ಮುಗೆ ರಾಯಮ್ಮ ನಿತ್ಯ ಪಾದೋದಕ ಪ್ರಸಾದ ಸೇವನೆಯಿಲ್ಲ ಇದೇತರ ವೀರಶೈವ ವ್ರತ ಎಂದು ಪ್ರಶ್ನಿಸುವಲ್ಲಿ 'ವೀರಶೈವ' ಎಂಬುದು 'ವ್ರತ' ಎಂಬ ಸ್ಪಷ್ಟ ಅಭಿಪ್ರಾಯ ತಿಳಿದುಬರುತ್ತದೆ. ಚನ್ನಬಸವಣ್ಣ 'ಉಣ್ಣಲು ಉಡಲು ಶಿವಾಚಾರ, ಕೊಡಲು ಕೊಂಬಲು ಕುಲಾಚಾರ' ಇದೇತರ ವೀರಶೈವಚಾರ ಎನ್ನುವಲ್ಲಿಯೂ ಕೂಡ ಇದೊಂದು ಆಚರಣೆ ಮತ್ತು ಜಾತಿ ವಿಷಯದಲ್ಲಿ ಭೇದ ಸಂಸ್ಕೃತಿಯನ್ನು ಹುಟ್ಟು ಹಾಕಿದ ವ್ರತವೆಂಬುದನ್ನು ಒತ್ತಿ ಹೇಳಿದ್ದಾರೆ. ಹೀಗಾಗಿ ವ್ರತವಾಗಿದ್ದ ವೀರಶೈವ ಮತವಾಗಿ ಜನಮನ್ನಣೆ ಪಡೆಯಲಿಲ್ಲ. ಕಾರಣ ನಮ್ಮ ಅಧ್ಯಯನದ ಶೀರ್ಷಿಕೆಯಲ್ಲಿ 'ಲಿಂಗಾಯತ' ಪದ ಬಳಸಿದ್ದೇವೆ. ಇನ್ನು ರಾಣಿಯರು ಎಂದರೆ ಯಾರು? ಸಾಮಾನ್ಯವಾಗಿ ರಾಜನ ಹೆಂಡತಿ ರಾಣಿ ಎನ್ನುತ್ತೇವೆ. ಹಾಗಾದರೆ ರಾಜರು ಎಂದರೆ ಯಾರು? ಚಕ್ರವರ್ತಿಗಳು, ಸಾಮಂತರು, ಮಾಂಡಲಿಕರು, ಪಾಳೇಗಾರರು, ದೇಸಗತಿಗಳು ಹೀಗೆ ವಿಸ್ತಾರವಾದ ಆಡಳಿತ ವಿಭಾಗಗಳಿಂದ ಸಣ್ಣ ಸಣ್ಣ ಪ್ರಾಂತಗಳಿಗೆ ಈ ವಿಭಿನ್ನ ಹೆಸರುಗಳು ಅನ್ವಯವಾಗಿವೆ. ಹೀಗಾಗಿ ಒಂದು ಪ್ರಾಂತದ ಒಡೆಯ ರಾಜನೆಂದೂ ಆ ರಾಜನ ಒಡತಿ ರಾಣಿಯೆಂದೂ ಇಲ್ಲಿ ಪರಿಭಾವಿಸಲಾಗಿದೆ. ಹೀಗಾಗಿ ಚಕ್ರವರ್ತಿಗಳಿಂದ ಹಿಡಿದು, ಪಾಳೇಗಾರರ ವ್ಯಾಪ್ತಿಯ ಮಹಿಳೆಯರನ್ನು 'ರಾಣಿಯ'ರೆಂದು ಅರ್ಥೈಸಲಾಗಿದೆ. ಇದು ಈ ಅಧ್ಯಯನದ ವ್ಯಾಪ್ತಿ.

### ೧.೫. ಅಧ್ಯಯನದ ಸ್ವರೂಪ

'ಕರ್ನಾಟಕ ಲಿಂಗಾಯತ ರಾಣಿಯರು: ಒಂದು ಅಧ್ಯಯನ' ಎಂಬುದು ಲಿಂಗಾಯತ ರಾಣಿಯರ ರಾಜಕೀಯ, ಧಾರ್ಮಿಕ, ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಬದುಕನ್ನು ಚಿತ್ರಿಸುವ ಅಧ್ಯಯನವಾಗಿದೆ.

ಪ್ರಸ್ತುತ ಮಹಾಪ್ರಬಂಧವು ಐದು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯ ಮಹಾಪ್ರಬಂಧದ ಉದ್ದೇಶ, ಮಹತ್ವ, ವೈಧಾನಿಕತೆ, ವ್ಯಾಪ್ತಿ ಮತ್ತು ಸ್ವರೂಪ ಕುರಿತು ತಾತ್ವಿಕವಾದ ನಿಲುವುಗಳನ್ನು ಸ್ಪಷ್ಟಪಡಿಸುತ್ತದೆ. ಇಲ್ಲಿ ಅಧ್ಯಯನದ ಉದ್ದೇಶ, ವೈಧಾನಿಕತೆ, ವ್ಯಾಪ್ತಿ, ಸ್ವರೂಪ ಕುರಿತು ಒಂದು ವಿಮರ್ಶಾತ್ಮಕವಾದ ಪ್ರವೇಶವನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಲಿಂಗಾಯತ ರಾಣಿಯರು: ಆಕರಗಳು ಕುರಿತು ಕನ್ನಡ ಕಾವ್ಯಸಾಹಿತ್ಯ, ಶಾಸನ, ಕೈಫಿಯತ್ತು, ಪತ್ರಗಳು, ನಾಮೆಗಳು ಮುಂತಾದ ಪ್ರವಾಸಿಗರ ವರದಿಗಳಂಥ ದಾಖಲು ಸಾಹಿತ್ಯವನ್ನು ಮತ್ತು ಸ್ಮಾರಕಗಳನ್ನು ಅವಲೋಕಿಸಿ ಲಿಂಗಾಯತ ರಾಣಿಯರ ಬಗೆಗೆ ಕಟ್ಟಿಕೊಡಬಹುದಾದ ಆಕರಗಳ ಚಾರಿತ್ರಿಕತೆಯನ್ನು ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ರಾಣಿಯರು: ಅಧ್ಯಯನದ ಸೈದ್ಧಾಂತಿಕತೆ ಮತ್ತು ಸಾಂಸ್ಕೃತಿಕ ನಿರ್ವಚನ ಕುರಿತಾಗಿದೆ. ಅಧ್ಯಯನ ಸೈದ್ಧಾಂತಿಕತೆಗೆ ಸಂಬಂಧಿಸಿದಂತೆ ಮತ್ತು ಚರಿತ್ರೆಯ ನಿರ್ಮಾಣದಲ್ಲಿ ಸ್ತ್ರೀವಾದಿ ಚಿಂತನೆಗಳು ಪಡೆದ ಸ್ಥಾನವನ್ನು ನಿರ್ವಚಿಸುವುದರ ಮೂಲಕ ಇತಿಹಾಸದಲ್ಲಿ ಮೌನವಾಗಿ ಉಳಿದಿರುವ ಮಹಿಳಾ ಚರಿತ್ರೆಯನ್ನು ರಾಣಿಯರ ರಾಜ್ಯಾಧಿಕಾರದ ಸಂದರ್ಭ, ಯುದ್ಧನೀತಿ, ಸಾಮಾಜಿಕ ಕಾರ್ಯಗಳ ಹಿನ್ನೆಲೆಯಲ್ಲಿ ಅವರ ಬದುಕಿನ ಸೈದ್ಧಾಂತಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ನಿರ್ವಚಿಸಲಾಗಿದೆ.

ನಾಲ್ಕನೆಯ ಅಧ್ಯಾಯ ಲಿಂಗಾಯತ ರಾಣಿಯರು: ಸಾಂಸ್ಕೃತಿಕ ಅಧ್ಯಯನ ಎಂಬುದಾಗಿದೆ. ಇಲ್ಲಿ ರಾಣಿಯರ ರಾಜಕೀಯ, ಸಾಹಿತ್ಯಕ, ಧಾರ್ಮಿಕ ಮತ್ತು ಸಾಮಾಜಿಕ ಸಾಧನೆಗಳನ್ನು ಕಟ್ಟಿಕೊಡುವುದಾಗಿದೆ. ಬಹುಶಃ ಉತ್ತರದ ಕಿತ್ತೂರ ಚೆನ್ನಮ್ಮನ ಕಿತ್ತೂರ ಕಾಳಗ, ಅತ್ತ ದಕ್ಷಿಣದ ಟಿಪ್ಪುಸುಲ್ತಾನನ ಮೈಸೂರು ಕದನಗಳು ಇಂಗ್ಲಿಷರ ವಿರುದ್ಧ ಸಿಡಿದು ನಿಂತ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಹೋರಾಟಗಳೆನಿಸಿವೆ. ಅಂದರೆ ಗಾಂಧಿಯುಗಕ್ಕೂ ಪೂರ್ವದಲ್ಲಿ ಕರ್ನಾಟಕ ಲಿಂಗಾಯತ ರಾಣಿಯರ ಯುಗ ಸ್ವತಂತ್ರ ಚಳುವಳಿಯ ನೇತೃತ್ವವನ್ನು ವಹಿಸಿರುವುದು ರಾಣಿಯರ ಸಾಂಸ್ಕೃತಿಕ ಅನನ್ಯತೆಗೆ ಪರಮಾವಧಿ ನಿದರ್ಶನವೆನಿಸಿದೆ. ಅಂಥ ಹಲವು ಸಾಧನೆಗಳನ್ನು ಈ ಅಧ್ಯಾಯದಲ್ಲಿ ನಿರ್ವಚಿಸಲಾಗಿದೆ.

ಕೊನೆಯ ಅಧ್ಯಾಯ ಸಮಾರೋಪ. ಕರ್ನಾಟಕ ಲಿಂಗಾಯತ ರಾಣಿಯರ ಒಟ್ಟು ಸಾಧನೆಯ ಫಲಿತಗಳನ್ನು ಅಭಿವ್ಯಕ್ತಿಸುವ ಅಧ್ಯಾಯವಾಗಿದೆ. ಅನುಬಂಧಗಳಲ್ಲಿ ಮಹಾಪ್ರಬಂಧಕ್ಕೆ ಪೂರಕವಾದ ರಾಣಿಯರ ಅವಶೇಷಗಳ ಛಾಯಾಚಿತ್ರಣ, ಅಧ್ಯಯನಕ್ಕೆ ಬಳಸಿಕೊಂಡ ಪರಾಮರ್ಶನ ಗ್ರಂಥಗಳನ್ನು ನೀಡಲಾಗಿದೆ.

# ಅಧ್ಯಾಯ ಎರಡು

# ಲಿಂಗಾಯತ ರಾಣಿಯರು: ಆಕರಗಳು

೨.೧. ಕಾವ್ಯ ಸಾಹಿತ್ಯ

೨.೨. ದಾಖಲು ಸಾಹಿತ್ಯ

೨.೩. ಪ್ರವಾಸಿಗರ ವರದಿಗಳು

೨.೪. ಸ್ಮಾರಕಗಳು

## ಅಧ್ಯಾಯ ಎರಡು

# ಲಿಂಗಾಯತ ರಾಣಿಯರು: ಆಕರಗಳು

ಯಾವುದೇ ಅಧ್ಯಯನಕ್ಕೆ ಆಕರಗಳು ಮೂಲದ್ರವ್ಯ. ಒಂದು ವಿಷಯದ ದಾಖಲೀಕರಣಕ್ಕೆ ಆಕರಗಳಿಗೆ ಪ್ರಥಮ ಪ್ರಾಶಸ್ತ್ಯ. ಈ ಹಿನ್ನೆಲೆಯಲ್ಲಿ ಕರ್ನಾಟಕ ಲಿಂಗಾಯತ ರಾಣಿಯರ ಆಕರಗಳ ಪ್ರಮಾಣ ಮತ್ತು ಪರಿಣಾಮವನ್ನು ಕುರಿತು ಚರ್ಚಿಸುವುದು ಅಗತ್ಯವಾಗಿದೆ. ಒಂದು ಕಾಲಕ್ಕೆ ಕರ್ನಾಟಕ ಅನೇಕ ಅರಸುಮನೆತನಗಳನ್ನು ಕಂಡಂಥ ನಾಡು. ಹೀಗಾಗಿ ಅವರು ಹಾಕಿಸಿದ ಶಾಸನಗಳು, ಬರೆಸಿದ ಕಾವ್ಯಗಳು, ನಿರ್ಮಿಸಿದ ಗುಡಿ–ಗುಂಡಾರಗಳು, ಸ್ಥಾಪಿಸಿದ ಸ್ಮಾರಕಗಳು ಹೇರಳವಾಗಿವೆ. ಅವುಗಳನ್ನು ಕುರಿತು ಸಾಂಸ್ಕೃತಿಕ ಅಧ್ಯಯನಗಳನ್ನು ಮಾಡಲಾಗಿದೆ. ಇಷ್ಟು ವ್ಯಾಪಕ ಆಕರಗಳಲ್ಲಿ ರಾಣಿಯರಿಗೆ ಸಂಬಂಧಿಸಿದ, ಅದರಲ್ಲೂ ಲಿಂಗಾಯತ ರಾಣಿಯರಿಗೆ ಸಂಬಂಧಿಸಿದ ಆಕರಗಳ ಗಾತ್ರ ಮತ್ತು ಮಹತ್ವವನ್ನು ಸಮೀಕ್ಷಿಸಿದರೆ ಹೇಳಿಕೊಳ್ಳುವಷ್ಟು ಅಧ್ಯಯನ ವ್ಯಾಪಕವಾಗಿ ನಡೆದಿಲ್ಲವೆಂದೇ ಹೇಳಬಹುದು. ಆದರೂ ಸಿಕ್ಕ ಆಕರಗಳ ನೆರವಿನೊಂದಿಗೆ ಕರ್ನಾಟಕ ಲಿಂಗಾಯತ ರಾಣಿಯರು ಆಕರಗಳಲ್ಲಿ ದಾಖಲಿಸಿಕೊಂಡಿರುವುದನ್ನು ಕಟ್ಟಿಕೊಡುವುದು ಅಷ್ಟೇ ಅಗತ್ಯವಾಗಿದೆ.

ಕರ್ನಾಟಕ ಲಿಂಗಾಯತ ರಾಣಿಯರ ಆಕರಗಳನ್ನು ಅಧ್ಯಯನದ ಅನುಕೂಲದ ದೃಷ್ಟಿಯಿಂದ ಮುಂದಿನ ಪುಟದಲ್ಲಿ ರೇಖಿಸಲಾಗಿದೆ.

### ೨.೧. ಕಾವ್ಯಸಾಹಿತ್ಯ

ನಮ್ಮ ನಾಡಿನ ಚರಿತ್ರೆಯನ್ನು ನಿರೂಪಿಸುವಲ್ಲಿ ಕಾವ್ಯ ಸಾಹಿತ್ಯಕ್ಕೆ ಮಹತ್ವದ ಸ್ಥಾನವಿದೆ. ಪಂಪಭಾರತ, ಗದಾಯುದ್ಧ, ಕುಮಾರರಾಮ ಸಾಂಗತ್ಯ, ಕೆಳದಿನೃಪವಿಜಯ ಇಂಥ ಕಾವ್ಯಗಳಲ್ಲದೇ ಶಿವಶರಣರ ಚರಿತ್ರೆಯನ್ನು ಒಳಗೊಂಡ ರಗಳೆಗಳು, ಧಾರ್ಮಿಕ ಕೃತಿಗಳು ತಮ್ಮ ಕಥಾ ಹಂದರ ದಲ್ಲಿ ಚಾರಿತ್ರಿಕ ಸಂಗತಿಗಳನ್ನು ಹುದುಗಿಸಿಕೊಂಡಿವೆ. ಇಂಥ ಕೃತಿಗಳಲ್ಲಿ ಕರ್ನಾಟಕ ರಾಣಿಯರ ಬದುಕಿನ ರೀತಿಗಳು ಕಂಡುಬರುತ್ತವೆ. ನಮ್ಮಲ್ಲಿ ರಾಜಸಮ್ಮಿತಾ ಕಾವ್ಯಗಳು ಹೇರಳ, ರಾಣಿಸಮ್ಮಿತಾ


ಆಕರಗಳು
೧. ಕಾವ್ಯಸಾಹಿತ್ಯ
೨. ದಾಖಲುಸಾಹಿತ್ಯ
ಶಿಷ್ಟಸಾಹಿತ್ಯ
ಜನಪದಸಾಹಿತ್ಯ
ಶಾಸನಗಳು
ಪ್ರವಾಸಿಗರ ವರದಿಗಳು
ಕೈಫಿಯತ್ತುಗಳು
ನಾಮೆಗಳು
ಪತ್ರಗಳು
ಸ್ಮಾರಕಗಳು
ಐತಿಹ್ಯಗಳು
ಕಥೆಗಳು
ಲಾವಣಿಗಳು
ವದಂತಿಗಳು

ಕಾವ್ಯಗಳು ವಿರಳ. ಹೀಗಿದ್ದೂ ಲಿಂಗಾಯತ ರಾಣಿಯರನ್ನು ಕುರಿತು ಶಿಷ್ಟ ಸಾಹಿತ್ಯ, ಜನಪದ ಸಾಹಿತ್ಯದ ಕಾವ್ಯಸಾಮಗ್ರಿಗಳು ಕಥೆ, ಐತಿಹ್ಯ ಹಾಗೂ ವದಂತಿಗಳ ರೂಪದಲ್ಲಿ ದೊರೆಯುತ್ತವೆ.

ವಿಶೇಷವಾಗಿ ಕಾವ್ಯ ಸಾಹಿತ್ಯದಲ್ಲಿ ಭಾಷಾ ಸಾಮಗ್ರಿಗಳೆನಿಸುವ ಶಿಷ್ಟ ಸಾಹಿತ್ಯ ಕೃತಿಗಳು ದೊರೆಯುತ್ತಿದ್ದು ಅವುಗಳನ್ನು ಕಾವ್ಯ ಪುರಾಣಗಳ ನೆಲೆಯಲ್ಲಿ ಅಧ್ಯಯನ ಮಾಡುತ್ತಾ ಬಂದಿದ್ದೇವೆ. ಈ ಸಾಹಿತ್ಯದಲ್ಲಿ ಕರ್ನಾಟಕದ ಅರಸುಮನೆತನಗಳ ರಾಣಿಯರು ಚಿತ್ರಣಗೊಂಡ ಹಿನ್ನೆಲೆಯಲ್ಲಿ ಆಕರಗಳನ್ನು ಪರಿಭಾವಿಸುವುದು ಮತ್ತು ಪರಿಶೋಧಿಸುವುದು ಈ ಹೊತ್ತಿನ ಮಹಿಳಾ ಪ್ರತಿನಿಧೀಕರಣದ ದೃಷ್ಟಿಯಿಂದ ತುಂಬಾ ಅಗತ್ಯವೆನಿಸಿದೆ. ಈ ಆಕರ ಸಾಮಗ್ರಿಗಳನ್ನು ಬಳಸಿಕೊಂಡು ಕರ್ನಾಟಕ ಲಿಂಗಾಯತ ರಾಣಿಯರು ಇಟ್ಟ ಹೆಜ್ಜೆಯನ್ನು, ತೊಟ್ಟ ನಿಲುವುಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಸಮೀಕ್ಷಿಸಲಾಗಿದೆ.

### ೨.೧.೧. ಶಿಷ್ಟಸಾಹಿತ್ಯ

ಹನ್ನೆರಡನೇ ಶತಮಾನದಲ್ಲಿ ಆದರ್ಶಯುತವಾಗಿ ಬದುಕಿ ಬಾಳಿದ ಶಿವಶರಣರ ಕಥೆಯನ್ನು ರಗಳೆಗಳಲ್ಲಿ ಕಟ್ಟಿಕೊಟ್ಟು 'ರಗಳೆಯ ಕವಿಯೆಂದೇ' ಪ್ರಖ್ಯಾತನಾದ ಹರಿಹರನು 'ತೆಲುಗು ಜೊಮ್ಮಯ್ಯನ ರಗಳೆಗಳಲ್ಲಿ' ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಒಲುಮೆಯ ರಾಣಿಯಾದ ಲಕ್ಷ್ಮೀದೇವಿಯನ್ನು ಹೀಗೆ ಬಣ್ಣಿಸಲಾಗಿದೆ.

"ಇರುತ್ತ ಪೆರ್ಮಾಡಿರಾಯನೊಲುಮೆಯ ಕಾಂತೆ!
ಪರಮ ಶಿವಲಿಂಗಾರ್ಚನಾ ನಿರತೆ ಗುಣಶಾಂತೆ।
ತನಗೆ ಕುಮಾದೇವಿಯೆಂಬ ಪೆಸರೊಪ್ಪಿರಲ್।
ಮನಸಿಜಾರಿಯನಕ್ಕರಿಂದರ್ಚಿಸುತ್ತಿರಲ್।
ಜೊಮ್ಮಯ್ಯನೇಕನಿಷ್ಠೆಯ ನಚಲ ಬಲುಮುಮಂ।
ಜೊಮ್ಮಣ್ಣನೆಸೇವ ಶಿವಭಕ್ತಿಯುತ್ಸಾಹಮಂ
ಪುರಹರನ ಪರಮಪ್ರತಾಪ ದುರವಣೆಯುಮಂ
ಕೇಳ್ದು ಸಂತೋಷದಿಂ ಪರಮ ಹರುಷಂಗಳಂ
ತಾಳ್ದು ಹೊಸ ಹೊಸ ಪರಿಯ ವಸ್ತ್ರ ಸಂತತಿಗಳಂ
ಚಂದನಂ ಕರ್ಪೂರವಗಿಲು ಧೂಪಗಳಂ
ಮುಂದ್ಯೈಸಿ ಕಂಪಿಡುವ ಸಾಧು-ಕಸ್ತುರಿಗಳಂ
ಅಂದಂದು ಬಂದೆಸೆವ ಪೊಚ್ಚ ಹೊಸ ಪೂಗಳು"[೧]

ಈ ಕಾವ್ಯದಲ್ಲಿ ಆರನೇ ವಿಕ್ರಮಾದಿತ್ಯನನ್ನು ಪೆರ್ಮಾಡಿರಾಯ ಎನ್ನಲಾಗಿದೆ. ಅಲ್ಲದೆ ರಾಣಿ ಲಕ್ಷ್ಮೀದೇವಿಯ ಜಂಗಮನಿಷ್ಠೆಯನ್ನು ಹೀಗೆ ವಿವರಿಸಲಾಗಿದೆ.

"ಪೆರ್ಮಾಡಿರಾಯನ ಧರ್ಮಪತ್ನಿ ಲಿಂಗಾರ್ಚನಾನಿರತೆ, ಜಂಗಮಸ್ನೇಹಿ, ಸತ್ಯಭಕ್ತೆ ಲಕುಮಾದೇವಿ, ಶಿವನಿಂದೆ ವಿಪ್ರವಧೆ ನಿಮಿತ್ತ ವರಸಂ ಜೊಮ್ಮಣ್ಣಂಗೆ ಮುನಿದು ಕರೆಯಲ್ಕಳುವೆ ಕುಪಿತನಾಗಿರ್ಪನೆಂಬ ಕಠಿಣ ವಾರ್ತೆಯಂ ಕರ್ಣ ಪರಂಪರೆಯಿಂ ಕೇಳ್ದು ಹರಿಹರ ಹರನೇ ಬಲ್ಲಂ ಶಿವಭಕ್ತಂಗಳಿವಿಲ್ಲದ ಚಿಹ್ನಂ ಅಡ್ಡಮಾಗಲದು ಮುನ್ನೆಂದುಂ ಪೊಡಮಡದ ಜೊಮ್ಮಣ್ಣನಿಂದು ಪೊಡಮಡೆ ತನಗೆ ಪೊಡಮಟ್ಟನೆಂದರಸಂ ಮನ್ನಿಸುವನೆಂಬ ಬಗೆಯಿಂ ತನ್ನ ಪ್ರಾಣಲಿಂಗಮಂ ಸಿಂಗರಿಸಿ ಮಾಣಿಕ್ಯದ ಸಿಂಹಾಸನ ವೆರಸರಸನರಿಯದಂತೆ ಶಿವಭಕ್ತೆಯರು ಸಹಿತೆ ಲಕುಮಾದೇವಿ ಪಿಡಿದಿರ್ಪ ಸಮಯದೊಳು"[೨]

ಶಿವಶರಣೆಯಾದ ಸುಗ್ಗಲೆಯನ್ನು ಕುರಿತಾಗಿ ಹಂಪಿಯ ವಿರೂಪಾಕ್ಷಪಂಡಿತನ 'ಚೆನ್ನಬಸವ ಪುರಾಣ' 'ವೀರಶೈವ ಶರಣರ ಕಥೆಯ ಸಂಧಿ' ಎಂಬ ಸಂಧಿಯಲ್ಲಿ ಹಲವಾರು ಶಿವಶರಣರನ್ನು ಕುರಿತ ಕಥೆಗಳು ಉಲ್ಲೇಖಗೊಂಡಿವೆ. ಜಿನಭಕ್ತನಾದ ದೇಸಿಂಗಬಲ್ಲಾಳನ ರಾಣಿ ಸುಗ್ಗಲೆಯು ಶಿವಭಕ್ತೆಯಾಗಿ, ಜಿನನಾದ ಪತಿಯನ್ನು ಪರಿವರ್ತಿಸಿದ ಬಗೆ ಇಲ್ಲಿ ಚಿತ್ರಣಗೊಂಡಿದೆ.

"ಜಿನಭಕ್ತನೆನಿಸಿದ ದೇಸಿಂಗ ಬಲ್ಲಾಳನಾ ।
ತನ ಮಡದಿ ಸುಗ್ಗಲೆಯು ಶಿವಭಕ್ತೆ ತನ್ನ ಗುರು ।
ವೆನಿಪ ದೇವರ ದಾಸನಂ ಜಿನರ ಕೂಡೆ ವಾದಂಗೆಯ್ಯೆ ಪೆಟ್ಟಿಗೆಯೊಳಗೆ
ತೊನೆವ ಘಟಸರ್ಪನಂ ಚಂದ್ರಕಾಂತದ ಲಿಂಗ
ವನೆ ಮಾಡಿ ಗೆಲಿಸಿ ಜೈನರಿಗಾಜ್ಞೆಯಂ ಮಾಡಿ
ಜನಪತಿಯನಂದು ಶಿವಭಕ್ತನಂ ಮಾಡಿದಳದೇನೆಂಬನಚ್ಚರಿಯನು"[೩]

ಎಂಬ ವಿವರವಿದೆ. ಅಲ್ಲದೆ ಶರಣರ ವಿವಿಧ ಕಥೆಗಳ ಸಂದರ್ಭದಲ್ಲಿ ಸಾಂದರ್ಭಿಕವಾಗಿಯೂ ರಾಣಿ ಸುಗ್ಗಲೆಯನ್ನು ಸ್ಮರಿಸಿರುವ ಉದಾಹರಣೆಗಳು ನಮ್ಮ ಕಾವ್ಯದಲ್ಲಿ ದೊರೆಯುತ್ತವೆ. 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ' 'ಚಲವಂತೆ ಮಹಾದೇವಿಯೊಲವಾಂತು' ಎಂಬ ಕಥೆ ಸಂದರ್ಭದಲ್ಲಿ ಸುಗ್ಗಲೆಯನ್ನು ಸ್ಮರಿಸಲಾಗಿದೆ. "ಭವಿಯನೊಲ್ಲೆನೆಂದು ಅಕ್ಕಮಹಾದೇವಿಯೆನಲು ಅವಳ ತಂದೆ "ಮಗಳೆ ಮುನ್ನ ಕಾರಿಕಾಲಮ್ಮೆ, ಮುಂಗಾಯಕ್ಕರಸಿ ವೈಜವ್ವೆ, ತಿಲಕವ್ವೆ, ಸುಗ್ಗಲೆದೇವಿಯರು ಭವಿ ಸಂಗ ಹೊದ್ದಿರ್ದು ಶಿವ ಕೃಪೆಯಂ ಪಡೆದರು"[೪] ಎಂದು ಹೇಳಿದನು. ಅಲ್ಲದೇ ಅದೇ ಕಾವ್ಯದ ಮತ್ತೊಂದು ಕಥೆಯಲ್ಲೂ ಸ್ಮರಿಸಲಾಗಿದೆ. "ದುಗ್ಗಳೆಯ ಪಾದಂಗಳ ಮನದೊಳಿರುಸುತಾ" ಎಂಬ ಕಥೆ ಆರಂಭದಲ್ಲಿ "ದೇವರ ದಾಸಯ್ಯಗಳೆಂಬ ಶರಣರು

ಪೊಟ್ಟಲಕೆರೆಯಲ್ಲಿ ಸುಗ್ಗಲದೇವಿಯರಿಗೆ ಗುರುವಾಗಿರ್ದು ಜಿನವಾದವಂ ಗೆದ್ದು ಉತ್ತರನಾಥ ಲಿಂಗವಂ ಪ್ರತಿಷ್ಠಿಸಿ ದೇಸಿಂಗರಾಯನಂ ಭಕ್ತನಂ ಮಾಡಿ"[೫] ಎಂಬ ವಿವರಗಳಿವೆ.

ಲಕ್ಕಣ ದಂಡೇಶನ 'ಶಿವತತ್ವ ಚಿಂತಾಮಣಿ'ಯಲ್ಲೂ ಕೂಡ ಶಿವಭಕ್ತೆ ಸುಗ್ಗಲೆಯ ಕಥೆ ವರ್ಣಿತಗೊಂಡಿದೆ.

"ಪೊಡಚೆರುವಿನರಸು ದೇಸಿಂಗ ಬಲ್ಲಾಳಂ ಜೈನ
ಮೃಢ ಭಕ್ತಿಯಾತನಂಗನೆಯಿರಲ್ಕೊಂದು ದಿನ
ನುಡಿದನಾಕೆಗೆ ಜೈನ ಪುಷ್ಪಮಂ ಕರದಿ ಪಿಡಿದದ ಲಿಂಗಮಾಳ್ಪುದೆನಲು।
ಮಡದಿ ನಿಜಗುರು ದಾಸಿಮಯ್ಯ ಶರಣೆಂದೆನ
ಲ್ಕೊಡನೆ ತೋರುವ ಚಂದ್ರಕಾಂತ ಲಿಂಗವ ಕಂಡು
ಕಡು ಹರುಷದಿಂದ ಮೆರೆವುತ್ತಿರ್ದ ಸುಗ್ಗಲೆಯ ಚರಣಾಂಬುಜಕ್ಕೆ ಶರಣು"[೬]

ಕೆಳದಿ ಕೊನೆಯ ರಾಣಿ ವೀರಮ್ಮಾಜಿಯ ಆಶ್ರಯದಲ್ಲಿದ್ದ ಲಿಂಗಣ್ಣ ಕವಿ ರಚಿಸಿದ 'ಕೆಳದಿ ನೃಪವಿಜಯ'ವು ಕೆಳದಿಯ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಯಲು ಬಹು ಮಹತ್ವದ ಕೃತಿಯೆನಿಸಿದೆ. ಇದು ಕೆಳದಿ ಸಂಸ್ಥಾನದ ಆದಿಯಿಂದ ಅಂತ್ಯದವರೆಗಿನ ಎಲ್ಲಾ ಚಾರಿತ್ರಿಕ ಘಟನೆಗಳನ್ನು ದಾಖಲಿಸಿದೆ. ಪ್ರಾಸಂಗಿಕವಾಗಿ ಅಲ್ಲಲ್ಲಿ ವಿಜಯನಗರ, ಬಹಮನಿ ಸುಲ್ತಾನ, ದಿಲ್ಲಿಸಾಮ್ರಾಟ, ಮರಾಠಾ ದೊರೆಗಳು, ಚಿತ್ರದುರ್ಗ ನಾಯಕರು, ಬೇಲೂರು ಅರಸರು, ಷಾಹಿರಾಜರು, ಮೈಸೂರು ದೊರೆಗಳು, ಬಾರಕೂರ ಸಂಸ್ಥಾನ, ಸೋದೆ ಅರಸು ಮನೆತನ, ಬಿಳಗಿ, ತರೀಕೆರೆ ಸಂಸ್ಥಾನಗಳ ಬಗ್ಗೆ ಮಹತ್ವದ ದಾಖಲೆ ಒದಗಿಸುತ್ತದೆ. ಕೆಳದಿ ಬಸಪ್ಪನ ಪತ್ನಿಯಾದ 'ಬಸವಾಂಬೆಯ ಅನುಪಮ ಸೌಂದರ್ಯವನ್ನು ವಿಶ್ರುತ ಸೀಮಂತಿನಿಯರ, ಅಧಿದೇವತೆಯಾದ ಈಕೆ ಪಾವನತರ ಸಚ್ಚರತೆಯಿಂದ ರಾರಾಜಿಸಿದಳು. ರೂಪಿನಲ್ಲಿ ರತಿ, ಪತಿಭಕ್ತಿಯಲ್ಲಿ ಅರುಂಧತಿ, ಜಾಣ್ಮೆಯಲ್ಲಿ ಉನ್ನತ ಭಾರತಿ, ಶೋಭವತಿ"[೭] ಇತ್ಯಾದಿಯಾಗಿ ವರ್ಣಿಸಲಾಗಿದೆ. ಅಲ್ಲದೆ ಭದ್ರಾಂಬೆ, ವೀರಾಂಬೆ, ಬಂಗಾರಮ್ಮ, ಕೊಲ್ಲೂರಮ್ಮಾಜಿ, ಸಿದ್ಧಮ್ಮಾಜಿ, ಲಿಂಗಮ್ಮಾಜಿ, ಶಾಂತಮ್ಮಾಜಿ, ಬಸವಲಿಂಗಮ್ಮಾಜಿಯರ ಉಲ್ಲೇಖವನ್ನು ನೀಡುತ್ತದೆ.

ಕೆಳದಿ ಸಂಸ್ಥಾನದ ಸಮರ್ಥ ರಾಣಿ ಚೆನ್ನಮ್ಮಾಜಿ ರಾಜಕೀಯ ರಂಗದಲ್ಲಿ ಪ್ರವೇಶಿಸಿದಳಲ್ಲದೆ, ವಿಧಿಯುಕ್ತವಾಗಿ ರಾಜಪಟ್ಟವನ್ನು ಪಡೆದು ಕೆಳದಿಯನ್ನು ರಕ್ಷಿಸುತ್ತಾ ಆಳಿದಳು.

"ವರ ಸೋಮಶೇಖರೇಂದ್ರನ
ತರುವಾಯಿಯೊಳಾಳ್ದ ಕುಶಿವನೃಪ ನಂತರಮಾ

ದೊರೆ ಸೋಮಶೇಖರಾಂಗನೆ

ಸುರಚರ ಚೆನ್ನಾಂಬೆಯಾಳ್ದಳುರ್ವೀತಳಮಂ"[೮]

ಎಂಬ ವಿಷಯವಿದೆ. ಅಲ್ಲದೆ ಕೆಳದಿ ಮತ್ತೊಬ್ಬ ಸಮರ್ಥ ರಾಣಿ ವೀರಮ್ಮಾಜಿಯು 'ಬಿದನೂರಿನ ವೀರರಾಣಿ' ಎಂದೇ ಬಿರುದನ್ನು ಪಡೆದಿದ್ದಳೆಂದು, ತಮ್ಮ ಸೋದರಮಾವನಾದ ಬಂಕಾಪುರದ ಪಟ್ಟಣಶೆಟ್ಟಿ ಚೆನ್ನವೀರಪ್ಪನ ಕನಿಷ್ಠಪುತ್ರನನ್ನು ಶಾಸ್ತ್ರೋಕ್ತವಾಗಿ ಗೃಹಿತ ಪುತ್ರನನ್ನಾಗಿ ಮಾಡಿಕೊಂಡು, ಆತನಿಗೆ ರಾಜಪಟ್ಟವನ್ನು ಕಟ್ಟಿ, ಅವನಿಗೆ ಸೋಮಶೇಖರನೆಂದು ನಾಮಕರಣ ಮಾಡಿದಳು. ಆತ ಚಿಕ್ಕವನಿರುವ ಕಾರಣವಾಗಿ ರಾಣಿಯೇ ಆಡಳಿತ ವಹಿಸಿಕೊಂಡಳು.

"ರಾಜಪಟ್ಟಮಂ ಕಟ್ಟಿಸಿ ಸಂಸ್ಥಾನಾಧಿಪತ್ಯಕ್ಕೆ ನಿಲಿಸಿ ತದಾರಭ್ಯಮಾ ಸೋಮಶೇಖರ ನಾಯಕರ್ ಬಾಲಕರಾದ ಕಾರಣದಿಂದಾ ಕುಮಾರನಂ ಮುಂದಿಟ್ಟುಕೊಂಡು ತಮ್ಮರಸನಾಳಿ ಬರುತಿರ್ದ ರಾಜ್ಯ, ರಾಷ್ಟ್ರ, ದೇಶ, ಕೋಶ, ಪ್ರಜೆ, ಪರಿವಾರ, ಪರಿಸ್ತರಣ ಮಂತ್ರಿ, ನಿಯೋಗಿ, ಸಾಮಾಜಿಕ, ಸಾಮಂತ, ಗುರಿಕಾರ, ಪುರಜನ, ಪರಿಜನ, ಮಿತ್ರಜನ, ಸೇವಕ ಜನರ್ ಮುಂತಾದ ಸಮಸ್ತ ಜನರಂ ಸಂರಕ್ಷಿಸುತ್ತುಂ ಸಂಸ್ಥಾನದೊಳಗುಂಟಾದ ಕಾರ್ಯಗಳೆಲ್ಲಮಂ ತಾನೆ ವಹಿಸಿ ವಿಚಾರಂಗೆಯ್ದು ನಿರ್ವಹಿಸಿ ನಡೆಸುತ್ತುಂ ಸದ್ಧರ್ಮದಿಂ ರಾಜ್ಯಪಾಲನಂಗೆಯ್ಯುತ್ತಮಿರ್ದುರ್"[೯] ಎಂಬ ವಿವರವಿದೆ.

ಕೆಳದಿ ಸಂಸ್ಥಾನದ ಮೇಲೆ ಬೆಳಕು ಚೆಲ್ಲುವ ಮತ್ತೊಂದು ಪ್ರಮುಖ ಆಕರವೆಂದರೆ 'ಶಿವತತ್ವರತ್ನಾಕರ'. ಕೆಳದಿ ರಾಜನಾದ ಬಸವಪ್ಪನಾಯಕನಿಂದ ರಚಿಸಲ್ಪಟ್ಟ ಈ ಕೃತಿಯು ಕೆಳದಿ ರಾಣಿಯರ ಬಗ್ಗೆ ಪ್ರಮುಖ ದಾಖಲೆಯನ್ನು ಒದಗಿಸುತ್ತದೆ. ಕೆಳದಿ ರಾಣಿಯಾದ ಚೆನ್ನಮ್ಮಾಜಿಯು ಬಸವಪ್ಪನಾಯಕನಿಗೆ ಒಬ್ಬ ಮಾರ್ಗದರ್ಶಕಳಾಗಿ, ತಾಯಿಯಾಗಿ ಆಡಳಿತಸೂತ್ರವನ್ನು ವಹಿಸಿಕೊಳ್ಳುವ ಅರಸನಿಗೆ ಇರಬೇಕಾದ ಅರ್ಹತೆಗಳ ಬಗ್ಗೆ, ನೀತಿ ಬೋಧಿಸುವ ವಿವರವನ್ನು ಬಹುದೀರ್ಘವಾಗಿ ನೀಡುತ್ತದೆ.

"ನಾನು ಹೇಳಿದ್ದನ್ನು ಬದಲಾಯಿಸಬೇಡ, ಕರ್ತವ್ಯವನ್ನು ಎಲ್ಲಿಯೂ ಬಿಡಬೇಡ, ಪ್ರಿಯವಾಗಿ ಮಾತನಾಡು, ಮೋಸಗಾರನಿಗೆ ಅಂತರಂಗವನ್ನು ಹೇಳಬೇಡ, ತಪ್ಪುದಾರಿಯಲ್ಲಿ ನಡೆಯಬೇಡ, ತನ್ನವರಲ್ಲಿ ಭೇದ ಮಾಡಬೇಡ, ವಾದವನ್ನು ಬಿಡು, ಒಳ್ಳೆಯದನ್ನು ಮಾಡು, ಶಿವನ ಪಾದವನ್ನು ಭಜಿಸು, ಕಾಮಾದಿ ದೋಷಗಳನ್ನು ಜಯಿಸು, ಸಂಸಾರದಲ್ಲಿ ಜಿಗುಪ್ಸೆಯನ್ನು ಕಳೆ, ದುಃಖದಲ್ಲಿ ಹೆದರಿಕೆಯನ್ನು ಬಿಡು, ಸಂಪತ್ತಿನಲ್ಲಿ ಮದವನ್ನು ಬಿಡು, ತತ್ವಗಳನ್ನು ಸಮರ್ಥಿಸುತ್ತಿರು, ಅಂತರಂಗದಲ್ಲಿ ಅದ್ವೈತವನ್ನು ಇಡು, ಪ್ರತಿಜ್ಞೆ ಮೀರಬೇಡ, ವೈದ್ಯರನ್ನು ಪೂಜಿಸು, ಸಂಸಾರವನ್ನು ಸ್ವಪ್ನವೆಂದು ತಿಳಿ ನೀನು ಯಾರೆಂದು ಯೋಚಿಸುತ್ತಿರು, ಹಾಸ್ಯಕ್ಕೊಳಗಾಗದೆ ನಗುತ್ತಿರು, ಅತ್ಯುತ್ತಮವಾದ

ಮಾತನ್ನು ಹೇಳು, ಜನರಿಂದ ಹೊಗಳಿಸಿಕೊಳ್ಳುವ ಸ್ಥಾನದಲ್ಲಿ ಬದುಕು, ಪುನಃ ಹಿಂತಿರುಗದ ಸ್ಥಾನವನ್ನು ಸೇರು, ಶಿವನನ್ನು ಅನೇಕ ರೀತಿಯಲ್ಲಿ ಸಂತೋಷಗೊಳಿಸು, ಯಾವಾಗಲೂ ಆನಂದವನ್ನು ಪಡೆ, ಈ ವಿಷಯಗಳನ್ನು ಎಂದೂ ಮರೆಯಬೇಡ"[೧೦] ಎಂದು ವಿಷಯವಿದೆ.

ಕೆಳದಿ ಲಿಂಗಣ್ಣ ಕವಿಯ 'ಪಾರ್ವತಿ ಪರಿಣಯ' ಕೃತಿಯು ನೇರವಾಗಿ ಕೆಳದಿ ರಾಣಿಯರ ಬಗ್ಗೆ ಉಲ್ಲೇಖವನ್ನು ನೀಡದೇ ಇದ್ದರೂ ಈ ಕೃತಿಯನ್ನು ಅಧ್ಯಯನಕ್ಕೊಳಪಡಿಸುವ ಸಂದರ್ಭದಲ್ಲಿ ಕೃತಿಯ ರಚನೆಗೆ ಮೂಲ ಪ್ರೇರಣೆ ಕೆಳದಿ ರಾಣಿಯರಾಗಿರಬೇಕೆನಿಸುತ್ತದೆ. ಸಾಮಾನ್ಯವಾಗಿ ರಾಜ ರಾಣಿಯರು ಮಕ್ಕಳಿಲ್ಲವೆಂದು, ಅದರಲ್ಲೂ ಪುತ್ರನಿಗಾಗಿ ವ್ರತಗಳನ್ನು ಕೈಗೊಂಡಿರುವುದು ಕಂಡುಬರುತ್ತದೆ. ಆದರೆ ಈ ಕೃತಿಯ ಕಥಾಹಂದರವನ್ನು ನೋಡಿದಾಗ ಪರ್ವತರಾಜನ ಪತ್ನಿ ಮೈನಾದೇವಿ, ಇವರಿಗೆ ಮೈನಾಕಾದಿ ಪುತ್ರರಿದ್ದರೂ ಪುತ್ರಿಯಿಲ್ಲವೆಂಬ ಕೊರಗು, 'ಮಗಳಿಲ್ಲದ ತಾಯಿಯ ಬಾಳೇ ವ್ಯರ್ಥ' ಎನ್ನುವ ಮೈನಾದೇವಿಯ ಮಾತಿನಿಂದ ಅಂದು ವೀರಕಲಿಯಾಗಿ, ಹೆಸರು ಮಾಡುವ ರಾಣಿಯರ ಪ್ರೇರಣೆ ಇದ್ದಿರಬಹುದು. "ಪಾರ್ವತಿ ಪರಿಣಯವು ಪ್ರೌಢವಾದ ಚಂಪೂಕಾವ್ಯವಾಗಿದ್ದು, ಪರ್ವತರಾಜ ಹಾಗೂ ಮೈನಾದೇವಿಯರಿಗೆ ಮೈನಾಕಾದಿ ಪುತ್ರರಿದ್ದರೂ, ಪುತ್ರಿಯಿಲ್ಲವೆಂಬ ಕೊರಗು ಇದೆ. ಕಾರಣವಾಗಿ ಶಿವಪತ್ನಿಯನ್ನು ಪೂಜಿಸಿ ಧ್ಯಾನಿಸಿದಳು. ದಕ್ಷಾಧ್ವರದಲ್ಲಿ ಅಡಗಿ ಶಿವಕಲೆಯನ್ನು ಸೇರಿದ್ದ ಪರಶಿವೆ ಪ್ರತ್ಯಕ್ಷಳಾಗಿ ಆಕೆಯ ಕೋರಿಕೆಯಂತೆ ತಾನೇ ಮಗಳಾಗಿ ಜನಿಸುವುದಾಗಿ ವರವನ್ನಿತ್ತಳು."[೧೧] ಇದು ಅಂದಿನ ಸ್ತ್ರೀ ಪ್ರಾಧಾನ್ಯತೆಗೂ ಸಾಕ್ಷಿಯಾಗಿದೆ.

'ಕೆಳದಿರಾಜ್ಯಾಭ್ಯುದಯಂ' ಎಂಬ ಕೃತಿಯು 'ಕವಿಪರಮೇಶ್ವರಿ'ಯೆಂದೇ ಹೆಸರಾದ ಗಂಗಾದೇವಿ ರಚಿಸಿದ ಕೃತಿ. "ಒಂದು ದಿನ ಬಸವರಾಜೇಂದ್ರನೂ ಅವನ ಪತ್ನಿ ಚೆನ್ನಮ್ಮಾಜಿಯು ತಮ್ಮ ಕುಲಗುರುಗಳಾದ ಬದನಗದ್ದೆ ಮಹಂತರ ಮಠಕ್ಕೆ ಬಂದು, ಗುರು ಹಾಗೂ ಗುರುಪತ್ನಿಯರನ್ನು ಸಂದರ್ಶಿಸಿ, ಗುರುಪತ್ನಿ ಗಂಗಾದೇವಿಗೆ ತಮ್ಮ ಕೆಳದಿ ಅರಸರ ವಂಶದ ಕಥೆಯನ್ನು ಬರೆಯುವಂತೆ ಪ್ರಾರ್ಥಿಸಿದರಂತೆ, ಆಗ ಗಂಗಾದೇವಿ ಕಥೆ ಬರೆದಳೆಂದು, ಎರಡನೇ ಸೋಪಾನದಲ್ಲಿ ಮಲ್ಲದೇಶದ ಬಸವಪ್ಪ–ಬಸವಾಂಬೆಯರ ದಾಂಪತ್ಯ, ಮಕ್ಕಳ ಮರಣ, ದುಃಖ ಅದಕ್ಕೆ ಹೊರಗುಡಿಯ ಪಟ್ಟದ ರುದ್ರಮುನಿ ಸ್ವಾಮಿಗಳ ಸಮಾಧಾನ ಇತ್ಯಾದಿ ಕೆಳದಿ ರಾಜವಂಶಕ್ಕೆ ಸಂಬಂಧಿಸಿದ ವಿಷಯ ಪ್ರಸ್ತಾಪಿಸಲಾಗಿದ್ದು ಇಷ್ಟಕ್ಕೆ ನಿಂತು ಹೋಗಿದೆ"[೧೨]

ಪ್ರಾಚೀನ ಅರಸುಮನೆತನದ ಚರಿತ್ರೆಯನ್ನು ನಿರೂಪಿಸುವಲ್ಲಿ ಕನ್ನಡ ಕಾವ್ಯ–ಪುರಾಣಗಳಲ್ಲದೆ, ಲಘು ಸಾಹಿತ್ಯ ಪ್ರಕಾರಗಳಾದ ಸ್ವರವಚನಗಳು ಚಾರಿತ್ರಿಕ ಆಕರಗಳಾಗುತ್ತವೆ. ಅವುಗಳಲ್ಲಿ ಸೋದೆ ರಾಣಿಯರ ಚಾರಿತ್ರಿಕ ಸಂಗತಿಯನ್ನು ನಿರೂಪಿಸುವ ಸ್ವರವಚನಗಳು ಇವೆ. ಸೋದೆಯ ಮರಿಶಾಂತ

ಬಸವದೇವರು ರಚಿಸಿದ 'ಸ್ವರವಚನ'ಗಳಲ್ಲಿ ಸೋದೆ ಬಸವಲಿಂಗರಾಜನ ತಂದೆ ಸದಾಶಿವರಾಯ ಮತ್ತು ಅವನ ತಾಯಿ ಶಾಂತಮ್ಮಾಜಿಯ ಉಲ್ಲೇಖವಿದೆ.

ಸೋದೆಯ ಅರಸ ಸದಾಶಿವರಾಯನಿಂದ ಕೆಲವು ಕೃತಿಗಳು ರಚಿಸಲ್ಪಟ್ಟಿವೆ. ಈ ಕೃತಿಗಳನ್ನು ಡಾ.ಬಿ.ಆರ್.ಹಿರೇಮಠ ಅವರು 'ಸೋದೆ ಸದಾಶಿವರಾಯನ ಕೃತಿಗಳು' ಹೆಸರಿನಲ್ಲಿ ಸಂಪಾದಿಸಿದ್ದಾರೆ. ಇವು ಸೋದೆ ಸಂಸ್ಥಾನದ ಬಗ್ಗೆ ಪ್ರಮುಖ ಮಾಹಿತಿಯನ್ನು ನೀಡುತ್ತದೆ.

ಸೋದೆ ಸದಾಶಿವರಾಯನು ತನ್ನ ಮನೆತನದ ಮೂಲಪುರುಷರ ವಿವರ ನೀಡುತ್ತಾನೆ. ಸೋದೆ ಗ್ರಾಮ ಕ್ರಿ.ಶ.೧೧೨೬ರಷ್ಟು ಪ್ರಾಚೀನವಾದುದು. ಸೋದೆ ಅರಸ "ಅರಸಪ್ಪ ನಾಯಕನಿಗೆ ರುಮಾಯಿ ಸಾತಕ್ಕ, ನಾಗಕ್ಕ, ಲಕುಮಾಯಿ, ಮಸಣಾಯಿ, ಕಾತ್ಯಾಯಿ, ಸಾತಾಯಿ ಮುಂತಾದ ಒಂಬತ್ತು ಜನ ರಾಣಿಯರಿದ್ದು, ಇವರೆಲ್ಲರೂ ಸಹಗಮನ ಹೊಂದಿದ ಸಂಗತಿಯಿದೆ. ಸೋದೆ ಪರಾಕ್ರಮಿ ಅರಸನಾದ ಇಮ್ಮಡಿ ಅರಸಪ್ಪನಾಯಕನಿಗೆ ವೀರಮ್ಮಾಜಿ, ಲಕ್ಷ್ಮಿ, ಅರಸಾದೇವಿ, ರಾಮಚಂದ್ರ ಮಕ್ಕಳಿದ್ದರು. ವೀರಮ್ಮಾಜಿ ಹಾಗೂ ಅರಸಾದೇವಿಯರನ್ನು ಬಿಳಗಿ ಅರಸ ಇಮ್ಮಡಿ ಘಂಟೇಂದ್ರನಿಗೆ ಕೊಟ್ಟು ವಿವಾಹ ಮಾಡಿದನು ಎಂಬ ವಿಷಯವಿದೆ."[೧೩] ಬೆಳವಡಿಯ ವೀರರಾಣಿ ಮಲ್ಲಮ್ಮಾಜಿಯ ತವರು ಸೋದೆ ಎಂಬುದಾಗಿಯೂ, ಚಿಕ್ಕಂದಿನಲ್ಲಿ ರಾಣಿಯ ವಿದ್ಯಾಭಾಸಕ್ಕೆ ಗುರುಗಳನ್ನು ನೇಮಿಸಲಾಗಿತ್ತೆಂಬ ಅಂಶ ತಿಳಿದುಬರುತ್ತದೆ. ಸೋದೆ ಸದಾಶಿವನ ರಾಣಿ ಶಾಂತಮ್ಮಾಜಿ ಎಂಬ ಉಲ್ಲೇಖವಿದೆ.

ಸೋದೆ ಸಂಸ್ಥಾನದ ಮೇಲೆ ಬೆಳಕು ಬೀರುವ ಮತ್ತೊಂದು ಪ್ರಮುಖ ಕೃತಿ 'ಮಹಲಿಂಗೇಂದ್ರ ವಿಜಯ.' ಈ ಕೃತಿಯನ್ನು ಮಹದೇವನು ರಚಿಸಿದ್ದು, ಸ್ವಾದಿಯ ಬಸವಲಿಂಗ ನಾಯಕನ ಮದುವೆ ನಿಶ್ಚಯವಾದ ವಿಷಯವು ಬಹು ಸುಂದರವಾಗಿ ಈ ಕೃತಿಯಲ್ಲಿ ಚಿತ್ರಣಗೊಂಡಿದೆ.

> "ಈಕ್ಷಿಸಲ್ಕೀ ಕ್ಷಿತಿಯೊಳೀ ಕ್ಷಿತಿವರಾತ್ಮಜೆಯ
> ಲಕ್ಷಣಗಳಂ ಮೊಲ್ತು ರಾಜಿಸುವ ಸಾರಸದ
> ಳಾಕ್ಷಿಯರು ಪುರೋಹಿತ ಪರಮೇಷ್ಠಿ ಪದ್ಮನಾಭಾದಿ ಭುವನಂಗಳಲ್ಲು॥
> ಅಕ್ಷಿಗಳಸರ್ ಮಿಕ್ಕ ಭುವನಾಂತರದೊಳುಂ ಸ
> ದೃಕ್ಷ ಶಾಂತೋದರಿಯರೊಳರೇ ಯೆನುತ್ತಮಾ
> ತ್ರಷಾವತಾಳಿಗಳ್ ತದ್ರೂಪಕದ್ಭುತಂಬಟ್ಟುತತ್ಪಿತೃವಿನೊಡನೆ॥
> ಕ್ಷೇಮಮಂ ನುಡಿವುತೀ ನಿಮ್ಮ ಪುತ್ರಿಯನೆಮ್ಮ
> ಭೂಮೀಶ ಬಸವ ಲಿಂಗಂಗೀವುದೆಂತೆನುತ ನೇಮಿಸಿ
> ಕರಗ್ರಹಣ ಸುಮಹೂರ್ತಮಂ ನೆಗಳ್ವುದಕೆ ನಿಶ್ಚೈಸಿ"[೧೪]

ಎಂಬ ವಿವರವಿದೆ.

ಅಂಗೈ ಅಗಲದ ವೀರಸಂಸ್ಥಾನ ಬೆಳವಡಿಯನ್ನು ಸಮರ್ಥವಾಗಿ ಆಳಿದ ರಾಣಿ ಮಲ್ಲಮ್ಮನ ಬಗೆಗೆ ಚಾರಿತ್ರಿಕ ದಾಖಲೆಯನ್ನು ಒದಗಿಸುವ ಕೃತಿಗಳಲ್ಲಿ 'ಶಿವಾಜಿ-ಮಲ್ಲಮ್ಮಾಜಿ ಸಮರೋತ್ಸವ' ಕೃತಿ ಪ್ರಮುಖವಾದುದು.

ಇಡೀ ಕೃತಿಯು ಇತಿಹಾಸದಲ್ಲಿ ನಡೆದು ಹೋದ 'ಶಿವಾಜಿ-ಮಲ್ಲಮ್ಮಾಜಿ' ನಡುವಿನ ಯುದ್ಧದ ಸುತ್ತ ಹೆಣೆದ ಕೃತಿಯಾಗಿದೆ. ಕೆಲವು ಕೃತಿಗಳು ಅನುಭವಸ್ಥ ಶಿವಾಜಿಯೊಂದಿಗೆ ಚಿಕ್ಕಪ್ರಾಯದ ಮಲ್ಲಮ್ಮ ಹೋರಾಡಲೇ ಇಲ್ಲವೆಂದು ವಾದಿಸಿದರೇ, ಮಲ್ಲಮ್ಮ ಶಿವಾಜಿಯೊಂದಿಗೆ ಹೋರಾಡಿ, ಆತನ ಸೈನ್ಯವನ್ನು ಸೋಲಿಸಿದಳೆಂಬ ಮಾಹಿತಿಯನ್ನು ಈ ಕೃತಿ ಒದಗಿಸುತ್ತದೆ. ಸತತ ೨೭ ದಿನಗಳ ಕಾಲ ನಿರಂತರವಾಗಿ ಯುದ್ಧ ನಡೆದು, ನಂತರ ಮಲ್ಲಮ್ಮ ಮೂರ್ಛೆ ಹೋದಳೆಂಬ ವಿಷಯವಿದೆ. ಸೋದೆ ಮಧುಲಿಂಗನಾಯಕನ ಮಗಳಾದ ಮಲ್ಲಮ್ಮಾಜಿಯ ವಿದ್ಯಾಭ್ಯಾಸಕ್ಕಾಗಿ 'ರಘುವೀರಸಿಂಗ್' ಎಂದು ಯೋಧನನ್ನು ನೇಮಿಸಿದ್ದನೆಂದು ಆಕೆ ಬಾಲ್ಯದಲ್ಲಿ ಶಸ್ತ್ರಾಸ್ತ್ರ ವಿದ್ಯೆ ಬಲ್ಲವಳಾಗಿದ್ದಳೆಂಬ ಅಂಶ ತಿಳಿಯುತ್ತದೆ.

'New History of Maratha, Vo.I' ರಲ್ಲಿ ಶ್ರೀ.ಗೊ.ಸ.ಸರದೇಸಾಯಿಯವರು ಶಿವಾಜಿಯು ತನ್ನ ನಾಡಿಗೆ ಮರಳಿ ಹೋಗುವ ಸಂದರ್ಭದಲ್ಲಿ ರಾಣಿ ಮಲ್ಲಮ್ಮನೊಂದಿಗೆ ಯುದ್ಧ ಮಾಡಿದನೆಂದು, "Belwadi was captured after months attack and the distresced and humalated Lady was teken under protection of shivaji"[೧೫] ಎಂಬ ಮಾತು ಬರುತ್ತದೆ. ಹೀಗೆ ರಾಣಿ ಮಲ್ಲಮ್ಮಾಂಬೆ ಒಂದು ತಿಂಗಳವರೆಗೆ ಶಿವಾಜಿಯೊಂದಿಗೆ ಶೂರತನದಿಂದ ಹೋರಾಡಿದಳೆಂಬ ಅಂಶವನ್ನು ದಾಖಲಿಸುತ್ತದೆ.

ಮೈಸೂರು ಹಾಗೂ ಕಳಲೆ ಮನೆತನಕ್ಕೆ ಸಂಬಂಧಿಸಿದ ಚಾರಿತ್ರಿಕ ಅಂಶಗಳನ್ನು ಬಿತ್ತರಿಸುವ ಪ್ರಮುಖ ಚಾರಿತ್ರಿಕ ಕೃತಿ 'ಕಂಠೀರವ ನರಸರಾಜ ವಿಜಯ' ಗೋವಿಂದ ವೈದ್ಯ ರಚಿಸಿದ ಕೃತಿ. ಮೈಸೂರು ಅರಸರಲ್ಲಿ ಪ್ರಮುಖನಾದ ಕಂಠೀರವ ನರಸರಾಜರ ಸಂಗ್ರಾಮದ ಕಥೆಯನ್ನು, ಬೆಟ್ಟದ ಚಾಮರಾಜ ಒಡೆಯರ ಪತ್ನಿ ಗುರುವಾಜಮ್ಮಣ್ಣಿ, ವೀರಾಂಬೆಯರ ಬಗ್ಗೆ ವಿವರಗಳಿವೆ. ಇಕ್ಕೇರಿಯ ಅರಸರಿಗೂ, ಬಸವಾಪಟ್ಟಣ ಅಥವಾ ತರೀಕೆರೆಯ ಅರಸರಿಗೂ ನಡೆದ ಯುದ್ಧವನ್ನು ದಾಖಲಿಸುತ್ತದೆ.

"ಮೈಸೂರು ಸಂಸ್ಥಾನದ ಪ್ರಭುಗಳು ಶ್ರೀಮನ್ಮಹಾರಾಜರ ವಂಶಾವಳಿ" ಎಂಬ ಕೃತಿಯು ಕಳಲೆ ರಾಣಿಯರ ಬಗ್ಗೆ ಪ್ರಮುಖ ದಾಖಲೆಯನ್ನು ಒದಗಿಸುತ್ತದೆ. "ಕಳಲೆ ಚಿಕ್ಕ ಅರಸಿನವರ ಕುಮಾರತಿ ದೇವಾಜಮ್ಮಣ್ಣಿ, ಕಳಲೆ ಚೆಲುವೆ ಅರಸಿನವರ ಮಗಳು ಚೆಲುವಾಜಮ್ಮಣ್ಣಿ ಮತ್ತು ಕಾಂತಮ್ಮಣ್ಣಿ, ಕಳಲೆ ಚಿಕ್ಕಕಾಂತಯ್ಯನವರ ಕುಮಾರತಿ ಚೆಲುವಾಜಮ್ಮಣ್ಣಿ"[೧೬] ಎಂಬ ಉಲ್ಲೇಖಗಳಿವೆ.

ಕಳಲೆ ರಾಣಿಯರ ಬಗ್ಗೆ ಮಹತ್ವದ ದಾಖಲೆಗಳನ್ನು ಒದಗಿಸುವ ಮತ್ತೊಂದು ಪ್ರಮುಖ ಕೃತಿ 'ದೇವಚಂದ್ರನ ರಾಜಾವಳಿ ಕಥಾಸಾರ'. ಮೈಸೂರು ಹಾಗೂ ಕಳಲೆ ಮನೆತನಗಳ ನಡುವೆ ವೈವಾಹಿಕ ಸಂಬಂಧಗಳು ಏರ್ಪಡುತ್ತಿದ್ದವು. "ಮೈಸೂರಿನ ಅರಸನಾದ ಹಿರಿಯ ಬೆಟ್ಟೊಡೆಯರು ಬೆಟ್ಟದ ಕೋಟೆಯ ರಾಜಪುತ್ರಿಯಾದ ಗೋಪಾಜಮ್ಮನನ್ನು ವಿವಾಹವಾದ ಇವನ ಮಗ ತಿಮ್ಮರಾಜ ಒಡೆಯರು ಕಳಲೆಯ 'ಕಾಂತಾಜಮ್ಮಣ್ಣಿ'ಯನ್ನು ವಿವಾಹವಾದರು"[೧೭] ಎಂಬ ವಿಷಯವಿದೆ. ಅಲ್ಲದೆ ಈ ಕೃತಿಯಲ್ಲಿ ಹಲವಾರು ರಾಣಿಯರ ತವರುಮನೆ ಹಾಗೂ ತಂದೆಯ ಬಗ್ಗೆ ವಿವರಗಳಿವೆ.

ದೊಡ್ಡ ಕೃಷ್ಣರಾಜ ಒಡೆಯರಿಗೆ "ಕಳಲೆಯ ಚಿಕ್ಕ ಅರಸಿನವರ ಕುಮಾರಿಯರಾದ ಚೆಲುವಾಜಮ್ಮಣ್ಣಿ, ದೇವಾಜಮ್ಮಣ್ಣಿ, ಕಳಲೆ ತಿಮ್ಮರಾಜ ಅರಸಿನವರ ಮಗಳು ಚೆಲುವಾಜಮ್ಮಣ್ಣಿ, ಕಳಲೆ ದೊಡ್ಡ ಚೆಲುವೆ ಅರಸಿನವರ ಮಗಳು ಚೆಲುವಾಜಮ್ಮಣ್ಣಿ, ಕಳಲೆ ದೊಡ್ಡ ಚೆಲುವೆ ಅರಸಿನವರ ಪುತ್ರಿ ಚೆಲುವಾಜಮ್ಮಣ್ಣಿ, ಕೊತ್ತೆಗಾಲದ ಕೃಷ್ಣೆ ಅರಸಿನವರ ಕುಮಾರತಿ ಕಾಂತಮ್ಮಣ್ಣಿ, ಹುಲ್ಲನಹಳ್ಳಿ ಚಿಕ್ಕೆ ಅರಸಿನವರ ಪುತ್ರಿ ನಂಜಮ್ಮಣ್ಣಿ, ನಿಲಸೋಗೆ ದೊಡ್ಡ ಅರಸಿನವರ ಕುಮಾರತಿ ದೇವೀರಮ್ಮಣ್ಣಿ ಎಂಬ ೯ ಜನ ಅರಸಿಯರು ಅಲ್ಲದೆ ಪಾಳೇಗಾರರ ಮಕ್ಕಳು, ಶಿವಾಚಾರದ ಶೆಟ್ಟಿಗಳ ಮಕ್ಕಳು ೩೦ ಜನ ಬಂಗಾರದ ಸ್ತ್ರೀಯರನ್ನು ವಿವಾಹವಾದರು."[೧೮] ಕಳಲೆಯ ಅರಸ ಚಾಮರಾಜನಿಗೆ ಶಕ ವರುಷ ೧೬೯೯ನೇ ಹೇವಿಳಂಬಿ ಸಂವತ್ಸರದಲ್ಲಿ ಪಟ್ಟಾಭಿಷೇಕವಾಯ್ತೆಂದೂ, ಆ ಸಂದರ್ಭದಲ್ಲಿ 'ಪಂಚಕಲ್ಯಾಣೋತ್ಸವ' ಜರುಗಿತೆಂಬ ವಿಷಯ ಹೇಳುವಲ್ಲಿ ರಾಣಿಯರ ರೂಪ, ತಂದೆಯ ವಿವರಗಳಿವೆ. "ಚಾಮನೃಪನಿಗೆ ಮೂಗುರ ಬಾಳಲೋಚನನಗ್ರತನೂಭವೆ ರೂಪು ಸಂಪನ್ನೆಯಾದ ಕೆಂಪನಂಜಾಂಬೆಯು, ಹುರಕ್ಕಿನಂಜರಾಜ ತನುಭವೆಯು, ಕೋಕಿಲಾಲಪಿಯು ಮಾಗಿ ರತಿದೇವಿಯ ರೂಪಗೆಲ್ವ ಕೆಂಪದೇವಾಂಬಿಕೆ ಈಕೆ ಭೋಗಾಂತರಾಯೋದಯದಿಂ ವಿಯೋಗಮಾಗೆ ತದ್ವಿರಹಾಂಧಕಾರದಿಂ ಚಿಂತಾಕ್ರಾಂತ ಸ್ವಾಂತ ರಂಗನಾಗಿರ್ದ ಎಂದಿದೆ. ಅತಿಶಯ ರೂಪವತಿಯಾದ ಕೀಲಾಪುರದ ರಾಜಪುತ್ರಿ ಚೆಲುವಾಂಬೆ, ಬಾಳೆ ಸುಳಿಯಂತೆ ತೊಳಗಿ, ಬೆಳಗಿ ನಳನಳಿಸುವ ರೂಪಿನ ಬಾಲೆ ಅರಸನಗಿ ಜ್ಯೇಷ್ಠ ಪತ್ನಿಯ ಮಗಳಾದ ದೇವಾಂಬಿಕೆ, ಅತಿಶಯ ರೂಪಿನಲ್ಲಿ ರತಿಯು, ವಿದ್ಯಾನಿಪುಣೆಯಿಂ, ಭಾರತಿಯಂ ಸುಗುಣ ಸೊಬಗು ಶಾಂತತೆಯೊಳ್ ರೋಹಿಣಿಯನ್ನು ಹೋಲುವ ಪಂಪಾನ್ವಯನಪ್ಪ ಹುರದ ಪುಟ್ಟರಾಜರಸನ ಕುಮಾರತಿ ಪಾವನೆಯಾದ ದೇವೀರಾಂಬಿಕೆ, ರೂಪ ಲಾವಣ್ಯ ವಿಲಾಸದೊಳ್ ಸುಲಕ್ಷಣವುಳ್ಳ ತೊಂಡವಾಡಿ ಕಾಂತೆಯರಸನ ಪುತ್ರಿ ಲಕ್ಷ್ಮಾಂಬೆಯುಂ, ಘಲ್ಲಿಶಗದ ವಲ್ಲಭೆಯು ರೂಪಂ ಗೆಲ್ವಹುಲ್ಲನ ಹಳ್ಳಿಯ ಭೂವಲ್ಲಭನ ಸುತೆ ನಂಜಾಂಬೆಯೆಂಬ ಐವರು ಮಹಾದೇವಿಯರನ್ನು ವಿವಾಹವಾದ ವರ್ಣನೆ ಹಾಗೂ ಪಂಚ ಕಲ್ಯಾಣೋತ್ಸವದ ವಿವರವಿದೆ.

ಇಡಿದಿರೆ ಕಾಂತಾವಿರಹದ

ಕಡುಗತ್ತಲೆ ಚಾಮ ನೃಪನ ಮಾನಸದೇಳಗಂ

ಕಿಡಿಸಲ್ ರತ್ನಂಗಳೊಳ್ಳೆ

ಸೊಡರಂ ಪಿಡಿದಂತೆ ಚಿತ್ತ ಬೆಳಗಿದುದಾಗಳ್"[೧೯]

ಕಳಲೆಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಮತ್ತೊಂದು ಪ್ರಮುಖ ಕೃತಿ "ಚೆಲುವಾಂಬೆಯ ಕೃತಿಗಳು." ಕನ್ನಡ ಸಾಹಿತ್ಯದಲ್ಲಿ ಸ್ತ್ರೀಯರು ಕೃತಿ ರಚನೆ ಮಾಡಿದ್ದು ಅತೀ ವಿರಳ. ಅದರಲ್ಲೂ ಅರಸುಮನೆತನದವರು ಕೃತಿ ರಚನೆ ಕೈಗೊಂಡಿರುವುದು ಅಪರೂಪ. ಇದಕ್ಕೆ ಅಪವಾದವೆಂಬಂತೆ "ಕ್ರಿ.ಶ.೧೭೧೩ರಿಂದ ೧೭೩೧ರವರೆಗೆ ಮೈಸೂರಿನ ಅರಸನಾದ ದೊಡ್ಡ ಕೃಷ್ಣರಾಜನ ರಾಣಿ ಚೆಲುವಾಂಬೆ ಕೆಲವು ಕೃತಿಗಳನ್ನು ರಚಿಸಿದ್ದಾಳೆ. ಈಕೆ ದಳವಾಯಿ ದೊಡ್ಡೆಂದ್ರನ ತನುಜ ಕಳಲೆ ಕಾಂತನೃಪನ ಮಗಳು. ಚೆಲುವಾಂಬೆಯು 'ಕೃಷ್ಣ ಕರ್ಣಾಮೃತದ ಟೀಕೆ' ಬರೆದಿರುವುದಾಗಿ ಕರ್ನಾಟಕ ಕವಿಚರಿತೆಕಾರರು ಹೇಳಿದ್ದಾರೆ."[೨೦] ಇದು ಲಭ್ಯವಿಲ್ಲ. 'ತಲಕಾವೇರಿ ಮಹಾತ್ಮೆ' ಚೆಲುವಾಂಬೆಯಿಂದ ರಚಿತ ಏಕೈಕ ಪದ್ಯಕೃತಿ. ೩೦ ಅಧ್ಯಾಯ ಹೊಂದಿದ ಇದು ಟೀಕಾರೂಪದ ಗದ್ಯಗ್ರಂಥ. ಇದಕ್ಕೆ 'ಚೆಲುವಾಂಬಿಕಾ ವಾಣಿವಿಲಾಸ' ಎಂಬ ಹೆಸರು ರೂಢಿಯಲ್ಲಿದೆ. 'ವರನಂದಿ ಕಲ್ಯಾಣ' ಒಂದು ವಿಶಿಷ್ಟ ಸಾಂಗತ್ಯ ಕೃತಿ. ಇದರಲ್ಲಿ ದಿಲ್ಲಿ ಬಾದಶಹನ ಮಗಳಾದ ವರನಂದಿಗೂ, ಮೇಲುಕೋಟೆ ಚೆಲುವರಾಯ ಸ್ವಾಮಿಗೂ ನಡೆದ ಮದುವೆ ವರ್ಣಿತವಾಗಿದ್ದು, ಈ ಕೃತಿಯನ್ನು ಪತಿಯ ಆಜ್ಞಾನುಸಾರ ರಚಿಸಿದೆನೆಂದು ಹೇಳಿಕೊಂಡಿದ್ದಾಳೆ.

"ಜನಪತಿಯನಿಸುವಪ್ರತಿಮ ಕೃಷ್ಣೇಂದ್ರನ ವನಿತೆ ಚೆಲ್ವಾಂಬೆ ಈ ಕೃತಿಯ

ಅನುಗೊಳಿಸಿದಳೆಂದ ಬಿನದಗೆಯ್ಯದೆ ಸಜ್ಜನರು ಸಂತಸದೊಳಾಲಿಪುದು

ವರ ಯದುವಂಶ ತಿಲಕ ನಮ್ಮರಸುಯದುಗಿರಿ ಯೆರೆಯನ ಚಾರಿತ್ರವನು

ನೆರೆ ಸೊಬಗಿನೊಳುಸುರೆಂದು ನೇಮಿಸಲೆನ್ನಶಿರದೊಳಗಾಂತು ಪೇಳುವೆನು"[೨೧]

ಎಂದಿದೆ. ಚೆಲುವಾಂಬೆಯ ಕೃತಿಗಳು ಸರಳವೂ, ಸುಲಭವೂ ಇದ್ದು, ಜನರ ಮನಸ್ಸನ್ನು ಆಕರ್ಷಿಸುತ್ತವೆ. ಈಕೆ ಭಕ್ತಿಪ್ರಧಾನವಾದ ಕೃತಿಗಳನ್ನು ರಚಿಸಿ ಧರ್ಮ, ದೈವದ ಬಗ್ಗೆ ತನಗಿದ್ದ ಶ್ರದ್ಧೆ, ನಿಷ್ಠೆ ವ್ಯಕ್ತಪಡಿಸಿದ್ದಾಳೆ. ಕಳಲೆಗೆ ಸಂಬಂಧಿಸಿದ ಮತ್ತೊಂದು ಮಹತ್ವದ ಕೃತಿಯೆಂದರೆ "ಚಿಕ್ಕದೇವರಾಯ ವಂಶಾವಳಿ" ಮತ್ತು 'ಚಿಕ್ಕದೇವರಾಜ ವಿಜಯ'. ತಿರುಮಲಾರ್ಯನು ರಚಿಸಿದ ಈ ಕೃತಿಯ ಕಥಾನಾಯಕ ಚಿಕ್ಕದೇವರಾಜನೇ. ಈ ಎಲ್ಲ ಕೃತಿಗಳಲ್ಲಿ ಅವನ ಚರಿತ್ರೆ ಹಾಗೂ ಅವನ ಪೂರ್ವಿಕರ ವಂಶಾವಳಿಗಳ ಚಿತ್ರಣವಿದೆ. ಇದು ಮೈಸೂರರಸರ ವಂಶ ವೃತ್ತಾಂತಕ್ಕೆ ಸಂಬಂಧಿಸಿದ ಕೃತಿ. ಮೈಸೂರರಸರು ಕಳಲೆ, ಬೆಳುಗಲಿ, ಬಿಳಿಕೆರೆ, ಹುರ, ಹುಲ್ಲನ ಹಳ್ಳಿ,

ಮೂಗೂರು ಮೊದಲಾದ ಸ್ಥಳಗಳ ದೊರೆಗಳಿಗೆ ಹೆಣ್ಣು ಕೊಟ್ಟು, ಕಪ್ಪ ತೆತ್ತು ಗೆಳೆಯರಾದ ವಿಷಯವನ್ನು ತಿಳಿಸುತ್ತದೆ. "ತಿರುಮಲನಿಗೆ ಅಲಮೇಲಮ್ಮ ಮತ್ತು ರಂಗಮ್ಮ ಎಂಬ ರಾಣಿಯರಿದ್ದ ರೆಂಬ ವಿವರವನ್ನು ಒದಗಿಸುತ್ತದೆ. ದೊಡ್ಡದೇವ ಮಹಾರಾಜನ ರಾಣಿ ಅಮೃತಾಂಬೆಯು ಗರ್ಭಧರಿಸಿದ ವಿಷಯವಿದ್ದು, ರಾಣಿ ಅಮೃತಾಂಬೆ ಚಿಕ್ಕದೇವರಾಯನ ತಾಯಿ" ಎಂಬ ವಿಷಯವನ್ನು ಪ್ರಸ್ತುತಪಡಿಸುತ್ತದೆ.

'ಬಿಳಗಿ ಅರಸುಗಳ ವಂಶಾವಳಿ' ಕ್ರಿ.ಶ.೧೭೦೦ರಲ್ಲಿ ಪ್ರಕಟಗೊಂಡಿರುವ ಈ ಕೃತಿಯ ರಚನೆಕಾರ ಯಾರೆಂದು ತಿಳಿದಿಲ್ಲ. ವೀರಪ್ಪೊಡೆಯನ ರಾಣಿ ವೀರಮ್ಮಾಂಬೆ, ರಂಗರಾಜನ ರಾಣಿ ಚೆಲುವಮ್ಮ, ಇಮ್ಮಡಿ ಘಂಟೇಂದ್ರನ ಪತ್ನಿಯರಾದ ರಾಮಾದೇವಿ, ವೀರಮಾಂಬೆ, ಮೌನಘಂಟೆಯ ರಾಣಿ ಚನ್ನಮ್ಮದೇವಿಯರ ಉಲ್ಲೇಖಗಳಿವೆ. ಮೌನಘಂಟೆಯ ಸೋದರಿಯಾದ ಘಂಟೆಯಮ್ಮ ಇಕ್ಕೇರಿಯ ಭದ್ರಯ್ಯನನ್ನು ವಿವಾಹವಾದಳೆಂಬ"[೨೩] ವಿಷಯವಿದೆ. ಅಲ್ಲದೆ ಕೆಳದಿ ಶಿವಪ್ಪನಾಯಕ ಬಿಳಗಿ ವಶಪಡಿಸಿಕೊಳ್ಳಲು ಯತ್ನಿಸಿದಾಗ ಘಂಟೆಮ್ಮಾಜಿ ತಾನು ಅರಸು ಮನೆತನದ ಕುಡಿಯೆಂದು ತನಗೆ ರಾಜ್ಯ ಸಲ್ಲಬೇಕೆಂದು ಬಾಳ್ಗೋಡಿಗೆ ಬಂದು ಅಧಿಕಾರಕ್ಕೆ ಸೆಣಸಿದ ವಿಷಯವಿದೆ.

"ಕೆಳದಿ ಶಿವಪ್ಪ ನಾಯಕರಾಗ ಶುಭ್ರಪುರ
ದಿಳಗಧಿಕರಿಲ್ಲೆನೆ ಕುಮಾರತಿಯು ಘಂಟೆಮ್ಮ
ಸಲುವುದೆಮಗೀ ರಾಜ್ಯವೆಂದು
ಬಾಳ್ಗೋಡಿಗೆ ಬಂದು ವಿಧಿದೇವಿಯಂತೆ
ಪ್ರಳಯಕಾಲದ ದುರ್ಗೆಯಂತೆ ಬಾಧಿಸುತಿರಲ್
ಚಳಕದಿಂ ಸಾಮಾಜಿಕಗೂಡಿ ಕ್ಯಾದಗೆಯ
ನಿಳಯದಿಂ ಕುವರನಂ ತಂದು ಪಟ್ಟಗಟ್ಟೆ
ಮೈಯಿಕ್ಕಿ ಕಾಣ್ಕೆಯಿತ್ತು। ಸಲುವ
ಶಿವಪ್ಪನಾಯಕರುಮೆಂಬಭಿದಾನವಿಟ್ಟು"[೨೪]

ಎಂಬ ವಿವರವಿದೆ.

ಹಾಗಲವಾಡಿ ರಾಣಿಯರ ಬಗ್ಗೆ ಹೆಚ್ಚಿನ ಮಾಹಿತಿಗಳೇನು ಲಭ್ಯವಿಲ್ಲ. ಆದರೆ ಹಾಗಲವಾಡಿ ಪಾಳೇಗಾರರ ಚಾರಿತ್ರಿಕತೆ ಮೇಲೆ ಬೆಳಕು ಚೆಲ್ಲುವ ಪ್ರಮುಖ ಕೃತಿ "ಹಾಗಲವಾಡಿ ಮದ್ವೀರಸ್ವಾಮಿ ಸ್ವರವಚನಗಳು." ಹಾಗಲವಾಡಿ ಪಾಳೇಗಾರರು ವಿಜಯನಗರದ ಅಧೀನ ಸಾಮಂತರಾಗಿದ್ದು. ಈ ವಂಶದ ಮೂಲಪುರುಷ ಎರಿಮಾದಿನಾಯಕ. "ಕ್ರಿ.ಶ.೧೫೪೪ರಲ್ಲಿ ಅಧಿಕಾರ ವಹಿಸಿಕೊಂಡ

ಭೈರವನಾಯಕನು ವೀರಶೈವ ಮತವನ್ನು ಅವಲಂಬಿಸಿದನೆಂಬ ಅಂಶವಿದೆ. ಈ ಭೈರವನಾಯಕನಿಗೆ ಪುತ್ರಸಂತಾನವಿಲ್ಲದಿರುವಾಗ ತಾನು ತನ್ನ ರಾಜಧಾನಿಯ ಗುಡ್ಡದ ಮೇಲೆ ಗುಡಿ ಕಟ್ಟಿಸಿ, ಸ್ಥಾಪಿಸಿದ ಸಿದ್ಧರಾಮೇಶ್ವರ ದೇವರಲ್ಲಿ ಅನನ್ಯ ಭಕ್ತಿಯಿಂದ ಮನದಲ್ಲಿ ಪುತ್ರನನ್ನು ದಯಪಾಲಿಸಲು ಪ್ರಾರ್ಥಿಸಿದನಂತೆ. ಆಗ ಸಿದ್ಧರಾಮೇಶ್ವರನು ಮುದಿ ಜಂಗಮನ ವೇಷದಲ್ಲಿ ಬಂದು ಗೊಲ್ಲನ ಮುಖಾಂತರ ಪ್ರಸಾದ ಕೊಟ್ಟು ಕಳಿಸಿದನೆಂದು, ಅದರಂತೆ ಒಂದು ಗಂಡು ಮಗು ಜನಿಸಿತೆಂದು, ಅವನಿಗೆ ಮುದಿಯಪ್ಪ ನಾಯಕನೆಂದು ಹೆಸರಿಟ್ಟರೆಂಬ ಐತಿಹ್ಯವಿದೆ. ಈತ ಕ್ರಿ.ಶ.೧೫೭೮ರಲ್ಲಿ ಅಧಿಕಾರ ವಹಿಸಿಕೊಂಡನು. ಇಮ್ಮಡಿ ಬಸಪ್ಪನಾಯಕನು ಹಾಗಲವಾಡಿಯ ಅರಸನಾಗಿದ್ದ. ಈತನ ಮಗ ಇಮ್ಮಡಿ ಮುದಿಯಪ್ಪನಾಯಕ ೧೬೨೦ರಲ್ಲಿ ಅಧಿಕಾರ ವಹಿಸಿಕೊಂಡನು. ಈತ 'ಮದ್ವೀರಸ್ವಾಮಿ'ಯರನ್ನು ತನ್ನ ರಾಜಗುರುವನ್ನಾಗಿಸಿ ಕೊಂಡಿದ್ದನು."[೨೫]

ಬಿಜ್ಜಾವರದ ರಾಣಿಯರನ್ನು ಕುರಿತಂತೆ 'ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ' ಪ್ರಮುಖ ಮಾಹಿತಿಯನ್ನು ಒದಗಿಸುತ್ತದೆ. ಇದು ಮಲ್ಲಿಕಾರ್ಜುನ ಕವಿಯಿಂದ ರಚನೆಗೊಂಡಿದೆ. ಈ ಕೃತಿಯು ಈಗಿನ ಮಧುಗಿರಿ, ಬಿಜ್ಜಾವರಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಇಮ್ಮಡಿ ಚಿಕ್ಕಭೂಪಾಲನ ಹಾಗೂ ಆತನ ಪತ್ನಿಯರ ವಿವರವನ್ನು ಒದಗಿಸುತ್ತದೆ. ಲಿಂಗಮ್ಮ ಹಾಗೂ ಚೆನ್ನಾಜಮ್ಮ ಎಂಬ ಪತ್ನಿಯರಿದ್ದು, ಚೆನ್ನಾಜಮ್ಮ ಪಟ್ಟಮಹಿಷಿಯಾಗಿದ್ದಳೆಂಬ ಅಂಶವನ್ನು ಸೂಚಿಸುತ್ತದೆ. ಇಮ್ಮಡಿ ಭೂಪಾಲನಿಗೆ ಸಿದ್ಧಾಜಿ ಮತ್ತು ಸಪ್ಪೆಕ್ಕ ಎಂಬ ಮಕ್ಕಳಿದ್ದರೆಂಬ ಅಂಶವನ್ನು ಪಟ್ಟಮಹಿಷಿ ಚೆನ್ನಾಜಮ್ಮನ ಸದ್ಗುಣವನ್ನು ಕಾವ್ಯ ಉಲ್ಲೇಖಿಸುತ್ತದೆ.

ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯವು ಇಮ್ಮಡಿ ಕರಿತಿಮ್ಮ ಚಿಕ್ಕ ಭೂಪಾಲನ ಪತ್ನಿಯಾದ ಸೋಮಾಂಬೆಯ ರೂಪ, ಲಾವಣ್ಯಗಳ ವಿವರಣೆಯನ್ನು ಒದಗಿಸುತ್ತದೆ.

"ಆ ಪಟ್ಟಣಕ್ಕಧಿಪತಿಯಾಗಿಹ ಚಿಕ್ಕ
ಭೂಪ ರೂಪಿನೊಳಿಕ್ಷುಚಾಪ॥
ಪಾಪ ವಿಲೋಪ ಪ್ರತಾಪನವಗಿತಾ
ನೋಪಳಾಗಿಹಳು ಸೋಮಾಂಬೆ॥
ರತಿಯಂತೆ ರೂಪಾನ್ವಿತೆ ವಲ್ಲತತನದಭಾ
ರತಿಯಂತೆ ಕ್ಷೀರ ವಾರಿಧಿಯ
ಸುತೆಯಂತೆ ಮಾಂಗಲ್ಯದಿಂದರುಂಧತಿಯಂತೆ
ಪತಿಭಕ್ತಿಯಿಂದಾ ಬನಿತೆ"[೨೬]

ಎಂಬ ಉಲ್ಲೇಖವಿದೆ.

ಕೊಡಗಿನ ಇತಿಹಾಸದ ಮೇಲೆ ಬೆಳಕು ಬೀರುವ ಮಹತ್ವದ ಕೃತಿ 'ಕೊಡಗಿನ ಇತಿಹಾಸ'. ಡಿ.ಎನ್.ಕೃಷ್ಣಯ್ಯನವರು ಇದರ ಕರ್ತೃ. ಕೊಡಗಿನ ರಾಣಿಯರಾದ ದೇವಮ್ಮಾಜಿ, ನೀಲಮ್ಮಾಜಿ, ಚಿಕ್ಕದೇವರಾಜ ಒಡೆಯರ ಪುತ್ರಿ ಗೌರಮ್ಮ ಮೊದಲಾದ ರಾಣಿಯರ ವಿವರಗಳಿವೆ. ದೊಡ್ಡ ವೀರ ರಾಜೇಂದ್ರನು ಮರಣ ಹೊಂದುವಾಗ ಖಡ್ಗ ಹಾಗೂ ರಾಜಮುದ್ರೆಯನ್ನು ಮಗಳಾದ ದೇವಮ್ಮಾಜಿಯ ಕೈಗಿರಿಸಿದನು. ಹಾಗಾಗಿ ರಾಣಿ ದೇವಮ್ಮಾಜಿ ಕೊಡಗನ್ನು ಆಳಿದಳು. ಆದರೆ ಬಹುಕಾಲ ಆಳಲಿಲ್ಲ. ಏಕೆಂದರೆ ದೊಡ್ಡವೀರ ರಾಜೇಂದ್ರನ ತಮ್ಮನಾದ ಲಿಂಗರಾಜೇಂದ್ರನು ತಾನು ರಾಣಿಯ ಪ್ರತಿನಿಧಿಯಾಗಿ ಆಳಲು ಪ್ರಾರಂಭಿಸಿ ಎರಡೇ ವರ್ಷದಲ್ಲಿ ರಾಣಿಯ ಎಲ್ಲಾ ಅಧಿಕಾರವನ್ನು ಕಸಿದುಕೊಂಡನೆಂಬ ಮಾಹಿತಿ ತಿಳಿದುಬರುತ್ತದೆ.

ಹಂಡೆ ಪಾಳೇಗಾರರ ವಂಶಾವಳಿ ನಿರೂಪಿಸುವ 'ಬುಕ್ಕರಾಯನ ಚರಿತ್ರೆ'ಯು ಹಂಡೆ ಪಾಳೇಗಾರರ ಮಾಹಿತಿಯನ್ನು ಒದಗಿಸುವ ಮೌಲ್ಯಯುತ ಕೃತಿಯಾಗಿದೆ. ರಾಣಿ ಕಲ್ಯಾಣಮ್ಮ, ನೀಲಮ್ಮ, ಚೆಂಗಳಮ್ಮ, ವೀರಮ್ಮ, ಪೊನ್ನಮ್ಮ, ಚನ್ನಮ್ಮ, ಸಂಕ್ರಮ್ಮ, ಲಿಂಗಮ್ಮ ಇತ್ಯಾದಿ ರಾಣಿಯರ ಬಗೆಗೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ. "ಸಿದ್ಧಪ್ಪನಾಯಕನ ಪತ್ನಿಯಾದ ನೀಲಮ್ಮ ಜಗ್ಗುಲ ಕೂಸಪ್ಪನ ಮಗಳೆಂಬುದಾಗಿ" ಮಾಹಿತಿಯನ್ನು ಒದಗಿಸುತ್ತದೆ. ಅಲ್ಲದೆ ಹಂಡೆ ವಸಂತರಾಯನು "ಬಾಲದ ಹನುಮಪ್ಪನಾಯಕರ ಕಡೆಯಿಂದ ಸಂಬಂಧ ಚಂನಾಗಿ ವಿಚಾರಿಸಿ ನಂಬಿಗೌಡ ಯಂಬಾತನ ಮಗಳು ೯ ವರುಷಗಳ ವಯಸ್ಸು ಉಂಟಾದ ಕಲ್ಯಾಣಮ್ಮ ಯಂಬವರನ್ನು, ನಿಂಬಕಲ್ಲು ಗ್ರಾಮದೊಳಗೆ ಯಿದ್ದ ಕರಿಕೊಟ್ಟೂರಪ್ಪನ ಮಗಳು ೯ ವರುಷ ವಯಸ್ಸವುಳ್ಳ ವೀರಮ್ಮನವರು ೧ಯೀ ಇಬ್ಬರನ್ನು ಏಕಕಾಲದಲ್ಲಿ ಲಗ್ನವಾದ ಮತ್ತು ಮೂರು ತಿಂಗಳೊಳಗೆ ಶಾಲಿವಾಹನ ಶಕೆ ೧೭೨೪(ಕ್ರಿ.ಶ.೧೮೦೨)ನೆಯ ದುಂದುಭಿನಾಮ ಸಂವತ್ಸರದ ಜ್ಯೇಷ್ಠ ಮಾಸದೊಳಗೆ ಯೀ ವಸಂತರಾಯರು ಮೃತ ಹೊಂದಿದನು"[೨೮] ಎಂಬ ವಿಷಯವಿದೆ.

ಹಂಡೆ ಪಾಳೇಗಾರರ ರಾಣಿಯರ ಬಗ್ಗೆ ಕನ್ನಡ ಭಾಷಾ ಸಾಹಿತ್ಯ ಕೃತಿಗಳಲ್ಲದೆ ತೆಲುಗು ಭಾಷಾ ಕೃತಿಯಾದ 'ಹಂಡೆ ಅನಂತಪುರ ಸ್ಥಾನಿಕ ಚರಿತ್ರಂ' ಎಂಬ ಕೃತಿಯು ಹಲವು ಮಾಹಿತಿಯನ್ನು ಒದಗಿಸುತ್ತದೆ. "ಪ್ರಸನ್ನನಾಯಕನ ಪತ್ನಿ ಸಿದ್ಧಮ್ಮ, ರಾಮಪ್ಪನಾಯಕನ ಪತ್ನಿ ಸಿದ್ಧಮ್ಮನ ತಂಗಿಯಾದ ಭದ್ರಪ್ಪನನ್ನು ಸಿದ್ಧಪ್ಪನಾಯಕನು ವಿವಾಹವಾದನು" ಎಂಬ ವಿಷಯವನ್ನು "ಸಿದ್ಧರಾಮಪ್ಪ ನಾಯಕನ ೨ನೇ ಪತ್ನಿ ಹೊನ್ನಮ್ಮಗೌರಿ ಇವರ ಮಗ ಚಿಕ್ಕ ರಾಮಪ್ಪನಾಯಕ, ಈತನ ಪತ್ನಿ ಚೆನ್ನಮ್ಮ ಎಂಬ ಅಂಶವನ್ನು ಈ ಕೃತಿ ತಿಳಿಸುತ್ತದೆ."[೨೯]

ಹಂಡೆ ಪಾಳೇಗಾರರ ರಾಣಿಯರ ಮೇಲೆ ಬೆಳಕು ಬೀರುವ ಮತ್ತೊಂದು ಮಹತ್ವದ ಕೃತಿ 'ಕರ್ನಾಟಕ ಗಡಿಗೆರೆಗಳು'. ಟಿ.ಹೆಚ್.ಎಂ. ಸದಾಶಿವಯ್ಯನವರ ಈ ಕೃತಿ ಹಂಡೆ ಪಾಳೇಗಾರರ

ಚರಿತ್ರೆ ಕಟ್ಟಿಕೊಡಲು ಸಹಕಾರಿಯಾಗಿದೆ. ಹಂಡೆ ಪಾಳೆಗಾರರ ಕೊನೆಯವನಾದ ವಸಂತರಾಯನು ತೀರಿದ ಮೇಲೆ ಈತನ ಹೆಂಡತಿ "ಕಲ್ಯಾಣಮ್ಮ ದತ್ತು ತೆಗೆದುಕೊಳ್ಳುವ ಸಂದರ್ಭದಲ್ಲಿ ಈ ವಂಶದ ವಾರಸುದಾರರು ಎಲ್ಲೆಲ್ಲಿರುವರೆಂಬ ಬಗ್ಗೆ ಮನ್ರೋ ದೊರೆಯಿಂದ ವಿಚಾರಣೆ ನಡೆಸಿ, ಈ ವಂಶದ ಮೂಲ ಪುರುಷರು ವಿಜಾಪುರ ತಾಲ್ಲೂಕು ಬಾಗೇವಾಡಿ ಪರಗಣೆಯ ಮುತ್ತಿಗೆ, ವಡವಡಿಗೆ ಗ್ರಾಮಗಳ ನಾಯಕನಾದ ಲಕ್ಕಿನಾಯಕನೆಂಬುವನೆಂದೂ, ಆತನ ಹಿರೇಮಗ ಬಾಲದ ಹನುಮಪ್ಪರಾಯನು ಅನಂತಪುರ ಬಳ್ಳಾರಿ ಪ್ರಾಂತಕ್ಕೆ ಬಂದು ನೆಲೆಸಿದನೆಂದೂ, ಕಿರಿಯಮಗ ಬಳಗಾನಾಯಕನ ಸಂತತಿಯವರು ವಿಜಾಪುರ ಪ್ರಾಂತದಲ್ಲಿರುವರೆಂದೂ, ತಿಳಿದುಬರಲು ಸದರಿ ಬಳಗಾನಾಯಕನ ಸಂತತಿಯವನಾದ ಸಿದ್ಧರಾಮಪ್ಪನೆಂಬ ಹುಡುಗನನ್ನು ದತ್ತಕ ತೆಗೆದುಕೊಳ್ಳಲು ಮನ್ರೊ ದೊರೆ"[೩೦] ಅಪ್ಪಣೆ ಕೊಟ್ಟನೆಂಬ ವಿಷಯವಿದೆ.

ಕಿತ್ತೂರಿನ ರಾಣಿಯಾದ ಚೆನ್ನಮ್ಮನ ಕುರಿತು ಅಧ್ಯಯನಕ್ಕೆ ಹಲವಾರು ಕೃತಿಗಳು ಆಕರವಾಗಿವೆ. ತಲ್ಲೂರ ರಾಯನಗೌಡರು ರಚಿಸಿದ 'ಕಿತ್ತೂರು ಬಂಡಾಯ' ಕೃತಿ ರಾಣಿ ಚೆನ್ನಮ್ಮನ ಚಾರಿತ್ರಿಕ ಬದುಕನ್ನು ಅನಾವರಣಗೊಳಿಸುತ್ತದೆ. ಕಿತ್ತೂರಿನ ಮೇಲೆ ಹೊಸಬೆಳಕು ಚೆಲ್ಲುವ ಮತ್ತೊಂದು ಮಹತ್ವದ ಕೃತಿ 'ಭಾರತ ಸ್ವತಂತ್ರದ ಬೆಳ್ಳಿ ಚುಕ್ಕಿ.' ಗ.ಸ.ಹಾಲಪ್ಪರಿಂದ ರಚಿತವಾದ ಈ ಕೃತಿಯು ಕಿತ್ತೂರು ಸಂಸ್ಥಾನಕ್ಕೆ ಸಂಬಂಧಿಸಿದಂತೆ ಹಲವಾರು ಚಾರಿತ್ರಿಕ ಸಂಗತಿಯನ್ನು ಅನಾವರಣಗೊಳಿಸುತ್ತದೆ. ರಾಣಿ ಚೆನ್ನಮ್ಮ, ವೀರಮ್ಮ, ಜಾನಕಿಬಾಯಿ, ರಾಣಿ ರುದ್ರಮ್ಮ, ರಾಣಿ ನೀಲಾಂಬೆ ಹೀಗೆ ಹಲವಾರು ರಾಣಿಯರ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಬದುಕಿನ ಹಲವು ಮಜಲುಗಳನ್ನು ಕಟ್ಟಿಕೊಡುತ್ತದೆ. ವಿದೇಶಿಯರೊಂದಿಗೆ ರಾಣಿಯರು ನಡೆಸಿದ ಪತ್ರ ವ್ಯವಹಾರ ಕುರಿತು ದಾಖಲೆ ನೀಡುವ ಕೃತಿ ಇದಾಗಿದೆ.

ಕಿತ್ತೂರಿನ ಪ್ರಮುಖ ಘಟನೆಗಳ ಚಾರಿತ್ರಿಕತೆಯನ್ನು ಕಟ್ಟಿಕೊಡುವ ಮತ್ತೊಂದು ಮಹತ್ವದ ಕೃತಿಯೆಂದರೆ 'ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ' ಎಂಬ ಕೃತಿಯು ಹಲವಾರು ಮಹತ್ವದ ದಾಖಲೆಗಳನ್ನು ರಾಣಿಯರ ಕುರಿತಾಗಿ ನೀಡುತ್ತದೆ. ಕಿತ್ತೂರಿನ ರಾಣಿ ಚೆನ್ನಮ್ಮಾಜಿಯ ದಿಟ್ಟ ಹೆಜ್ಜೆ ಗುರುತುಗಳನ್ನು ದಾಖಲಿಸಿದೆ. "Let death come thous we shall not surrender when things were moving towards acrisis chennamma alone had to make a final decision, she was not prepared to step down. she vaheed kitturs freedom more than her life. she had tried her best."[೩೧] ಎಂಬ ಉಲ್ಲೇಖವಿದ್ದು, ರಾಣಿ ಚೆನ್ನಮ್ಮಾಜಿ, ಈರಮ್ಮಾ ನವ್ಹೆಂಬರ ೧೨, ೧೮೨೪ರಲ್ಲಿ ಮನ್ರೋವಿನೊಂದಿಗೆ ಮಾಡಿದ ಪತ್ರವ್ಯವಹಾರದ ವಿವರಗಳಿವೆ.

'ರಾಣಿ ಚೆನ್ನಮ್ಮ' ಎಂಬ ಕೃತಿಯು ಸದಾಶಿವ ಒಡೆಯರಿಂದ ರಚನೆಗೊಂಡಿದ್ದು, ಕಿತ್ತೂರು ಸಂಸ್ಥಾನದ ಹಿನ್ನೆಲೆ, ಮಲ್ಲಸರ್ಜನ ಏಳ್ಗೆ, ರಾಣಿ ಚೆನ್ನಮ್ಮನ ಆಡಳಿತ, ದತ್ತಕ ನೀತಿಯ ವಿರೋಧ, ವಿದೇಶಿಯರೊಂದಿಗೆ ಜಯ, ಎರಡನೇ ಕಿತ್ತೂರಿನ ಯುದ್ಧ, ಪರಾಜಯ ಇತ್ಯಾದಿ ಸಂಗತಿಗಳನ್ನು ವಿವರಿಸುತ್ತದೆ.

ಕಿತ್ತೂರ ಸಂಸ್ಥಾನ ಸಾಹಿತ್ಯ ಭಾಗ-೧ ಮತ್ತು ಭಾಗ-೨ ಕೃತಿಗಳು ಕಿತ್ತೂರು ಸಂಸ್ಥಾನದ ಇಡಿಯಾದ ಚಿತ್ರಣವನ್ನು ಒದಗಿಸುತ್ತದೆ. ಕನ್ನಡ ಚಾರಿತ್ರಿಕ ಕೃತಿಗಳು ಇನ್ನೂ ಅಪ್ರಕಟಿತ ಸ್ಥಿತಿಯಲ್ಲಿದ್ದು, ಅವುಗಳಲ್ಲಿ ಮಹತ್ವದ ಕೆಲ ಕಾವ್ಯಗಳು ಕರ್ನಾಟಕ ಲಿಂಗಾಯತ ರಾಣಿಯರ ವ್ಯಕ್ತಿತ್ವವನ್ನು ಪರಿಚಯಿಸುವ ಆಕರಗಳಾಗಿವೆ. ಇತ್ತೀಚೆಗೆ 'ಕಿತ್ತೂರು ರುದ್ರಮ್ಮನ ಕಥೆ' ಹೆಸರಿನ ಬಯಲಾಟ ಹಸ್ತಪ್ರತಿಯೊಂದು ಹಂಪಿ ಕನ್ನಡ ವಿಶ್ವವಿದ್ಯಾಲಯ ಭಂಡಾರದಲ್ಲಿದ್ದು, ಅದು ಮಲ್ಲಸರ್ಜನರಾಣಿ, ತಲ್ಲೂರು ಮನೆತನದ ರುದ್ರಮ್ಮನ ಶಿವಪೂಜಾ ನಿಷ್ಠೆ ಮತ್ತು ಶೌರ್ಯವನ್ನು ವರ್ಣಿಸುತ್ತದೆ.

ಹೀಗೆ ಕರ್ನಾಟಕ ಲಿಂಗಾಯತ ರಾಣಿಯರ ದಾನ-ದತ್ತಿ, ದತ್ತುಕ, ಶಿಕ್ಷಣ ಸಾಮಾಜಿಕ ಕಾರ್ಯಗಳಿಗೆ ನೀಡಿದ ಕೊಡುಗೆಯನ್ನು ಉಲ್ಲೇಖಿಸಿರುವ ಕಾವ್ಯ-ಸಾಹಿತ್ಯ ಇವರ ಅಧ್ಯಯನದ ಆಕರಗಳಾಗಿ ಪರಿಣಮಿಸಿವೆ.

**೩.೧.೨. ಜನಪದ ಸಾಹಿತ್ಯ**

'ಜೀವಂತ ಜಾನಪದದ ಸಮೃದ್ಧ ಉಗ್ರಾಣ ಭಾರತ' ಎಂಬ ಅಲೆನ್ ಡಂಡೇಸ್‌ರ ಮಾತಿನಂತೆ ಭಾರತವು ಜಾನಪದದ ಎಲ್ಲಾ ಪ್ರಕಾರಗಳನ್ನು ತನ್ನ ಒಡಲಿನಲ್ಲಿರಿಸಿಕೊಂಡಿದ್ದು, ಜಾನಪದ ಸಂಶೋಧಕರಿಗೆ ಅದ್ವಿತೀಯ ಅವಕಾಶಗಳ ಬಾಗಿಲನ್ನು ತೆರೆದಿದೆ ಎಂಬುದು ಸತ್ಯದ ಮಾತು. ಒಂದು ದೇಶದ ಸಂಸ್ಕೃತಿಯ ಮೂಲವನ್ನು ತಿಳಿಯಲು ಜನಪದ ಸಾಹಿತ್ಯ ಬಹು ಮುಖ್ಯವಾದ ಆಕರವಾಗಿ ನಿಲ್ಲುತ್ತದೆ. ಜಾನಪದವು ಅನೇಕ ಶಿಸ್ತುಗಳನ್ನು ತನ್ನಲ್ಲಿ ಗರ್ಭೀಕರಿಸಿ ಕೊಂಡಿದೆ. ಪುರಾತತ್ವಶಾಸ್ತ್ರ, ಮಾನವಶಾಸ್ತ್ರ, ಸಂಖ್ಯಾಶಾಸ್ತ್ರ, ತತ್ವಶಾಸ್ತ್ರ, ನೀತಿಶಾಸ್ತ್ರ ಹೀಗೆ ಹಲವು ಶಾಸ್ತ್ರಗಳಿಗೆ ಜನಪದವು ತಾಯಿಬೇರಾಗಿದೆ. ಆಯಾ ಜನಾಂಗದ ಭೌಗೋಳಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಹಿನ್ನೆಲೆಗಳೆಲ್ಲವನ್ನು ತಿಳಿಯಲು ಜನಪದ ಸಾಹಿತ್ಯ ಸಹಕಾರಿಯಾಗಿದೆ. ಶಿಷ್ಟಸಾಹಿತ್ಯ ಅಲ್ಪಸಂಖ್ಯಾತರ ಆರಾಧ್ಯ ಸಾಹಿತ್ಯವಾದರೆ, ಜನಪದ ಬಹುಸಂಖ್ಯಾತರ ಜೀವನದ ಉಸಿರಲ್ಲಿ ಬೆರೆತಿದೆ. ಜನಪದ ಸಾಹಿತ್ಯವನ್ನು ಮರೆತ ಅಧ್ಯಯನ ಅಸಮರ್ಪಕವಾದುದು. ಹೀಗಾಗಿ ಜನಪದ ಸಾಹಿತ್ಯವು ಸಮಷ್ಟಿಯ ಪ್ರತೀಕವಾಗಿದೆ.

ಜಾನಪದದ ವೈಜ್ಞಾನಿಕ ಅಧ್ಯಯನಕ್ಕೆ ನಾಂದಿಯನ್ನು ಹಾಡಿದವರು ಜರ್ಮನ್ನರು. ಹೀಗೆ ಜರ್ಮನ್ನರಿಂದ ಆರಂಭಗೊಂಡ ಈ ತೆರನ ಅಧ್ಯಯನ ಕನ್ನಡ ವಿದ್ವಾಂಸರ ಮೇಲೂ ಪ್ರಭಾವವನ್ನು ಬೀರಿತು. ಈ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಂಡ ವಿದ್ವಾಂಸರನೇಕರು 'ಜಾನಪದ ವಿಜ್ಞಾನ', 'ಕ್ಷೇತ್ರವಿಜ್ಞಾನ'ವೆಂದು ಕರೆದು ಜಾನಪದವನ್ನು ಶಾಸ್ತ್ರದ(Lore) ನೆಲೆಯಿಂದ ವಿಜ್ಞಾನ(loristics)ದ ಹಂತಕ್ಕೆ ಕೊಂಡೊಯ್ದಿದ್ದಾರೆ. ಇಂದು ಜಾನಪದವೆಂದರೆ ಬರೀ ಸಾಹಿತ್ಯವಲ್ಲ. ಸಂಸ್ಕೃತಿಯ ವಿರಾಟ್ ರೂಪ. ಈ ಹಿನ್ನೆಲೆಯಲ್ಲಿ ಹಾ.ಮಾ. ನಾಯಕರ 'ಜಾನಪದವು ಕೇವಲ ಊಹಾತ್ಮಕ ಶಾಸ್ತ್ರವಲ್ಲ, ವಾಸ್ತವಿಕ ಆಧಾರಗಳ ಮೇಲೆ ನಿಲ್ಲಬಲ್ಲ ವಿಜ್ಞಾನವಾಗಿದೆ' ಎಂಬ ಮಾತು ಸಮರ್ಥಿಸುತ್ತದೆ.

ಕನ್ನಡ ಶಿಷ್ಟಕವಿಗಳು ವೀರಕಾವ್ಯ ಪರಂಪರೆಯನ್ನು ಅಷ್ಟಾಗಿ ಬೆಳೆಸಿಕೊಂಡು ಬಂದಿಲ್ಲ ವೆಂಬುದು ಸತ್ಯ. ಶಿಷ್ಟಸಾಹಿತ್ಯದ ಬಹುದೊಡ್ಡ ಕೊರತೆಯನ್ನು ವಾಕ್ಪರಂಪರೆಯ ಫಲಗಳಾದ ಜನಪದ ಕಥೆಗಳು, ವೀರಗೀತೆಗಳು, ಲಾವಣಿಗಳು, ದುಂದುಮೆ, ಕೋಲುಪದ, ಒಗಟುಗಳು, ಐತಿಹ್ಯ, ವದಂತಿಗಳು, ತುಂಬಿಕೊಡುತ್ತವೆ. ಕ್ರಿ.ಪೂ.೫ನೇ ಶತಮಾನಕ್ಕೂ ಮೊದಲು ಪಾಶ್ಚಿಮಾತ್ಯ ದೇಶಗಳಲ್ಲೂ ಸಹ ಇತಿಹಾಸವೆಂದರೆ ದಂತಕಥೆ, ಸ್ಥಳೀಯ ವೀರರ ಕಥೆ, ಲಾವಣಿ ಇತ್ಯಾದಿ ಗಳನ್ನಾಧರಿಸಿದ ಸಂಗತಿಯೆನಿಸಿದ್ದಿತೆಂತಲೂ, ಸಮರದ ಸಂದರ್ಭದಲ್ಲಿ ಯೋಧರಲ್ಲಿ ತಕ್ಕ ಸ್ಫೂರ್ತಿ, ಆವೇಶಗಳನ್ನುಂಟು ಮಾಡಲು ಈ ಬಗೆಯ ಚರಿತ್ರೆಯನ್ನು ಸಾಧನವಾಗಿ ಬಳಸುತ್ತಿದ್ದರು.

ಮಾನವನ ಆದಿಯಿಂದ ಇವತ್ತಿನವರೆಗಿನ ವಿಕಾಸದ ಘಟ್ಟಗಳೆಲ್ಲವನ್ನು ಜನಪದ ಕಥೆಗಳು ಬಿಂಬಿಸುತ್ತವೆ. ಸಾಧಕನ ಹೋರಾಟ, ಯೋಧನ ಸಾಹಸ, ಸಂಚಾರಿಯ ಪ್ರವಾಸ, ದುಃಖಿಯ ವನವಾಸ, ಇಷ್ಟಸಿದ್ಧಿಯ ಪ್ರಾಪ್ತಿ ಮೊದಲಾದವುಗಳ ನಿರೂಪಣೆಯೇ ಕಥೆಯ ದಾರಿ. ಕೆಲಸ ಮಾಡಿ ಒಂದೆಡೆಗೆ ಕುಳಿತಾಗ, ಹಿರಿಯರು, ಕಿರಿಯರು ಒಂದೆಡೆಗೆ ಕುಳಿತಾಗ, ಹಿರಿಯರಾದವರು ಕಿರಿಯರಿಗೆ ಕಥೆ ಹೇಳುವ ಮೂಲಕ ಮಕ್ಕಳಿಗೆ ನೀತಿ ಕಲಿಸುವ ಪರಿಪಾಠ ನಮ್ಮಲ್ಲಿ ಮೊದಲಿನಿಂದಲೂ ಸಾಗಿ ಬಂದಿದೆ. ಅಜ್ಜಿ ಹೇಳುವ ಕಥೆಗಳು ಸ್ವಾರಸ್ಯಕರವಾಗಿದ್ದು, ಇಲ್ಲಿ ಪಶುಗಳು ಮಾತಾಡುತ್ತವೆ. ಪಕ್ಷಿಗಳು ಓಲೆಕಾರನಂತೆ ಕೆಲಸ ಮಾಡುತ್ತವೆ. ಸಿಂಹ, ಹುಲಿಯಂಥ ಪ್ರಾಣಿಗಳು ಪರೋಪಕಾರ ಮಾಡುವುವು. ಇಲಿ-ಇಣಚಿಗಳಂಥ ಪ್ರಾಣಿಗಳು ಉಪಕಾರ ಮಾಡಬಲ್ಲವು. ಹೀಗೆ ಜನಪದ ಕಥೆಗಳು ಮಾನವ ಹೇಗೆ ಬದುಕಬೇಕು, ಲೋಕದಲ್ಲಿ ಅವನು ಹೇಗೆ ವರ್ತಿಸಬೇಕು ಎಂಬ ರೀತಿಯನ್ನು, ಸಮಾಜದ ವಿಧಿ ನಿಯಮಗಳನ್ನು ಮೀರಿದವರು ಎಂಥ ಕ್ರೂರ ಶಿಕ್ಷೆ ಅನುಭವಿಸಬೇಕಾಗುತ್ತದೆ ಎಂಬುದಕ್ಕೆ ಹಲವಾಗು ಕಥೆಗಳು ಕೈಗನ್ನಡಿಯಾಗಿವೆ.

ಸಾಮಾನ್ಯ ಜನರ ಸಾಹಿತ್ಯವಾದ ಜನಪದ ಸಾಹಿತ್ಯವು ಬರೆಯಲ್ಪಟ್ಟುದುದಲ್ಲ. ತಮ್ಮ ಮನಸ್ಸನ್ನು ಕಲಕಿದ ಸಮಕಾಲೀನ ಘಟನೆ ನೇರವಾಗಿ ಕಂಡ, ಕೇಳಿದ ಸಂಗತಿಯನ್ನು

ಸ್ಮರಣೆಯಲ್ಲಿ ನೆನೆಹಾಕಿ ಪಾಕಗೊಂಡ ಮೇಲೆ ಜನಪದದ ರೂಪವನ್ನು ಪಡೆಯುತ್ತದೆ. ದೊಡ್ಡ ದೊಡ್ಡ ರಾಜಮನೆತನಗಳಿಗಿಂತಲೂ, ಸಣ್ಣಪುಟ್ಟ ರಾಜಮನೆತನಗಳ ಬಗ್ಗೆ ವಿಪುಲವಾದ ಜಾನಪದ ಸಾಮಗ್ರಿ ದೊರೆಯುತ್ತದೆ. ಇದಕ್ಕೆ ಕಾರಣ ಸಣ್ಣಪುಟ್ಟ ರಾಜಮನೆತನಗಳು ಜನರಿಗೆ ಹೆಚ್ಚು ಹತ್ತಿರವಾಗಿ ಆಳ್ವಿಕೆ ನಡೆಸಿದುದೇ ಎನ್ನಬಹುದು. ಹೀಗೆ ದೊರೆತ ಜಾನಪದ ಸಾಮಗ್ರಿಗಳು ಕೆಲವೊಮ್ಮೆ ತಲೆಬುಡವಿಲ್ಲವಾಗಿ ತೋರಬಹುದು. ಆದರೆ ಜಾನಪದ ಸಾಮಗ್ರಿಗಳ ಕೋಟೆಯನ್ನು ಭೇದಿಸುತ್ತಾ ಸಾಗಿದಲ್ಲಿ ಸತ್ಯಾಂಶದ ಬೆಳಕು ಕಾಣಲು ಸಾಧ್ಯವಾಗಬಹುದು. 'ದೇವಚಂದ್ರನ ರಾಜಾವಳಿ ಕಥಾಸಾರ'ದಂಥ ಚಾರಿತ್ರಿಕ ಅಂಶಗಳನ್ನು ತನ್ನ ಗರ್ಭದಲ್ಲಿರಿಸಿಕೊಂಡ ಕಾವ್ಯವು ನಿರ್ಮಾಣದ ಸಂದರ್ಭದಲ್ಲಿ ಅಲ್ಲಿನ ಪರಿಸರ, ಸ್ಥಳಪುರಾಣ, ಜನಪದ ಕಥೆಗಳನ್ನು ಬಳಸಿಕೊಂಡಿರುವುದು ವಿಶೇಷ.

ಪ್ರಸ್ತುತ ಜನಪದ ಸಾಹಿತ್ಯ ಆಕರಗಳಲ್ಲಿ ಪ್ರಮುಖವಾಗಿ ಐತಿಹ್ಯಗಳು, ವದಂತಿಗಳು, ಕಥೆಗಳು, ಲಾವಣಿಗಳು ಮುಖ್ಯವಾಗುತ್ತವೆ. ವಿಶೇಷವಾಗಿ ಕಿತ್ತೂರು ಸಂಸ್ಥಾನದ ಇತಿಹಾಸಕ್ಕೆ ಲಾವಣಿ ಸಾಹಿತ್ಯ ಪ್ರಮುಖ ಆಕರ ಎನ್ನುವಂತೆ ರಚನೆಗೊಂಡಿರುವುದು ಲಕ್ಷಿಸಬೇಕಾದ ಸಂಗತಿ. ಇವುಗಳನ್ನು ಹೊರತುಪಡಿಸಿದರೆ. ಐತಿಹ್ಯ, ವದಂತಿಗಳು, ಚಾರಿತ್ರಿಕ ಮಹತ್ವದಿಂದ ಗೌಣವೆನಿಸಿದರೂ ಅಥವಾ ನಂಬಲರ್ಹವಲ್ಲದ ಆಕರಗಳೆನಿಸಿದರೂ ಅಲ್ಪಸ್ವಲ್ಪವಾದರೂ ವಾಸ್ತವತೆಯಿಂದ ಕೂಡಿರುವುದನ್ನು ಅಲ್ಲಗಳೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ಆ ಆಕರಗಳಲ್ಲಿ ಉಲ್ಲೇಖಿತವಾಗಿರುವ ಅತಿಮಾನುಷ ಘಟನೆಗಳನ್ನು ಹೊರತುಪಡಿಸಿ, ಚಾರಿತ್ರಿಕತೆಯ ಆಂಶಿಕ ಭಾಗವನ್ನು ಅಧ್ಯಯನಕ್ಕೆ ಬಳಸಿಕೊಳ್ಳುವುದರಲ್ಲಿ ಯಾವುದೇ ದೋಷವೆನಿಸದು. ಏಕೆಂದರೆ ಪುರಾಣಗಳು ಶಿಷ್ಟಕವಿಗಳ ಚರಿತ್ರೆಯಾದರೆ, ಐತಿಹ್ಯ, ವದಂತಿಗಳು ಜನಪದರ ಚರಿತ್ರೆಯಾಗಿವೆ. ಈ ಕಾರಣವಾಗಿ ಜನಪದ ಸಾಹಿತ್ಯಕ್ಕೆ ಚಾರಿತ್ರಿಕ ಮಹತ್ವ ಇರುವುದನ್ನು ಒಪ್ಪಿಕೊಳ್ಳಬಹುದು. ಒಂದರ್ಥದಲ್ಲಿ ಜನಪದ ಸಾಹಿತ್ಯವೆಂದರೆ ಹೆಣ್ಣು ಮಕ್ಕಳ ಹಾಡುಗಳು, ಹಂತಿ, ಹೋಳಿಹಾಡುಗಳನ್ನು ಬಿಟ್ಟರೆ, ಎಲ್ಲವೂ ಗರತಿಯರಿಂದ, ಗರತಿಯರಿಗಾಗಿ ರಚನೆಯಾದ ಹಾಡುಗಳೇ ಆಗಿವೆ. ಆದರೆ ಶಿಷ್ಟ ಸಾಹಿತ್ಯದಷ್ಟು ಕರ್ನಾಟಕ ರಾಣಿಯರನ್ನೇ ಕುರಿತು ಪ್ರಖರವಾದ ಸಾಹಿತ್ಯ ಇಲ್ಲಿ ರಚನೆಯಾಗದಿದ್ದರೂ, ಪ್ರಾಸಂಗಿಕವಾಗಿ ತಮ್ಮ ಬದುಕಿನ ಆದರ್ಶಕ್ಕೆ ತಮ್ಮ ಮನೆತನದ ಪ್ರತಿಷ್ಠೆಗೆ ಆದರ್ಶದಿಂದ ಬದುಕಿದ ಅಕ್ಕಮಹಾದೇವಿ, ನೀಲಾಂಬಿಕೆ, ಚೆನ್ನಮ್ಮ, ರುದ್ರಮ್ಮ ಮುಂತಾದವರನ್ನು ಹೋಲಿಸಿಕೊಂಡು ಆ ನೆಪದಲ್ಲಿ ಅದರ ಚಾರಿತ್ರಿಕ ಬದುಕನ್ನು ಕಟ್ಟಿಕೊಡುವ ಪ್ರಯತ್ನದ ಹಿಂದೆ ಜನಪದ ಸಾಹಿತ್ಯದ ಚಾರಿತ್ರಿಕ ಪ್ರಜ್ಞೆ ಕಂಡುಬರುತ್ತದೆ. ಈ ಪ್ರಜ್ಞೆಯನ್ನು ಐತಿಹ್ಯ, ವದಂತಿ, ಕಥೆ, ಲಾವಣಿ ಹಾಗೂ ಇತರ ಮೂಲಗಳಿಂದ ಪರಿಶೋಧಿಸಿ ಲಿಂಗಾಯತ ರಾಣಿಯರ ಆಕರ ವ್ಯಾಪ್ತಿಗೆ ಜನಪದ ಸಾಹಿತ್ಯದ ಕೊಡುಗೆಯನ್ನು ಪರಾಮರ್ಶಿಸುವುದು ಇಲ್ಲಿಯ ಉದ್ದೇಶವಾಗಿದೆ.

೧. **ಐತಿಹ್ಯಗಳು:** ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದ ಜನಪದ ಪುರಾಣ. ಜಾನಪದ ತಜ್ಞರು, ನಿಘಂಟುಕಾರರು 'Legend' ಎಂಬ ಪದಕ್ಕೆ ಸಂವಾದಿಯಾಗಿ ಐತಿಹ್ಯ ಎಂಬ ಪದವನ್ನು ಬಳಸಿದ್ದಾರೆ. 'ಐತಿಹ್ಯವೆಂದರೆ 'ಪರಂಪರೆಯಿಂದ ಬಂದಿರುವುದು'. ಪುರಾಣ, ಚರಿತ್ರೆ ಪ್ರಮಾಣವಿಲ್ಲದೆ ಪರಂಪರೆಯಿಂದ ಬಂದ ಮಾತು ಎನ್ನಬಹುದು. 'ಐತಿಹ್ಯಂ ಇತಿಹಾಸವೆನಿಸುಗುಂ"[೩೨] ಎಂಬುದಾಗಿಯೂ ನಿಘಂಟಿನಿಂದ ಅರ್ಥ ಹೊರಡುತ್ತದೆ. ಅಲ್ಲದೆ 'ಇತಿಃ'ದಿಂದ ಬಂದಿತೆಂದು "oral tradition', a Legend, a tale"[೩೩] ಎಂಬ ಅರ್ಥವನ್ನು ಕೊಡಲಾಗಿದೆ.

ಐತಿಹ್ಯವೆಂದರೆ ನಿರ್ದಿಷ್ಟ ವ್ಯಕ್ತಿ, ಸ್ಥಳ, ವಸ್ತುಗಳಿಗೆ ಸಂಬಂಧಪಟ್ಟ ಕಥೆಯಾಗಿದೆ. ಇವು ಚರಿತ್ರೆಯನ್ನು ನಿರ್ಮಿಸುವಲ್ಲಿ ಆಧರಿತ ಆಕರಗಳಾಗಿವೆ. ಜನಪದರ ನಾಲಿಗೆಯ ಮೇಲೆ ಮಡುಗಟ್ಟಿ ನಿಂತಿರುವ ಒಂದು ಸ್ಥಳವನ್ನೋ, ಒಬ್ಬ ವ್ಯಕ್ತಿಯನ್ನೋ ಅಥವಾ ಒಂದು ಘಟನೆಯನ್ನೋ ಕುರಿತ ಕಥಾನಕಗಳೇ ಐತಿಹ್ಯಗಳು. ನಮ್ಮ ನಾಡಿನ ಹಲವೆಡೆಗಳಲ್ಲಿ ಇಂಥ ಐತಿಹ್ಯಗಳು ದೊರೆಯುತ್ತವೆ. ಐತಿಹ್ಯವು ವಾಸ್ತವವಾಗಿ ನಡೆದುದೇ ಎಂದು ನಂಬಿಕೊಂಡು ಬಂದಿರುವ ಅಸಾಮಾನ್ಯ ಘಟನೆಯೊಂದರ ಕಥೆ. ಪ್ರಾಚೀನ ಕಾಲದ ಯಾವುದೇ ಒಂದು ಸಣ್ಣ ಚಾರಿತ್ರಿಕ ಘಟನೆಯ ಸುತ್ತ ಅದ್ಭುತವಾದ ಸನ್ನಿವೇಶಗಳು ಬೆಳೆದು ತಲೆಮಾರುಗಳ ಮೂಲಕ ಹರಿಯುವ ಕಥೆಯಾಗಿ ರೂಪಗೊಂಡರೆ ಅಂಥವನ್ನು ಐತಿಹ್ಯ ಎನ್ನಲಾಗುವುದು"[೩೪] ಎಂದು ರಾಜಪ್ಪ ದಳವಾಯಿಯವರು ಅಭಿಪ್ರಾಯಪಡುತ್ತಾರೆ. ಇಂಥ ಐತಿಹ್ಯಗಳು ಕೆಲವು ರಾಣಿಯರ ವ್ಯಕ್ತಿತ್ವವನ್ನು ಪ್ರತಿಪಾದನೆ ಮಾಡುವ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿವೆ. ಒಂದು ಸಾಮ್ರಾಜ್ಯದ ಸ್ಥಾಪನೆ ಮತ್ತು ಅದರ ಬೆಳವಣಿಗೆ ಹಾಗೂ ಸ್ಥಳಾಂತರ ಕುರಿತು ಚಿತ್ರಿಸುವ ಐತಿಹ್ಯಗಳು ರಾಣಿಯರನ್ನು ಕುರಿತು ವಿರಳವೆಂದೇ ಹೇಳಬಹುದು. ಸಿಕ್ಕ ಕೆಲವೇ ಐತಿಹ್ಯಗಳನ್ನು ಆಕರಗಳೆಂದು ಪರಿಗಣಿಸಿ ಅವುಗಳ ಐತಿಹಾಸಿಕ ಸಾಧ್ಯಾಸಾಧ್ಯತೆಯನ್ನು ಅಧ್ಯಯನ ಮಾಡಬಹುದಾಗಿದೆ.

ಕೆಳದಿ ಇತಿಹಾಸಕ್ಕೆ ಸಂಬಂಧಿಸಿದ ಐತಿಹ್ಯಗಳಲ್ಲಿ ಪರಾಕ್ರಮಿಗಳ ಸಾಹಸವನ್ನು ತ್ಯಾಗ, ಸತ್ಯಸಂಧತೆಯನ್ನು ಎತ್ತಿ ಹಿಡಿಯುವ ಘಟನೆಗಳು ವಿಶೇಷವಾಗಿ ಕಂಡುಬರುತ್ತವೆ. ಸಾಮಾಜಿಕ ಐತಿಹ್ಯಗಳು ಪವಾಡ ಸದೃಶವಾದ ಅದ್ಭುತ ಅಂಶಗಳನ್ನು ವಿವರಿಸಿದರೂ ಇವುಗಳಲ್ಲಿ ವಾಸ್ತವಾಂಶದ ಎಳೆಗಳನ್ನು ಗುರುತಿಸಬಹುದು. ಯಾವುದೋ ಘಟನೆ, ಯಾವುದೋ ವಸ್ತು, ವ್ಯಕ್ತಿಯನ್ನು ನೆನಪಿನಲ್ಲಿಟ್ಟುಕೊಂಡು ತನ್ನ ಪ್ರತಿಭಾಚಾತುರ್ಯದಿಂದ ಅದ್ಭುತವಾದ ಕತೆಯನ್ನು ಹೇಳುವ ಇಂಥ ಪ್ರಸಂಗಗಳಲ್ಲಿ ಜೀವನಕ್ಕೆ ಅವಶ್ಯವಾದ ತತ್ವಗಳನ್ನು ಸಾರಿ ಹೇಳುತ್ತವೆ. ಹೀಗೆ ನಡೆದಿವೆ ಎನ್ನಬಹುದಾದ ಐತಿಹ್ಯಗಳು ಎಲ್ಲಿ ಹುಟ್ಟಿದವು, ಹೇಗೆ ಹುಟ್ಟಿದವು, ಇವು ಎಷ್ಟರಮಟ್ಟಿಗೆ ಸತ್ಯವಾದವು ಎಂಬುದನ್ನು

ನಿರ್ಧರಿಸಲಾಗದು. ಶಿವತತ್ವರತ್ನಾಕರ ಮತ್ತು ಕೆಳದಿನೃಪ ವಿಜಯದಲ್ಲೂ ದಂತಕಥೆಗಳಿವೆ. ಈ ಗ್ರಂಥಗಳಲ್ಲಿ "ಪಳ್ಳಿ ಬಯಲಿನಲ್ಲಿದ್ದ ರೈತ ಕುಟುಂಬದ ಚೌಡಪ್ಪನಿಗೆ ಭೂಗತವಾದ ನಿಧಿ ಹಾಗೂ ನಾಗರ ಮುರಿ ಎಂಬ ಕತ್ತಿಯೂ ಸಿಕ್ಕಿತೆಂದು, ನಂತರ ಚವುಡಪ್ಪ ನಾಯಕನಾದನು"[೩೫] ಎಂಬ ಐತಿಹ್ಯ ಕೆಳದಿ ರಾಜರ ವಂಶಾವಳಿಯಲ್ಲಿ ಉಲ್ಲೇಖಗೊಂಡಿದೆ.

ಕೆಳದಿ ಅರಸರ ಎರಡನೇ ರಾಜಧಾನಿ ಇಕ್ಕೇರಿಯಲ್ಲೂ ಒಮ್ಮೆ ಚವುಡಪ್ಪನು ಬೇಟೆಗೆ ಹೋದಾಗ ಮೊಲಗಳು, ನಾಯಿಗಳನ್ನು ಹೆದರಿಸಿ ಓಡಿಸಿದವು. ಇಂಥ ಸಾಧುಪ್ರಾಣಿಗಳು ನಾಯಿಗಳನ್ನು ಓಡಿಸಿದ್ದರಿಂದ ಇದು ಗಂಡುಭೂಮಿಯೆಂದು ತಿಳಿದು ರಾಜಧಾನಿಯನ್ನು ಇಕ್ಕೇರಿಗೆ ಸ್ಥಳಾಂತರಿಸಿದನು.

ಕೆಳದಿ ಸಂಸ್ಥಾನದ ನಾಲ್ಕನೇ ರಾಜಧಾನಿ ಕೌಲೇದುರ್ಗಕ್ಕೆ 'ಕವಿಲೆ' ಎಂಬ ಹಸುವಿನ ಹೆಸರಿನಿಂದ ಈ ಹೆಸರು ಬಂದಿತೆಂದು ಐತಿಹ್ಯವಿದೆ. "ಕೆಳದಿ ಅರಸನಾದ ಸೋಮಶೇಖರನಾಯಕನಿಗೆ ಮಕ್ಕಳಾಗಲಿಲ್ಲ. ಸಂತಾನ ಪ್ರಾಪ್ತಿಯಾಗಲು ವತ್ಸನಾಭ ಎಂಬ ಗಿಡದ ಬೇರನ್ನು ತೇಯ್ದು ಕುಡಿದರೂ ಏನು ಪ್ರಯೋಜನವಾಗದ ಕಾರಣ ಬರಮೆ ಮಾವುತನೆಂಬುವನು 'ಆನೆಯ ಮದೋದಕದಿಂದ ದಿವ್ಯೋದಕವನ್ನು ಸೇರಿಸಿ ಕುಡಿದರೆ ರಾಜನಿಗೆ ಮಕ್ಕಳಾಗುವವು' ಎಂದು ಅರಸನಿಗೆ ಹೇಳಿ ಅದನ್ನು ಅರಸನಿಗೆ ಕುಡಿಸಿದನು. ಇದರಿಂದ ಬುದ್ಧಿಭ್ರಮಣೆಯಾಗಿ ಕೆಲವು ಕಾಲಾನಂತರ ಆತ ಮರಣ ಹೊಂದಿದನು."[೩೬] ಹೀಗಾಗಿ ಅರಸನ ಸಾವಿಗೆ ಕಾರಣರಾದವರನ್ನು ರಾಣಿ ಚೆನ್ನಮ್ಮಾಜಿ ಸೆರೆಹಿಡಿದು ಅವರನ್ನು ಶಿಕ್ಷಿಸಿದಳು.

"ಇಕ್ಕೇರಿಯ ಅಘೋರೇಶ್ವರ ದೇವಾಲಯದ ಮೂಲವಿಗ್ರಹದ ಮುಂದೆ ಇರುವ ನಂದಿಯು ಬೃಹದಾಕಾರವಾಗಿದ್ದು, ಇದರ ಕೊರಳಲ್ಲಿ ಲಿಂಗವಿದೆ. ಶಿವಪ್ಪನಾಯಕರಿಗೆ ಅನಾರೋಗ್ಯವಾದಾಗ ಸೊಸೆ ಚೆನ್ನಮ್ಮಾಜಿ ಹರಕೆ ಹೊತ್ತ ಕಾರಣವಾಗಿ ಅವರ ಬೇನೆ ಪವಾಡ ಸದೃಶ್ಯವೆಂಬಂತೆ ವಾಸಿಯಾಗಿ ಆ ಬನವಾಸಿಗೆ ಮುಖಮಂಟಪ ಕಟ್ಟಿಸಿದರು. ಅಂದಿನಿಂದ ಪವಾಡ ಬಸವಣ್ಣವೆಂದು ಹೆಸರಾಯ್ತು."[೩೭]

ಕೆಳದಿಯ ಸಮರ್ಥ ರಾಣಿಯರಲ್ಲಿ ಕೆಳದಿ ಚೆನ್ನವೀರಮ್ಮಾಜಿಯು ಒಬ್ಬಳು. ಈ ರಾಣಿಯನ್ನು ಕುರಿತಂತೆ ಐತಿಹ್ಯವೊಂದು ಪ್ರಚಲಿತದಲ್ಲಿದೆ. ಕ್ರಿ.ಶ.೧೭೬೩ರಲ್ಲಿ ಹೈದರಾಲಿಯು ದಂಡೆತ್ತಿ ಬಂದು ಚೆನ್ನವೀರಮ್ಮಾಜಿಯನ್ನು, ಅವಳ ದತ್ತಕ ಮುಮ್ಮಡಿ ಸೋಮಶೇಖರ ನಾಯಕನನ್ನು ಮದ್ದಗಿರಿಯ ಕೋಟೆಯಲ್ಲಿ ಸೆರೆ ಹಾಕುತ್ತನೆ. ಮರಾಠಿಗರು, ರಾಣಿ ಹಾಗೂ ದತ್ತುಮಗನನ್ನು ಸೆರೆಯಿಂದ ಬಿಡಿಸಿದರು. ಮದ್ದಗಿರಿ ಕೋಟೆಯಿಂದ ಪುಣೆಗೆ ಹೋಗುವ ಮಾರ್ಗದಲ್ಲಿ ಮರಣವನ್ನಪ್ಪಿದಳೆಂದು ಆಕೆಯ "ಸಮಾಧಿಯು ಬಳ್ಳಾರಿ ಜಿಲ್ಲೆ ಕೂಡ್ಲಗಿ ತಾಲ್ಲೂಕಿನ ಉಜ್ಜನಿ ಮಠದಲ್ಲಿದೆ"[೩೮]

ಎಂಬುದಾಗಿ ಕೆ.ಕರಿಬಸಪ್ಪನವರು ದಾಖಲಿಸಿದ್ದಾರೆ. "ಮಹಾಶಿವಭಕ್ತೆಯಾದ ರಾಣಿಯು ಸೋಲಿನ ಅಪಮಾನವನ್ನು ಸಹಿಸಲಾರದೆ ತನ್ನ ಇಷ್ಟಲಿಂಗವನ್ನು ನುಂಗಿ ಅಸುನೀಗಿದಳೆಂದೂ ಅವಳ ದತ್ತುಪುತ್ರನು ನರಗುಂದದಲ್ಲಿ ಉಳಿದನೆಂಬ ಐತಿಹ್ಯವಿದೆ."[೩೯]

ಅಲ್ಲದೆ ಪ್ರವಾಸಿಗರ ಬರಹಗಳು, ಹೈದರನಾಮೆಗಳೂ ಚೆನ್ನವೀರಮ್ಮಾಜಿಯ ಶೀಲವನ್ನು ಶಂಕಿಸಿರುವ ಇವುಗಳಲ್ಲಿ ಸತ್ಯಾಂಶ ಎಷ್ಟಿದೆಯೋ ಹೇಳಲು ಅಸಾಧ್ಯವಾದುದು. ಈ ಅನುಮಾನಕ್ಕೆ ಮತ್ತೊಂದು ಐತಿಹ್ಯ ನಿದರ್ಶವಾಗಿರುವುದನ್ನು ಡಾ.ಸಾ.ಶಿ.ಮರುಳಯ್ಯನವರು ದಾಖಲಿಸಿದ್ದಾರೆ. "ಅದು ಶೃಂಗೇರಿ ಜಗದ್ಗುರುಗಳು ಆ ಕಾಲದಲ್ಲಿ ಹೊರಡಿಸಿದ್ದ ಒಂದು ಶ್ರೀಮುಖ. ಅದರ ಪ್ರಕಾರ ಮಹಾರಾಣಿಯರ ಶೀಲದ ಬಗ್ಗೆ ಅಪಪ್ರಚಾರ ಕೇಳಿ ಬರುತ್ತಿದೆ. ಹಾಗೆ ಯಾರೇ ಆಗಲಿ ಮಾತೃಶ್ರೀ ಸ್ವರೂಪಳಾದ ಮಹಾರಾಣಿಯ ಶೀಲವನ್ನು ಶಂಕಿಸಿ ನುಡಿದಿದ್ದಾದರೆ ಅದು ಗುರುದ್ರೋಹ, ದೈವದ್ರೋಹ, ಮಾತೃದ್ರೋಹ, ದೇಶದ್ರೋಹ ಎಂದು ಭಾವಿಸುವುದಾಗಿಯೂ ಇದು ಹೈದರ, ಫಿರಂಗಿಗಳು ಮೊದಲಾದ ವಂಚಕರ ಕುಹಕವೆಂದೂ ತಿಳಿಯುತ್ತದೆ"[೪೦] ಎಂದಿದೆ.

ಒಮ್ಮೆ ಒಬ್ಬ ತಿರುಕನು ಒಬ್ಬ ಬಡ ಮುದುಕಿಯ ಮನೆಗೆ ಹೋಗಿ ಹಸಿವಾಗಿದೆ ಊಟ ಹಾಕು ಎಂದಾಗ, ಆ ಮುದುಕಿಯು ರಾಗಿ ಗಂಜಿ ಬಡಿಸಿದಳು. ಎಲೆಯ ಮೇಲೆ ಹರಿಯುತ್ತಿದ್ದ ಗಂಜಿಯನ್ನು ಹಿಡಿಯಲಾಗದೇ ತಿರುಕ ಪೇಚಾಡುತ್ತಿದ್ದನು. ಆಗ ಮುದುಕಿಯು ನಕ್ಕು "ನೀನು ಶಿವಪ್ಪನಾಯ್ಕ ಕೋಟೆ ಹಿಡಿದ ಹಾಗೆ ಮಾಡ್ತಿಯಲ್ಲ. ಒಂದ್ಕಡೆ ಹಿಡಿದ್ರೆ ನಾಕು ಕಡೆ ಬಿಡ್ತಿ" ಎಂದು ಹಾಸ್ಯ ಮಾಡಿದಳು. ತಿರುಕನ ವೇಷದಲ್ಲಿದ್ದ ಶಿವಪ್ಪನಾಯಕನು ಮುದುಕಿಯ ಮಾತನ್ನು ಅರಿತು, ತಾನು ಗೆದ್ದುಕೊಂಡ ಕೋಟೆಗಳನ್ನು ಬಲಪಡಿಸಿ ಅವು ಮತ್ತೆ ಕೈತಪ್ಪದಂತೆ ನೋಡಿಕೊಳ್ಳಬೇಕೆಂದು ಅರಿತನೆಂದು ಬಳ್ಳಿಕೆರೆ ಹನುಮಂತಪ್ಪನವರು ದಾಖಲಿಸಿದ್ದಾರೆ. ಆ ಮುದುಕಿಯನ್ನು ಅರಮನೆಗೆ ಕರೆದು, ಆಕೆಗೆ ಹಣ ನೀಡಿ ಗೌರವಿಸಿದನು.

ಕಳಲೆಯ ಮೂಲಪುರುಷನಾದ ಕಾಂತರಾಯ, ಕೃಷ್ಣರಾಯರು ಕ್ರಿ.ಶ.೧೪೯೯ರಲ್ಲಿ ದ್ವಾರಕೆಯಿಂದ ವಿಜಯನಗರಕ್ಕೆ ಬಂದು, ಶ್ರೀ ಕೃಷ್ಣಪರಮಾತ್ಮನನ್ನು ಧ್ಯಾನಿಸುತ್ತಾ ವಿಜಯನಗರ ರಾಜರ ಅರಮನೆಗೆ ಬಂದು, ತಮ್ಮ ಪೂರ್ವ ವೃತ್ತಾಂತವನ್ನೆಲ್ಲ ಹೇಳಿದರು. ತಮಗೆ ಆದ ಸ್ವಪ್ನದ ವಿಚಾರವನ್ನು ಹೇಳಿದರು. ಇವರನ್ನು ಅನೇಕ ಬಿರುದುಗಳಿಂದ ಗೌರವಿಸಿದನು. ಅಲ್ಲದೆ ಕಾಂತರಾಯರಿಗೆ ಮೈಸೂರು ಡಿಸ್ಟ್ರಿಕ್ಟ್ ನಂಜನಗೂಡು ತಾಲ್ಲೂಕು ಉಮ್ಮತ್ತೂರು ಬಳಿ ಇರುವ ಕಳಲೆ ಗ್ರಾಮ ಮತ್ತು ಅದಕ್ಕೆ ಸಂಬಂಧಪಟ್ಟ ಉಪಗ್ರಾಮಗಳನ್ನು ಕೊಟ್ಟು, ಉಪನಾಯಕರನ್ನಾಗಿ ನೇಮಿಸಿದನು. ಇವರ ಸ್ವಪ್ನದಲ್ಲಿ ಕೆಳದಿಯಲ್ಲಿ ಶ್ರೀ ಲಕ್ಷ್ಮೀಕಾಂತ ದೇವಾಲಯವನ್ನು ಜೀರ್ಣೋದ್ಧಾರ

ಮಾಡಿ ಅಲ್ಲಿ ಉತ್ಸವಮೂರ್ತಿಯನ್ನು ಪ್ರತಿಷ್ಠಾಪಿಸಬೇಕೆಂದು ಕಂಡ ಕನಸನ್ನು ನನಸು ಮಾಡಲೆಂದೇ ಇವರು ಕಳಲೆಗೆ ಬಂದಿದ್ದು ಎಂಬುದಾಗಿ ಬಿ.ಎಸ್.ಕಪನೀಪ್ಪತಯ್ಯನವರು ದಾಖಲಿಸಿದ್ದಾರೆ.

ಕಳಲೆ ಒಡೆಯರ ಸ್ಥಾನವಾಗಿದ್ದ ಕಳಲೆ ಊರಿನ ಮಧ್ಯಭಾಗದಲ್ಲಿರುವ ಪಟ್ಟದ ಚಾವಡಿಯೆಂಬ ಪುರಾತನ ಕಟ್ಟಡ ಅವರ ಪಟ್ಟಾಭಿಷೇಕ ನಡೆಯುತ್ತಿದ್ದ ಸ್ಥಳವೆಂದೂ, ಅದರ ಪಕ್ಕದ ಸ್ಥಳದಲ್ಲಿ ಅರಮನೆಯಿತ್ತೆಂದೂ ಐತಿಹ್ಯವಿದೆ.

ಮತ್ತೊಂದು ಪೌರಾಣಿಕ ಐತಿಹ್ಯದ ಪ್ರಕಾರ "ಪಾಂಡುವಂಶಕ್ಕೆ ಶ್ರೇಷ್ಠನಾದ ಜನಮೇಜಯನು ಬೇಟೆಗಾಗಿ ಕೌಂಡಿನ್ಯ ನದಿಗಳ ತೀರದಲ್ಲಿ ಸಂಚರಿಸುತ್ತಿದ್ದಾಗ, ಅಲ್ಲಿ ಆಜನ್ಮ ವೈರಿಗಳಾದ ಗೋ ವ್ಯಾಘ್ರಗಳು ಸಾಮರಸ್ಯದಿಂದಿರುವ ದೃಶ್ಯವನ್ನು ಕಂಡು ಅಲ್ಲಿಯೇ ಲಕ್ಷ್ಮೀಕಾಂತ ದೇವಾಲಯವನ್ನು ನಿರ್ಮಿಸಿದನೆಂಬ"[೪೧] ಪ್ರತೀತಿ ಇದೆ. ಕಪಿಲ ಮಹರ್ಷಿಗಳು ಕರ್ದಮಹರ್ಷಿಗಳ ಪುತ್ರರು. ಇವರು ತಪಸ್ಸನ್ನು ಆಚರಿಸಲು ಪ್ರಶಾಂತವಾದ ಸ್ಥಳವನ್ನು ಹುಡುಕಲು ಭೂಲೋಕವೆಲ್ಲ ಸಂಚರಿಸಿ, ಕಡೆಗೆ ಪಾತಾಳ ಲೋಕವನ್ನು ಪ್ರವೇಶಿಸಿ, ತಪಸ್ಸನ್ನು ಆಚರಿಸಿದರು. ಸಗರನ ಪುತ್ರರು ತಮ್ಮ ಕಳೆದುಹೋದ ಯಜ್ಞಾಶ್ವವನ್ನು ಹುಡುಕಿಕೊಂಡು ಪಾತಾಳ ಲೋಕಕ್ಕೆ ಬಂದು ಅಲ್ಲಿ ಕಪಿಲಮುನಿಗಳ ಪಕ್ಕದಲ್ಲಿ ನಿಂತಿದ್ದ ಯಜ್ಞಾಶ್ವವನ್ನು ಕಂಡು ಮುನಿಗಳು ಕಳ್ಳರೆಂದು ತಪ್ಪುಕಲ್ಪನೆಯಲ್ಲಿ ಅವರನ್ನು ನಿಂದಿಸಿ, ಅವರ ತಪೋಭಂಗವನ್ನು ಮಾಡಿದರು. ಇದರಿಂದ ನೊಂದುಕೊಂಡ ಕಪಿಲ ಮಹರ್ಷಿಗಳು ಅಲ್ಲಿಂದ ಹೊರಟು ಕಳಲೆಯ ದತ್ತಾತ್ರೇಯ ಆಶ್ರಮಕ್ಕೆ ಬಂದು ಶ್ರೀ ಲಕ್ಷ್ಮೀಕಾಂತನ ಕರುಣೀಯವಾದ ಹಾಗೂ ಪ್ರಶಾಂತವಾದ ವಾತಾವರಣವನ್ನು ಮೆಚ್ಚಿ ಅಲ್ಲಿಯೇ ನೆಲೆಸಿದರಂತೆ. ಆದ್ದರಿಂದಲೇ ಈ ಸ್ಥಳಕ್ಕೆ ಕಪಿಲಾಶ್ರಮ ಎಂಬ ಹೆಸರು ಬಂದಿತು. ರಾಮಾಯಣದ ಶ್ರೀ ರಾಮನೂ ಇಲ್ಲಿಗೆ ಬಂದು ಶ್ರೀ ಲಕ್ಷ್ಮೀಕಾಂತನ ಪೂಜೆ ಮಾಡಿದನೆಂಬ ಪ್ರತೀತಿ ಇದೆ.

ಸುಗಟೂರು ಅರಸುಮನೆತನಕ್ಕೆ ಸಂಬಂಧಿಸಿದಂತೆ "ಸೀತಪ್ಪಗೌಡನೆಂಬುವನು ತನ್ನ ಸಮಿಪದ ಬಂಧುಗಳಾದ ಏಳು ಕುಟುಂಬಗಳೊಂದಿಗೆ ಕೂಡಿಕೊಂಡು ದಕ್ಷಿಣದಲ್ಲಿರುವ ತನ್ನ ಗ್ರಾಮವಾದ 'ಮದ್ವಾಪುರದಿಂದ' ಬಂದನೆಂಬ ಐತಿಹ್ಯವಿದೆ."[೪೨] ಅಲ್ಲದೆ "ಹದಿನೈದನೆಯ ಶತಮಾನದಲ್ಲಿ ಆ ವಂಶದ ತಿಮ್ಮಯ್ಯಗೌಡನೆಂಬುವವನಿಗೆ ಗುಪ್ತನಿಧಿ ಸಿಕ್ಕಿತು. ಆ ಧನದಿಂದ ಪ್ರಸ್ತುತ ಕೋಲಾರದಲ್ಲಿ ಕಾಡುಪ್ರದೇಶವನ್ನು ಸವರಿ, ಕೋಟೆಯನ್ನು ಕಟ್ಟಿದನೆಂಬ ಐತಿಹ್ಯವಿದೆ."[೪೩]

ಹೀಗೆ ಕೆಳದಿ, ಕಳಲೆ, ಇಕ್ಕೇರಿ ಹಾಗೂ ಸುಗಟೂರಿನ ಅರಸುಮನೆತನಗಳಿಗೆ ಸಂಬಂಧಿಸಿದ ಐತಿಹ್ಯಗಳು ರಾಜ್ಯಸ್ಥಾಪನೆ, ವಿಸ್ತಾರ ಹಾಗೂ ಧಾರ್ಮಿಕ ಸಂಸ್ಥೆಗಳ ಸ್ಥಾಪನೆ ಕುರಿತು ಮಾಹಿತಿ ನೀಡುತ್ತವೆ.

**೨. ಕಥೆಗಳು:** ಚಾರಿತ್ರಿಕ ಕಥನಗಳು ಕಥೆಗಳ ರೂಪದಲ್ಲಿ ಜನಜನಿತವಾಗಿದೆ. ಅಂಥ ಕಥೆಗಳಲ್ಲಿ ಕೋಟಪುರದ ರಾಣಿ ಚೆನ್ನಮ್ಮಾಜಿಯು ಬಾಲ್ಯದಿಂದಲೇ ವೈಚಾರಿಕ ಚಿಂತನೆಗಳನ್ನು ಹೊಂದಿದ್ದಳೆಂಬ ಅಂಶವನ್ನು ಪ್ರಸ್ತುತಪಡಿಸುವ ಕಥೆಯೊಂದು ಹೀಗಿದೆ.

ಕೋಟಿಪುರದ ರಾಣಿ ಚೆನ್ನಮ್ಮಾಜಿಯ ತಂದೆಯಾದ ಸಿದ್ಧಪ್ಪಶೆಟ್ಟರ ಮನೆಯ ಜಗಲಿಯಲ್ಲಿ ಒಂದು ಗಂಟು ಇತ್ತು. ಶ್ರಾವಣ ಮಾಸದಲ್ಲಿ ಲಿಂಗವಂತರೆಲ್ಲರೂ ಅಲ್ಲಿಗೆ ಬಂದು ದಾಸೋಹ ಮಾಡಿ ಊಟ ಮಾಡುವ ಮೊದಲು ಜಗುಲಿಯ ಮೇಲಿನ ಗಂಟನ್ನು ಪೂಜಿಸುತ್ತಿದ್ದರು. ಈ ಗಂಟನ್ನು ಬಿಚ್ಚಿ ನೋಡಿದರೆ ಕಣ್ಣು ಹೋಗುವುದೆಂಬ ಪ್ರತೀತಿ ಇದ್ದರೂ, ಚೆನ್ನಮ್ಮಾಜಿಯು ಯಾರಿಗೂ ಗೊತ್ತಾಗದಂತೆ ಆ ಗಂಟನ್ನು ಬಿಚ್ಚಿದಾಗ ಪುಟ್ಟ ಮಕ್ಕಳು ಹಾಕಿಕೊಳ್ಳುವಂಥ ಒಂದು ಜೊತೆ ಚಮ್ಮಾವುಗೆ ಇದ್ದು, ಇವು ಹಿಂದೆ ಸಮಗಾರ ಹರಳಯ್ಯನು ತನ್ನ ಚರ್ಮದಿಂದ ಇಂಥ ಒಂದು ಜೊತೆ ಚಮ್ಮಾವುಗೆ ಮಾಡಿ ಬಸವಣ್ಣನವರಿಗೆ ಅರ್ಪಣೆ ಮಾಡಿದುದರ ಸಂಕೇತವಾಗಿ ಈ ಗಂಟಿನ ಕರಡಿಯಲ್ಲಿ ಚಮ್ಮಾವುಗೆ ಇತ್ತು.

ಪ್ರಾಯಶಃ ರಾಣಿ ಚೆನ್ನಮ್ಮ ಶಿವಶರಣರ ವೈಚಾರಿಕ ಕ್ರಾಂತಿಗೆ ಮಾರು ಹೋಗಿ ತನ್ನ ರಾಜ್ಯದಲ್ಲಿ ಶರಣತತ್ತ್ವ ಪ್ರಚಾರ, ಸಾಮಾಜಿಕ ನ್ಯಾಯ ಹಾಗೂ ವರ್ಗ, ವರ್ಣ, ಲಿಂಗಭೇದ ನಿರಸನ ಸಾಮ್ರಾಜ್ಯವನ್ನು ಕಟ್ಟಬೇಕೆಂಬ ಆಶಯವನ್ನು ಹೊಂದಿದ್ದಳೆಂಬುದನ್ನು ಇಂಥ ಕಥೆಗಳು ನಿರೂಪಿಸುತ್ತವೆ.

ಸೋದೆಯನ್ನು ಆಳಿದ ಸದಾಶಿವರಾಯನು ಔರಂಗಜೇಬನನ್ನು ಕಂಡೆನೆನ್ನುವ ಉತ್ಪ್ರೇಕ್ಷಿತ ಜನಪದ ಕಥೆಯೊಂದಿದೆ. ಈ ಬಗ್ಗೆ ಅನ್ಯಮೂಲದ ಆಕರಗಳು ನಿಜವೆನ್ನುತ್ತಿವೆ. ಇದನ್ನು ಕಥೆಯು ತನ್ನದೇ ಆದ ರೀತಿಯಲ್ಲಿ ವಿಶ್ಲೇಷಿಸುತ್ತಾ ಹೋಗುತ್ತದೆ. ಇಲ್ಲಿ ಉಳಿಯುವ ಸತ್ಯಾಂಶವೆಂದರೆ ಸದಾಶಿರಾಯನು ಔರಂಗಜೇಬನನ್ನು ದೆಹಲಿಯಲ್ಲಿ ಕಂಡಾಗ ತನ್ನ ರಾಜ್ಯದ ರಾಜಕೀಯ, ಸಾಮಾಜಿಕ ವಿಷಯಗಳ ಬಗ್ಗೆ ಚರ್ಚಿಸಿದಂತೆ ಔರಂಗಜೇಬನು ಸದಾಶಿವರಾಯನ ಉದಾರ ಮನೋಭಾವವನ್ನು ಅರಿತು 'ಜಂಗಮ್ ಚೀತ್ ಪೀರ್‌ಹೈ' ಎಂದು ಸನ್ಮಾನಿಸಿದನೆಂಬುದಾಗಿ ಡಾ.ಎಂ.ಜಿ.ವಾರಿಯವರು ದಾಖಲಿಸಿದ್ದಾರೆ. ಹೀಗೆ ಕಥೆಯೊಂದು ಚಾರಿತ್ರಿಕ ಹಿನ್ನೆಲೆಯ ಅಧ್ಯಯನಕ್ಕೆ ಪ್ರೇರಕ ಶಕ್ತಿಯಾಗಬಲ್ಲದು.

ಕಳಲೆ ಕೃಷ್ಣ ಒಡೆಯರು ಕಳಲೆಯನ್ನು ಸಮರ್ಥವಾಗಿ ಆಳಿದರು. ಇವರ ಬಳಿ ಇರುವ ಜಾತ್ಯಶ್ವವನ್ನು ಉಮ್ಮತ್ತೂರು ನಂಜರಾಜನು ಅಪಹರಿಸಬೇಕೆಂದು ಪ್ರಯತ್ನಿಸಿದಾಗ ಅದು ವಿಫಲವಾಯಿತು. ಇದನ್ನು ತಿಳಿದ ಕೃಷ್ಣ ಒಡೆಯರು ಅಶ್ವವನ್ನು ಕೂಗಲೂರು ಕೋಟೆಯಲ್ಲಿ ಬಚ್ಚಿಟ್ಟು, ಕುದುರೆ ಸತ್ತುಹೋಯಿತೆಂದು ಹೇಳಿ ಕಳಿಸಿದರು. ಉಮ್ಮತ್ತೂರು ನಂಜರಾಜನು

ಗೂಢಚಾರರ ಮೂಲಕ ಕುದುರೆಯಿರುವ ಸ್ಥಳವನ್ನು ತಿಳಿದು, ಹೇಗಾದರೂ ಮಾಡಿ ರಾಜ ಕೃಷ್ಣ ಒಡೆಯನನ್ನು ಸರ್ವನಾಶ ಮಾಡಲು ಹೊಂಚು ಹಾಕುತ್ತಿದ್ದನು. ಈತ ಕೃಷ್ಣ ಒಡೆಯರೊಂದಿಗೆ ಮೈತ್ರಿಯನ್ನು ನಟಿಸಿ, ಕಳಲೆಯಲ್ಲಿ ಶಿವ ದೇವಾಲಯವಿಲ್ಲ. ನೀವು ಶಿವದೇವಾಲಯವನ್ನು ನಿರ್ಮಿಸಿ ಎಂದಾಗ, ಕೃಷ್ಣ ಒಡೆಯರು ಇದು ನ್ಯಾಯಸಮ್ಮತವಾದ ಮಾತೆಂದು ತಿಳಿದು, ಕಳಲೆಯಲ್ಲಿ ಸೋಮೇಶ್ವರಸ್ವಾಮಿ ದೇವಸ್ಥಾನ ಕಟ್ಟಿಸಿದರು. ಉಮ್ಮತ್ತೂರಿನ ನಂಜರಾಜ ಈ ದೇವಾಲಯವನ್ನು ನೋಡುವ ನೆಪದಲ್ಲಿ ಬಂದು, 'ಗದಾವುಣಿ ಗದ್ದೆ' ಎಂಬಲ್ಲಿ ಬಿಡಾರ ಹೂಡಿದನು. ನಿಮ್ಮಗಳಿಗೆ ಉಡುಗೊರೆ, ಭೂಷಣಾಧಿಗಳನ್ನು ಕೊಡಬೇಕೆಂದಿದ್ದೇನೆ. ಅಬಲಾದಿಯಾಗಿ ಎಲ್ಲರೂ ಬಿಡಾರಕ್ಕೆ ಬನ್ನಿ' ಎಂದು ಹೇಳಿಕೊಂಡನು. ಈತನ ಮೋಸವನ್ನು ಅರಿಯದ ಕೃಷ್ಣ ಒಡೆಯರು ತಮ್ಮ ಬಂಧುಬಾಂಧವರೊಡನೆ ಮಿತ ಪರಿವಾರದಿಂದ ಅವರ ಬಿಡಾರಕ್ಕೆ ಹೋದಾಗ, ಉಮ್ಮತ್ತೂರು ನಂಜರಾಜನ ದಂಡಾಳುಗಳ ಅಡ್ಡಹಾಯ್ದು ಕೊಲ್ಲಲು ಪ್ರಯತ್ನಿಸಿದರು. ಆಗ ಕೃಷ್ಣ ಒಡೆಯರು ತನ್ನ ರಾಣಿಯಾದ ನಂಜಮ್ಮಣ್ಣಿಯವರಿಗೆ ನಿಜಸ್ಥಿತಿಯನ್ನು ತಿಳಿಸಿದನು. ಕೃಷ್ಣ ಒಡೆಯರು, ಕೃಷ್ಣ ಒಡೆಯರ ಸ್ತ್ರೀಯರೂ ಶತ್ರುಗಳ ಸಂಗಡ ಹೋರಾಡಿ ತಮ್ಮ ಪ್ರಾಣದಾಸೆಯನ್ನು ತೊರೆದು ಮರಣ ಹೊಂದಿದರು. ಮಕ್ಕಳು ಮರಿಗಳನ್ನು ಆ ಪಾಪಿಗಳು ಸಂಹರಿಸಿದರು. ಇಡೀ ವಂಶಸ್ಥರೆಲ್ಲರೂ ಮರಣಕ್ಕೀಡಾದರೆ ದೈವಲೀಲೆಯೆಂಬಂತೆ ಕೃಷ್ಣ ಒಡೆಯರ ಎರಡನೇ ಮಗನಾದ ಮಲ್ಲರಾಜನ ರಾಣಿ ಗೌರಮ್ಮಣ್ಣಿಯವರ ಮಗುವೊಂದು ಮಾತ್ರ ರಣರಂಗದಲ್ಲಿ ಉಳಿಯಿತು. ಆ ಮಗುವನ್ನು ನೋಡಿದ ಬಾಪನಕರಿಯ ಎಂಬ ಕುರುಬನು ಮತ್ತು ಅಗಸಗಿತ್ತಿ ಹುರದಲ್ಲಿದ್ದ ಆ ಮಗುವಿನ ಸೋದರಮಾವನಾದ ಹೊನ್ನುಕೈ ಮಾಧವರಾಯನಿಗೆ ಒಪ್ಪಿಸಿದರೆಂಬ ಕಥೆಯನ್ನು ಪಿ.ವಿ.ಕೃಷ್ಣಮೂರ್ತಿಯವರು ದಾಖಲಿಸಿದ್ದಾರೆ.

ಐತಿಹಾಸಿಕ ಜನಪದ ಗದ್ಯಕಥೆಗಳ ಒಂದು ಕೇಂದ್ರ ಕಳಲೆ. ಕಳಲೆಯ 'ಆಲದ ಅರಸಮ್ಮ' ಪ್ರಸಿದ್ಧ ಗ್ರಾಮದೇವತೆ. ಹಲವು ಐತಿಹ್ಯಗಳು ಆಲದ ಅರಸಮ್ಮನ ಬಗೆಗಿನ ಜನರ ನಂಬಿಕೆ, ಅಪಾರಭಕ್ತಿ ಹಾಗೂ ಕಲ್ಪನೆಯನ್ನು ಸ್ಪಷ್ಟಪಡಿಸುತ್ತವೆ. ಆಲದ ಅರಸಮ್ಮನ ಗಂಡನ ಹೆಸರು 'ಗೊಂಬಪ್ಪ'. ಈಕೆ ಗಂಡನಿಗೆ ಸಂತೆಗೆ ಹೋಗಿ ಮೊರ ಮತ್ತು ಕುಕ್ಕೆಯನ್ನು ತರಲು ಹಣ ಕೊಡುತ್ತಾಳೆ. ಗೊಂಬಪ್ಪ ಸಂತೆಗೆ ಹೋಗಿ ಬರಿಗೈಯಲ್ಲಿ ಬರುತ್ತಾನೆ. ಆ ಹಣವನ್ನು ಬೇರೊಂದು ಬಗೆಯಲ್ಲಿ ಖರ್ಚು ಮಾಡಿರುತ್ತಾನೆ. ಹೀಗಾಗಿ ಕೆರೆಯ ಮಧ್ಯಭಾಗಕ್ಕೆ ಬಂದ ಮೇಲೆ ಹೆಂಡತಿಯ ಭಯ ಹುಟ್ಟಿಕೊಂಡು, ಅವನು ಮನೆಗೆ ಹೋಗುವ ಧೈರ್ಯ ಮಾಡದೇ ಅಲ್ಲಿಯೇ ಸ್ಥಿರವಾಗಿ ನಿಂತನಂತೆ. ಅವನಿಗಾಗಿ ಅಲ್ಲೊಂದು ನಾಲ್ಕು ಕಂಬದ ಮಂಟಪವನ್ನು ನಿರ್ಮಿಸಿರುವರು. ಈ ಆಲದ ಅರಸಮ್ಮನಿಗೆ 'ಹಿಂಡಾಲದವ್ವ' ಎಂತಲೂ ಕರೆವರು. 'ಹಿಂಡು ಮಕ್ಕಳ ತಾಯಿ' ಎಂಬ ಅರ್ಥದಲ್ಲಿ ಹೀಗೆ ಕರೆಯುವರು.

ಹಾಗಲವಾಡಿ ಸಂಸ್ಥಾನ ಪ್ರದೇಶದಲ್ಲಿ ಜನಸಾಮಾನ್ಯರು ಅನೇಕ ಜಾನಪದ ಸ್ತ್ರೀದೇವತೆಗಳಾದ ಹೆಸರಳ್ಳಿ ಲಕ್ಕವ್ವ, ಶೆಟ್ಟಿಕೆರೆ ಕೆಂಪಮ್ಮ, ಹುಳಿಯೂರು ಕೆಂಚಮ್ಮ, ರಾಂಪುರದ ಮಾರಮ್ಮ, ಹಾಗಲವಾಡಿ ಕರಿಯಮ್ಮ, ಚಿಕ್ಕನಾಯ್ಕನಹಳ್ಳಿ ಯಲ್ಲಮ್ಮರನ್ನು ಪೂಜಿಸುತ್ತಿದ್ದರು. ಹಾಗಲವಾಡಿಯ ಸಾಂಸ್ಕೃತಿಕ ವೀರನಾದ ಜುಂಜಪ್ಪನು ಪ್ರಿಯವಾದ ದೇವರಾಗಿದ್ದನು.

ಸುಗಟೂರು ರಾಣಿಯಾದ ಬಯ್ಯಮ್ಮ ಹಾಗೂ ದೊಡ್ಡಮ್ಮನ ಬಗೆಗೆ ಜನಪದ ವದಂತಿಗಳಿದ್ದು, ಈ ಇಬ್ಬರು ರಾಣಿಯರ ಕಥಾವಸ್ತು ಒಂದೇ ಬಗೆಯದಾಗಿದೆ. ಕ್ಷೀರನದಿ(ಪಾಲಾರ್ ನದಿ)ಯ ಪೂರ್ವಕ್ಕಿದ್ದ ಆಲಕೂರ ವಡ್ಡೇರಹಳ್ಳಿಯ ದೇವಪ್ಪಗೌಡನಿಗೆ ಬಯ್ಯಮ್ಮನೆಂಬ ಬಹು ಚೆಲುವಾದ ಮಗಳಿದ್ದು, ಆಕೆಯ ಚೆಲುವಿಗೆ ಕಂಚಿಯ ರಾಜ ಮನಸೋತು ಮದುವೆಯಾಗಬಯಸಿದ. ಇದಕ್ಕೆ ದೇವಪ್ಪಗೌಡ ಒಪ್ಪದೇ ತನ್ನ ಸೋದರರು ಮತ್ತು ಬಂಧುಗಳೊಡನೆ ವಿಚಾರ ಮಾಡಿ, ಒಕ್ಕಲಿಗರಾದ ತಾವು ಏಕಜಾತಿಯವನಾದ ಕಂಚಿ ದೊರೆಗೆ ತಮ್ಮ ಮಗಳನ್ನು ಕೊಡುವುದು ಬೇಡವೆಂದು, ಮುಂದೆ ಅವನಿಂದ ಉಂಟಾಗಬಹುದಾದ ಕಿರುಕುಳಗಳನ್ನು ಊಹಿಸಿ, ತಮ್ಮಂದಿರನ್ನೆಲ್ಲ ಕರೆದುಕೊಂಡು ಪಶ್ಚಿಮಕ್ಕೆ ಪ್ರಯಾಣಿಸಿ ಕ್ಷೀರ ನದಿಯ ಸಮೀಪಕ್ಕೆ ಬಂದಾಗ, ನದಿ ತುಂಬಿ ಪ್ರವಾಹದಿಂದ ಹರಿಯುತ್ತಿತ್ತು. ಆಗ ಮಗಳಾದ ಬಯ್ಯಮ್ಮ ಗಂಗಾದೇವಿಯನ್ನು ಪ್ರಾರ್ಥಿಸಿದಾಗ ನದಿ ಇಬ್ಭಾಗವಾಗಿ, ಇವರು ಇನ್ನೊಂದು ದಡಕ್ಕೆ ಸೇರಿಕೊಳ್ಳಲು ಅನುವು ಮಾಡಿಕೊಟ್ಟಿತು. ಕಂಚಿಯ ದೊರೆ ತನ್ನ ಸೈನ್ಯದೊಂದಿಗೆ ಹಿಂಬಾಲಿಸಿದನು. ಉಕ್ಕಿ ಹರಿಯುತ್ತಿದ್ದ ನದಿಯನ್ನು ದಾಟಲಾಗದೆ ಆತನು ಹಿಂತಿರುಗಿದನು. ಈ ಕಂಟಕದಿಂದ ಮುಕ್ತರಾದ ದೇವಪ್ಪಗೌಡ ಮತ್ತು ಅವನ ಬಂಧು ಬಳಗದವರು ಮುಂದೆ ಪ್ರಯಾಣ ಮಾಡಿ ಇಂದಿನ ಶಿಡ್ಲಘಟ್ಟ ತಾಲ್ಲೂಕಿನ ಜಂಗಮಕೋಟೆ ಸಮೀಪದ ಜಾಗದಲ್ಲಿ ಊರು ಕಟ್ಟಿದರು. ಅದರ ಸುತ್ತಲೂ ಸುರಗುತ್ತಳಿಯ ಬೇಲಿಯನ್ನು ಕಟ್ಟಿದುದರಿಂದ ಆ ಸ್ಥಳಕ್ಕೆ ಸುರಗತ್ತಿಳಿಯೂರ>ಸುರಗುತ್ತಲೂರು>ಸುಗಟೂರು ಎಂಬ ಹೆಸರು ಬಂದಿತು.

ಹಾಲೇರಿಯ ಲಿಂಗರಾಜೇಂದ್ರ(೨ನೆಯ)ನ ಪ್ರೇಮಕಥೆಯನ್ನು ಜನಪದರು ಹೇಳುತ್ತಾರೆ. ದೊಡ್ಡವೀರರಾಜೇಂದ್ರ ಒಡೆಯರ ಬ್ರಾಹ್ಮಣ ಪತ್ನಿಯಲ್ಲಿ ಜನಿಸಿದ ಚಿತ್ರಾ ಎಂಬ ಹೆಣ್ಣು ಮಗು ಬಹು ಸುಂದರವಾಗಿದ್ದಳು. ಲಿಂಗರಾಜೇಂದ್ರನಿಗೆ ಆಕೆ ತನ್ನ ಅಣ್ಣನ ಮಗಳೆಂದು ತಿಳಿಯದೇ ಪ್ರೀತಿಸತೊಡಗಿದನು. ವೀರರಾಜೇಂದ್ರನು ಕಾಲವಾದ ನಂತರ ರಕ್ಷಣೆ ಇಲ್ಲದಂತಾಯ್ತು. ಲಿಂಗರಾಜನ ಇಚ್ಛೆಗೆ ಒಪ್ಪದೇ ಚಿತ್ರಾ ತನ್ನನ್ನು ತಾನು ಇರಿದುಕೊಂಡು ಓಂಕಾರೇಶ್ವರ ಪುಷ್ಕರಿಣಿಯಲ್ಲಿ ಬಿದ್ದು ಪ್ರಾಣತ್ಯಾಗ ಮಾಡಿದಳೆಂಬ ಕಥೆ ಇದೆ.

ಬೆಂಗಳೂರು ವಿಶ್ವವಿದ್ಯಾಲಯದ ಓಲೆಯೊಂದರಲ್ಲಿದ್ದ ಆರತಿ ಪದವು ಸುಗಟೂರು ರಾಣಿಯರಿಗೆ ಸಂಬಂಧಿಸಿದ್ದು, ಇದನ್ನು ಶ್ರೀ ಎಸ್.ಶಿವಣ್ಣನವರು ದಾಖಲಿಸಿದ್ದಾರೆ.

'ಮೊದಲು ಮುದ್ದಮ್ಮಾಜಿ ಸದಮಲ ರೂಪಂಗೆ

ಹೃದಯಕಮ(ಲ)ದ ಪಂಚಾರತಿ

ಚದುರ ಚೆನ್ನಿಗ ಪ್ರಭುರಾಯನಿಗೆ ॥೧॥

ಚದುರೆ ಚೆನ್ನಮ್ಮಾಜಿಯಿಂದೆ ಪಂಚವಕ್ತ್ರನಿಗೆ ।

ಹದವರಿತು ಹವಳದಾರುತಿಯ ।

ಒದಗು ಸಮುದ್ರವ ನೆರದೊಳುದಾಳ್ದಂಥ

ಮದನ ವೈರಿಯ ಪ್ರಭುರಾಯನಿಗೆ

ಎಂದು ಚಿಕ್ಕಮುದ್ದಮ್ಮಾಜಿಯು ಅಕ್ಕರೆಯಿಂದ ಪ್ರಭುರಾಯನಿಗೆ ಮಕ್ಕಳ ಫಲ ಬೇಡಿದರೆಂಬ ಹಾಡು (ಆರತಿಪದ) ಪುಂಗನೂರಿನ ರಾಣಿಯರ ಬಗ್ಗೆ ವಿವರಣೆಯನ್ನು ಒದಗಿಸುತ್ತದೆ. ಬಿಜ್ಜಾವರದ ರಾಣಿ ಅಂಜಮ್ಮನವರ ಬಗೆಗೆ ಕಥೆಯೊಂದು ಪ್ರಚಲಿತದಲ್ಲಿದೆ. ಶಿರಾ ಪ್ರಾಂತವನ್ನು ರಂಗಪ್ಪರಾಜು ಅದಕ್ಷತೆಯಿಂದ ಆಳುತ್ತಿದ್ದನು. ಹೀಗಾಗಿ ರಣದುಲ್ಲಾಖಾನನು ಶಿರಾ ಪ್ರಾಂತಕ್ಕೆ ಮುತ್ತಿಗೆ ಹಾಕಿ ರಂಗಪ್ಪರಾಜು ಹಾಗೂ ಇತರರನ್ನು ಕೊಂದುಹಾಕಿದನು. ರಂಗಪ್ಪರಾಜುವಿನ ಮಕ್ಕಳಾದ ರಾಮಪ್ಪ ರಾಜು ಹಾಗೂ ಸರ್ಜಪ್ಪನಾಯಕನು ಅಗಸನೊಬ್ಬನ ಚಾಣಾಕ್ಷತನದಿಂದ ಬದುಕಿದನು. ಚಿಕ್ಕವರಾದ ಇವರನ್ನು ಅಗಸನು ಬಿಜ್ಜಾವರದ ಅರಸನಾದ ಚಿಕ್ಕಪ್ಪಗೌಡನಿಗೆ ಒಪ್ಪಿಸಿದನು. ಉದಾರಮನಸ್ಕನಾದ ಚಿಕ್ಕಪ್ಪಗೌಡ ಹಾಗೂ ಆತನ ರಾಣಿ ಅಂಜಮ್ಮನವರು ತಮ್ಮ ಮಕ್ಕಳಂತೆ ಪ್ರೀತಿಯಿಂದ ಮಕ್ಕಳನ್ನು ಪೋಷಿಸಿದರು. ತಮ್ಮ ಮಕ್ಕಳ ಜೊತೆಗೆ ಸಕಲ ವಿದ್ಯೆ ಕಲಿಸಿದರು. ಒಮ್ಮೆ ಸರ್ಜಪ್ಪರಾಜು ತನ್ನ ಕತ್ತಿಯ ತುದಿಗೆ ಸುಣ್ಣ ಬಳಿದು, ತನ್ನ ಕೈಚಳಕದಿಂದ ಮುಮ್ಮಡಿ ಚಿಕ್ಕಪ್ಪಗೌಡನ ಹಣೆಗೆ ನಾಮವನ್ನಿಟ್ಟನು. ಚಿಕ್ಕಪ್ಪಗೌಡ ತನ್ನ ಕೈಚಳಕವನ್ನು ಮೆಚ್ಚಬಹುದೆಂದು ಸರ್ಜಪ್ಪರಾಜು ತಿಳಿದಿದ್ದನು. ಆದರೆ ಚಿಕ್ಕಪ್ಪಗೌಡ ಯೋಚಿಸಿದ ರೀತಿಯೇ ಭಿನ್ನವಾದುದು. ಇಂದು "ನನ್ನ ಹಣೆಗೆ ಇಟ್ಟ ನಾಮ, ನಾಳೆ ನನ್ನ ಮಕ್ಕಳಿಗೂ ನಾಮ ಹಾಕಬಹುದು"[೪೬] ಇಷ್ಟು ದಿನ ಇವರನ್ನು ಪೋಷಿಸಿದ್ದೇ ವ್ಯರ್ಥವೆಂದು ಯೋಚಿಸಿ, ಇಬ್ಬರನ್ನು ಕಾಡಿಗೆ ಕರೆದುಕೊಂಡು ಹೋಗಿ ಕಡಿದುಹಾಕಲು ಅಪ್ಪಣೆ ನೀಡಿದನು. ಇದನ್ನು ಕೇಳಿ ಅಂಜಮ್ಮನ ಹೃದಯ ಮಿಡಿಯಿತು. ಸೇವಕರನ್ನು ಕರೆದು, ಆ ಮಕ್ಕಳನ್ನು ಕೊಲ್ಲಬೇಡಿ, ಅವರನ್ನು ಎಲ್ಲಿಯಾದರೂ ಬಿಟ್ಟು ಬನ್ನಿ ಎಂದು ಸೇವಕರಿಗೆ ಒಂದು ಥೈಲಿ ಹಣ ಕೊಟ್ಟಳು. ಆಗ ಸೇವಕರು ರಾಣಿಯ ಮಾತಿನಂತೆ ಹುಂಜನಾಲದ ಹತ್ತಿರ ಮಕ್ಕಳನ್ನು ಬಿಟ್ಟು ಬಂದರು. ಹೀಗೆ ಅಂಜಮ್ಮನವರ ಮಾತೃ ಹೃದಯದಿಂದ ಆ ಮಕ್ಕಳಿಗೆ ಜೀವದಾನ ಒದಗಿತು. ಆದರೆ ಕೆಲವು ಕಾಲಾನಂತರ, ರಣದುಲ್ಲಾಖಾನನಿಗೆ ಶಿರಾ ಪ್ರಾಂತದ ಕುಡಿಗಳು ಹುಂಜನಾಳದಲ್ಲಿ ಬೆಳೆಯುತ್ತಿರುವ ವಿಷಯ ತಿಳಿದು, ಅವರನ್ನು ಕೊಲ್ಲಲು ಮುತ್ತಿಗೆ ಹಾಕಿದನು. ಹುಂಜನಾಳದ ಜನರೆಲ್ಲ ಕಂಕಣತೊಟ್ಟು ಇವರ ರಕ್ಷಣೆಗೆ ನಿಂತರು. ಈ ಮಕ್ಕಳು

ತಮ್ಮನ್ನು ಸಾಕಿ, ಬೆಳೆಸಿ, ವಿದ್ಯೆ ಕಲಿಸಿದ ಮುಮ್ಮಡಿ ಚಿಕ್ಕಪ್ಪಗೌಡ ಹಾಗೂ ಅಂಜಮ್ಮ ದಂಪತಿಗಳಿಗೆ ತಮ್ಮನ್ನು ಕಾಪಾಡಿರೆಂದು ದಾಸಯ್ಯನೊಂದಿಗೆ ಹೇಳಿ ಕಳಿಸಿದರು. ಈ ಸುದ್ದಿ ಕೇಳಿದ ರಾಣಿ ಅಂಜಮ್ಮನವರು ಪತಿ ಚಿಕ್ಕಪ್ಪಗೌಡನಿಗೆ ಇಂಥ ಅವಕಾಶವನ್ನು ಕಳೆದುಕೊಳ್ಳಬೇಡಿರಿ. ಅಸಹಾಯಕರಿಗೆ ರಕ್ಷಣೆ ನೀಡುವುದು ವೀರರ ಲಕ್ಷಣ. ಭಾವನಾತ್ಮಕ ವಿಚಾರಗಳಿಂದ ಮನಸ್ಸನ್ನು ಚಂಚಲಗೊಳಿಸಿಕೊಳ್ಳಬೇಡಿರಿ, ಅನಾಥವಾಗಿರುವ ಆ ಮಕ್ಕಳಿಗೆ ನಾವು ಬೆಂಬಲವಾಗಿ ನಿಂತರೆ, ಆ ಶಿವ ಸಿರಿ, ಸಂಪತ್ತನ್ನು ನೀಡುವನು ಎಂದು ಇತ್ಯಾದಿಯಾಗಿ ಹೇಳಿ ಮುಮ್ಮಡಿ ಚಿಕ್ಕಪ್ಪಗೌಡನ ಮನ ಒಲಿಸಿದಳು. ಮುಮ್ಮಡಿ ಚಿಕ್ಕಪ್ಪಗೌಡ ಆ ಮಕ್ಕಳಿಬ್ಬರನ್ನು ರಕ್ಷಿಸಿದನು, ಅಷ್ಟೇ ಅಲ್ಲದೆ ರತ್ನಗಿರಿಯಲ್ಲಿ ೫ ಸಾವಿರ ಸೀಮೆಯನ್ನು ಕೊಟ್ಟು ಆ ಮಕ್ಕಳು ಆ ಭಾಗದಲ್ಲಿರುವಂತೆ ವ್ಯವಸ್ಥೆ ಮಾಡಿದನು.

ಹೀಗೆ ರಾಣಿ ಅಂಜಮ್ಮನವರ ಸಮಯೋಚಿತ ವಿಚಾರಗಳಿಂದ ಅಸಹಾಯಕರಿಗೆ ಬದುಕನ್ನು ನೀಡಲಾಯಿತೆಂಬುದು ಸತ್ಯದ ಸಂಗತಿ ಎಂಬ ಕಥೆಯನ್ನು ಮಧುಗಿರಿಯ ಇತಿಹಾಸವು ದಾಖಲಿಸಿದೆ.

**೩. ಲಾವಣಿಗಳು:** ವಿಜಯನಗರದ ಆಧಿಪತ್ಯವು ಕ್ಷೀಣಗೊಂಡ ನಂತರ ಅಂದರೆ ೧೭ನೇ ಶತಮಾನದ ತರುವಾಯ ವೀರಸಾಹಿತ್ಯವು ಹುಟ್ಟಿಕೊಂಡಿತು. ವೀರಸಾಹಿತ್ಯವು ತಮ್ಮ ಕಾಲದ ವಸ್ತುವನ್ನೇ ಹೊಂದಿರುವುದರಿಂದ ಇವು ಜನರಿಗೆ ತೀರ ಹತ್ತಿರವಾದವು ಮತ್ತು ಜನಪ್ರಿಯವಾದವು. ವಿಜಯನಗರ ಸಾಮ್ರಾಜ್ಯ ಶಕ್ತಿಗುಂದಿದಾಗ ಸಣ್ಣ-ಪುಟ್ಟ ಸಂಸ್ಥಾನಗಳೆಲ್ಲವೂ ತಮ್ಮನ್ನು ತಾವೇ ಸ್ವತಂತ್ರರೆಂದು ಘೋಷಿಸಿಕೊಂಡು ಆಳ್ವಿಕೆ ಆರಂಭಿಸಿದವು. ಹೀಗೆ ಒಗ್ಗಟ್ಟಿನ ಕಟ್ಟು ಬಿಚ್ಚಿದಾಗ ಶತ್ರುಗಳ ಭೀತಿ ಜಾಸ್ತಿಯಾಯಿತು. ಈ ಸಂದರ್ಭದಲ್ಲಿ ಮಹಮ್ಮದೀಯರನ್ನು ಎದುರಿಸುವ ಹೊಸ ಆಪತ್ತು ತಲೆದೋರಿತು. ಇದರಿಂದ ಶತ್ರುಗಳನ್ನು ಎದುರಿಸಲು, ತಮ್ಮ ಆಧಿಪತ್ಯ ಉಳಿಸಿಕೊಳ್ಳಲು, ಸಮಾಜದಲ್ಲಿ ಶಾಂತಿ ನೆಲೆಸುವಂತೆ ಮಾಡಲು, ಜನರಲ್ಲಿ ಉತ್ಸಾಹ, ಸ್ಫೂರ್ತಿಯನ್ನು ತುಂಬುವ ಅಗತ್ಯದ ಹಿನ್ನೆಲೆಯಲ್ಲಿ ಜನಪದ ವೀರಸಾಹಿತ್ಯ ಹುಟ್ಟಿತು ಎನ್ನಬಹುದು. ಪೇಶ್ವೆಯವರ ಕಾಲದಲ್ಲಿ ಸೈನಿಕರನ್ನು ಹುರುದುಂಬಿಸಲು, 'ಪೋವಾಡ'ಗಳೆಂಬ ವೀರಸಾಹಿತ್ಯ ರಚನೆಯಾಯಿತು. ಈ ಪೋವಾಡಗಳು ಗತಿಸಿದ ವೀರರ ಕಥನಕವನಗಳೇ ಆಗಿವೆ. ಇದೇ ಮಾದರಿಯಲ್ಲಿ ಕನ್ನಡ ಸಾಹಿತ್ಯದಲ್ಲಿ ಮೂಡಿಬಂದವುಗಳೇ ಲಾವಣಿಗಳು. ಯುದ್ಧಕ್ಕೆ ಹೊರಟ ವೀರಯೋಧರು ತಮ್ಮ ಬೀಡುಗಳಲ್ಲಿ ತಮಗಿಂತ ಹಿಂದಣ ವೀರರ ಪರಾಕ್ರಮ ವರ್ಣಿಸುವ ಪದಗಳನ್ನು ಹಾಡುತ್ತಾ ರಾತ್ರಿಯನ್ನು ಕಳೆಯುತ್ತಿದ್ದರೆಂಬುದನ್ನು ನಂಜುಂಡ ಕವಿಯ [illegible] [illegible] [illegible]. ಜನಪದವು ತನ್ನ ನಿತ್ಯಜೀವನದಲ್ಲಿ ಕೆಲವೇ ಶಬ್ದಗಳನ್ನು ಬಳಸುತ್ತಿದ್ದರೂ, ಜನಪದರ ಮನದ ಇಂಗಿತವನ್ನು ಕಟ್ಟಿಕೊಡುವಂಥವುಗಳಾಗಿವೆ. ಮಾನವಜ್ಞಾನದ ಒಂದು ಶಾಖೆಯಾದ ಜನಪದದ

ಗುರಿ ಮಾನವನ ಇತಿಹಾಸದ ಪುನರಚನೆ. ಇದು ನಿರಕ್ಷರಿಗಳಾದ ಸುಸಂಸ್ಕೃತರ ನಂಬಿಕೆ, ಸಂಪ್ರದಾಯ, ಗಾದೆ, ಒಗಟು, ಹಾಡು, ಪುರಾಣ, ಶಿಷ್ಟಾಚಾರ, ಮಾಯ, ಮಾಟ ಮೊದಲಾದ ಆಚರಣೆಗಳನ್ನು ತನ್ನಲ್ಲಿ ಅಳವಡಿಸಿಕೊಂಡಿದೆ.

ಹೆಚ್ಚು ಪ್ರಭಾವಯುತವಾದ ವೀರರಸ ಪ್ರಧಾನ ಲಾವಣಿಗಳು ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಡುವಂಥವುಗಳು. ಒಂದು ಸಂಸ್ಥಾನ ಅಥವಾ ಸಮುದಾಯ ತನ್ನ ರಾಜಕೀಯ ಮತ್ತು ಸಾಂಸ್ಕೃತಿಕ ಅಸ್ಮಿತೆಯನ್ನು ಕಾಣುವ ಹಂಬಲದಲ್ಲಿದ್ದಾಗ ಇಂಥ ಚಾರಿತ್ರಿಕ ಪದ್ಯಗಳು ಭಾವನಾತ್ಮಕವಾದ ಆತ್ಮವಿಶ್ವಾಸವನ್ನು ದ್ವಿಗುಣಗೊಳಿಸುವ ಪರಿ ಗಮನಾರ್ಹವಾದುದೆಂದೂ, ಅಲ್ಲದೆ ವೀರಸಾಹಸವು ಹೆಣ್ಣಿಗಾಗಿ ಅಥವಾ ನೆಲಕ್ಕಾಗಿ ನಡೆಯಬಹುದು ಎಂಬುದಾಗಿ ಡಾ.ವೀರೇಶ ಬಡಿಗೇರ ಅವರು ಅಭಿಪ್ರಾಯ ಪಡುತ್ತಾರೆ. 'ವತ್ಸಲಾ ಹರಣವು' ವೀರರಸದ ಲಾವಣಿಗೆ ವಸ್ತುವಾಗುವಂತೆ ಸರ್ಜಪ್ಪನಾಯಕನು ಸೋತರೂ, ಕಿತ್ತೂರ ಚೆನ್ನಮ್ಮ ಮಡಿದರೂ, ಶ್ರೀರಂಗಪಟ್ಟಣದ ಕೋಟೆ ನೆಲಸಮವಾದರೂ ವೀರಕಾವ್ಯಗಳು ನಡೆಯಲೇಬೇಕು. ಹೀಗೆ ಸರ್ಜಪ್ಪನಾಯಕ, ಸಂಗೊಳ್ಳಿರಾಯಣ್ಣ, ಕಿತ್ತೂರಚೆನ್ನಮ್ಮನಂಥ ಸ್ವಾತಂತ್ರ್ಯವೀರರನ್ನು ಮರೆಯದಂತೆ ಮಾಡಿದವರು ನಮ್ಮ ಜನಪದ ಕವಿಗಳು.

ಜಾನಪದ ವೀರಗೀತೆಗಳ ಕುರಿತು ಹಲವು ವಿದ್ವಾಂಸರು ಚಿಂತನೆಗೈದಿದ್ದಾರೆ. ಬಿ.ಬಿ.ಮಹಿಶ ವಾಡಿಯವರ 'ಜನಪದ ವೀರಗೀತೆಗಳು', ಡಾ.ಶ್ರೀಕಂಠ ಕೂಡಗಿಯವರ 'ಕನ್ನಡ ಲಾವಣಿಗಳು', ಡಾ.ಬಿ.ಎಸ್.ಗದ್ದಿಗಿಮಠರ 'ಡಂಬಳ ಮಲ್ಲವ್ವ' ಗೀತೆ, ಮತಿಘಟ್ಟ ರಾಮಸ್ವಾಮಿ ಮತ್ತು ಕೃಷ್ಣಮೂರ್ತಿಯವರ 'ಗೀತೆಗಳು', ಮಳಲಿ ವಸಂತಕುಮಾರರ 'ಕೋಲು ಪದಗಳು', ನಿಂಗಣ್ಣ ಸಣ್ಣಕ್ಕಿ ಅವರ 'ಟಿಪ್ಪುಸುಲ್ತಾನ', ಜಿ.ಶಂ.ಪರಮಶಿವಯ್ಯರ 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು', ತಲ್ಲೂರ ರಾಯನಗೌಡರ 'ಜನಪದ ಹಾಡುಗಳು', ಡಾ.ಎಂ.ಎಸ್.ಸುಂಕಾಪುರ ಅವರ 'ಜನಪದ ಸಾಹಿತ್ಯ ದರ್ಶನ' ಮತ್ತು 'ಜೀವನ ಜೋಕಾಲಿ', ಡಾ.ಎಂ.ಎಸ್.ಲಠ್ಠೆಯವರ 'ಉತ್ತರ ಕರ್ನಾಟಕದ ಹಂತಿಯ ಹಾಡುಗಳು', ಎಸ್.ಎಂ.ಬಿದರಿಯವರ 'ಆಕಾಶದ ಗಂಟೆ ನುಡಿದಾವ', ದೇ.ಜ.ಗೌ. ಅವರ 'ಜನಪದ ಗೀತಾಂಜಲಿ', ಮಾ.ನಂ.ನಂಜಪ್ಪ ಅವರ 'ವೀರರಾಣಿ ಕಿತ್ತೂರು ಚೆನ್ನಮ್ಮನ ಕಥೆಯ ಲಾವಣಿ', ಡಾ.ಎಸ್.ಎಂ.ವೃಷಭೇಂದ್ರ ಸ್ವಾಮಿಯವರ 'ಜನಪದ ಲಾವಣಿಗಳಲ್ಲಿ ಕಿತ್ತೂರ ಚೆನ್ನಮ್ಮ', ಡಾ.ಲಕ್ಷ್ಮಣ ತೆಲಗಾವಿಯವರ 'ಹರತಿಸಿರಿ', ಜೀ.ಶಂ.ಪ. ಅವರ 'ಹೊನ್ನ ಬಿತ್ತೇವು ಹೊಲಕೆಲ್ಲ', ಡಾ.ಎಸ್.ಜಿ.ಇಮ್ರಾಪುರರ 'ಜಾನಪದ ಕಿತ್ತೂರಿನ ಕತೆಗಳು', ಶಿವಾನಂದ ಜರಂತಿಮಠರ 'ಜಾನಪದ ಸಾಲ್ದಳ', ಜ್ಯೋತಿ ಹೊಸೂರು 'ಜಾನಪದದಲ್ಲ ಕಿತ್ತೂರ' ಹೀಗೆ ಇತ್ಯಾದಿ ಕೃತಿಗಳು ಜನಪದ ಸಾಹಿತ್ಯದಲ್ಲಿ ರಾಣಿಯರ ಚಿತ್ರಣವನ್ನು ನೀಡಲು ಸಹಕಾರಿಯಾಗುತ್ತವೆ.

ಬಲಶಾಲಿ ಹುಲಿಯಂತೆ ತನ್ನ ಶೌರ್ಯ ಸಾಹಸವನ್ನು ಮೆರೆದ ಕೆಳದಿ ರಾಣಿ ಚೆನ್ನಮ್ಮಾಜಿಯ ಹಿರಿಮೆಯನ್ನು ಜನಪದ ಗೀತೆಯೊಂದು ಕಟ್ಟಿಕೊಡುತ್ತದೆ. ರಾಣಿ ಚೆನ್ನಮ್ಮಾಜಿಯು ಮರಾಠಿದೊರೆ ರಾಜಾರಾಮನು ರಾಣಿಯ ಆಶ್ರಯವನ್ನು ಬಯಸಿ ಬಂದಾಗ ಅವನಿಗೆ ಆಶ್ರಯ ನೀಡಿ ಔರಂಗಜೇಬನ ಸೈನ್ಯವನ್ನು ಸೋಲಿಸುತ್ತಾಳೆ. ಈ ವಿಚಾರವನ್ನು ಡಾ.ಬಿ.ಎಸ್.ಗದ್ದಗಿಮಠರು ಸಂಪಾದಿಸಿದ್ದಾರೆ.

"ಮೊಗಲ ಖಾನರಿಗಂಜಿ ಮರಾಠಿ ಮರಿಯರಸ
ಮಲೆನಾಡ ರಾಣಿಗೆ ಬೆನ್ನಿಗೆ ಬಿದ್ದ ಜಾಣೆ॥
ಮೊಗಲಶಾಹಿ ವರಂಗಖನ ಬಿಗುವಿಲೆ ಕೆಳದಿಗೆ ಇಳಿದ।
ಹಗಲಿರುಳು ದಿಗಿಲಾಗ ದಿನದಿನಕ ಜಾಣೆ॥
ಮುನ್ನೋಡೆ ಕೊಡ ಹೇಳೋ ಚೆನ್ನಮ್ಮ ರಾಜಾರಾಮ್ನ।
ಕನ್ನ ಕೊಲೆ ಸುಲಗಿ ಇಲದಿರಕ ಜಾಣೆ॥
ಖಾನರ ಕರಿಸ್ಯಾಳೆ, ಅರಮನೆಗೆ ಇಳಿಸ್ಯಾಳೆ।
ನೆವಣಿ ನಿಟ್ಟ ಬಿಗಿಸಿ ಹುಗಸ್ಯಾಳ ಜಾಣೆ॥
ಬೆಳಗಾಗಿ ಹೌಹಾರಿ ಮೊಗಲರ ಇಡಿದಂಡು।
ಕಾಲಕಿತ್ತು ಓಡ್ಯಾರೋ ಖಾನರು ಜಾಣೆ॥
ಉಳವಿಯ ಚನ್ನಬಸವ ಉಳಿಸಿದ ನಮ್ಮಾನ।
ಕಳಸವ ಕಟ್ಟಿ ಕೈಮುಗಿದು ಜಾಣೆ॥
ಕೆಳದಿಯ ಶಿವರಾಜ್ಯ ಬೆಳೆಯಲಿ ಶಿವಶಿವನೆ।
ಇಳಿಮ್ಯಾಗ ಸೊಗನಲಿದು ಉಂಡುಟ್ಟ ಜಾಣೆ॥"[೪೭] ಎಂದು.

ರಾಣಿಯು ಉಪಾಯವಾಗಿ ರಾಜಾರಾಮನನ್ನು ಕಾಪಾಡಿರುವ ಪ್ರಸಂಗವನ್ನು ಇಲ್ಲಿ ಕಾಣಬಹುದು. ಅಲ್ಲದೆ ಔರಂಗಜೇಬನಂಥ ದೊರೆಯ ಅಪಾರ ಸೈನಿಕರನ್ನು ಸೋಲಿಸಿದಳೆಂಬ ಮಾಹಿತಿಯನ್ನು ತಿಳಿಸುತ್ತವೆ. ಇದಲ್ಲದೆ ಕೆಳದಿ ರಾಣಿಯ ಸೈನಿಕ ಸಾಧನೆಗಳನ್ನು ಕುರಿತು, ಅದರಲ್ಲೂ ರಾಣಿಯು ಮೈಸೂರಿನವರ ವಿರುದ್ಧ ಯುದ್ಧಕ್ಕೆ ಸನ್ನದ್ಧಳಾಗಿ ಹೋಗುವ ಸಮಯದಲ್ಲಿ ಜನಪದರು ಹಾಡಿದರು ಎನ್ನಲಾದ ಹಾಡು(ಜನಪದ ಗೀತೆ) ಗಮನಾರ್ಹವಾದುದಾಗಿದೆ.

"ಜಯತು ಕೆಳದಿಯ ರಾಣಿ ಚೆನ್ನಮ್ಮಾಜಿಯ ಕ್ಷತ್ರಿಯ ಪುತ್ರಿಯೆ
ಜಯತು ಸನ್ನುತವಾಣಿ ರಾಜ್ಯದ ಮಾತೆ ಸಜ್ಜನ ಪುತ್ರಿಯೆ ॥೧॥
ಮಲೆಯ ರಾಜ್ಯವ ರಕ್ಷಿಸುವ ಮೂಕಾಂಬಿಕೆಯ ಪ್ರತಿರೂಪಳೆ

ಸತಿದಿಗಂತ ಖ್ಯಾತಿ ಗಳಿಸಿದ ವೀರಗುಣ ಸಂಪನ್ನಳೆ
ಹಿರಿಯ ಸೋಮಾಹ್ವಯನ ಪತ್ನಿಯೆ ಸಕಲಬುಧ ಜನರಕ್ಷೆಯೆ
ಶರಣಜನ ಸನ್ಮಾರ್ಗಗಾಮಿಯೆ ಶ್ರೇಷ್ಠ ಸಂಯಮ ಶಾಲಿಯೆ
ಆ ಶಿವಾಜಿಯ ಪುತ್ರ ರಾಜಾರಾಮನಂ ಕಾಪಾಡಿದೆ
ಈಶ ರಾಮೇಶ್ವರನ ಪೂಜಿಸಿ ಲೋಕ ವಿಸ್ತೃತಗೊಳಿಸಿದೆ
ದುಷ್ಟ ಮೊಗಲರ ಶಿಕ್ಷಿಸುತ್ತಲಿ ಶಿಷ್ಟರಂ ಪರಿಪಾಲಿಸಿ
ಸೃಷ್ಟಿಯೊಳು ವಿಖ್ಯಾತಳೆನಿಸಿದ ಕೀರ್ತಿಗಾನವ ಲಾಲಿಸಿ
ರಾಜಧರ್ಮವನರಿದು ಜನರ ಧರ್ಮದಿಂದಲಿ ಲಾಲಿಸಿ
ತೇಜಗುಣದಿಂ ಮೆರೆದು ರಾಜ್ಯದ ಕೀರ್ತಿಗೌರವ ಹೆಚ್ಚಿಸಿ
ವಿಜಯ ಸೌ ಬಿದನೂರು ರಾಣಿಯೇ ಕೀರಕುಲಸಮವಾಣಿಯೆ
ವಿಜಯ ಸೌ ಇಕ್ಕೇರಿ ರಾಣಿಯ ಪರಮಗುಣ ಸರ್ವಾಣಿಯೇ
ಜಯಿಸು ಕನ್ನಡ ರಾಣಿ ಮಂಜುಳವಾಣಿ ಚೆನ್ನಮ್ಮಾಜಿಯೆ
ಜಯಿಸು ಸದ್ಗುಣ ಶ್ರೇಣಿ ಆಯುಧ ಪಾಣಿ ಕೆಳದಿ ರಾಣಿಯೆ"[೪೮]

ಎಂದು ಹಾಡಿನ ಸದ್ಗುಣಗಳನ್ನು ಹಾಡಿರುವುದು ವಿಶೇಷವಾದುದಾಗಿದೆ.

ಜನಪದ ವೀರ ಸಾಹಿತ್ಯದಲ್ಲಿ ಕಿತ್ತೂರಿನ ಚರಿತ್ರೆಗೆ ಸಂಬಂಧಿಸಿದಷ್ಟು ಹೇರಳ ಸಾಹಿತ್ಯವು ಮತ್ತಾವ ಸಂಸ್ಥಾನಿಕರನ್ನು ಕುರಿತು ಅಷ್ಟು ಪ್ರಮಾಣದಲ್ಲಿ ದೊರೆತಿಲ್ಲ. ಜನಪದ ಆಧಾರವನ್ನು ಇಟ್ಟುಕೊಂಡೆ ಕಿತ್ತೂರಿನ ಇಡಿಯಾದ ಇತಿಹಾಸವನ್ನು ಕಟ್ಟಿಕೊಡಬಹುದು. ಕಿತ್ತೂರಿನ ಮೈನವಿರೇಳಿಸುವ ಘಟನೆಗಳು, ಯುದ್ಧ ಸನ್ನಿಹಗಳು, ಸ್ವಾತಂತ್ರ್ಯ ಯೋಧರ ಒಳತುಡಿತಗಳೆಲ್ಲವೂ ಜನಪದ ಸಾಹಿತ್ಯದಲ್ಲಿ ಬೆಳಕು ಕಂಡಿವೆ. ಜನಪದ ಕವಿಗಳು, ಜಾನಪದ ಗಾಯಕರು ಗೀಗಿ ಪದಗಳಲ್ಲಿ, ಲಾವಣಿ, ದುಂದುಮೆ, ಕೋಲುಪದ ಇತ್ಯಾದಿಗಳಲ್ಲಿ ಭಾವಾವೇಶ ತುಂಬಿದ ವೀರಗೀತೆಗಳನ್ನು ಕಟ್ಟಿ ಹಾಡಿದ್ದಾರೆ. ಜನಸಾಮಾನ್ಯರ ಮನಸ್ಸನ್ನು ಗೆದ್ದ ಲಾವಣಿ, ವೀರಗೀತೆಗಳು ಜನಪ್ರಿಯವಾದವು. ಜನಪದರು ಹಾಡುವ ಈ ಗೀತೆಗಳು ಹಿಂದೊಮ್ಮೆ ನಮ್ಮ ಪರಿಸರದಲ್ಲಿ ವೀರರು ಬದುಕಿದ್ದರೆಂದೂ, ಅವರ ಜನಪದ ಧೋರಣೆ, ಸಾಹಸಗಳಿಂದ ಪ್ರಸಿದ್ಧರಾಗಿದ್ದರೆಂಬುದನ್ನು ಹಾಡುತ್ತಾ, ಒಬ್ಬರ ಬಾಯಿಂದ ಇನ್ನೊಬ್ಬರ ಬಾಯಿಗೆ ಪ್ರಸರಣಗೊಳ್ಳುತ್ತಾ ಸಾಗಿ ಬಂದಿವೆ. ಇದರಿಂದ ಕಾಲಾನುಕಾಲಕ್ಕೆ ನಡೆದ ಘಟನೆಗಳೆಲ್ಲವನ್ನು ದಾಖಲಿಸುವ ಕೆಲಸವನ್ನು ನಮ್ಮ ಜನಪದರು ಮಾಡಿದ್ದಾರೆ

ಸಣ್ಣ ಪುಟ್ಟ ಸಂಸ್ಥಾನಗಳು ಜನರಿಗೆ ಹೆಚ್ಚು ಹತ್ತಿರವಾಗಿ ಆಳ್ವಿಕೆ ನಡೆಸಿದವೆಂಬ ಕಾರಣವಾಗಿಯೇ ಸಂಸ್ಥಾನಿಕರು ಅರಸರು, ಅರಸಿಯರೂ, ಅರಸ–ಅರಸಿಯರ ಆತ್ಮೀಯ ವಲಯ,

ನೆಚ್ಚಿನ ಬಂಟರು, ಮಂತ್ರಿ ನಿಯೋಗಿಗಳು ಇತ್ಯಾದಿ ಎಲ್ಲರೂ ಜನಪದರ ಗೀತೆಗಳ ವಸ್ತುವಾದರು. ಊರಿಗೊಂದು ಕೆರೆ, ದೇವಾಲಯ, ಅಳಿದುಳಿದ ಸ್ಮಾರಕಗಳು ಇವೆಲ್ಲವೂ ವೀರರನ್ನು, ಮಹಾಸತಿಯಾದವರನ್ನು, ಆತ್ಮಾರ್ಪಣೆ ಮಾಡಿಕೊಂಡವರನ್ನು, ಮುಂತಾದವರನ್ನು ಪ್ರತಿನಿಧಿಸುವ ಹಿನ್ನೆಲೆಯಲ್ಲಿ ಹುಟ್ಟಿದಂಥ ಕಥೆಗಳು ಹಾಡಿನ ರೂಪದಲ್ಲಿ ಪ್ರಚಾರಗೊಂಡಿವೆ.

ಜನಪರ ಆಳ್ವಿಕೆಯನ್ನು ನಡೆಸಿ, ಜನರ ಒತ್ತಾಸೆಗೆ ಪೂರಕವಾಗಿ ಆಳ್ವಿಕೆ ನಡೆಸಿದ ಅದೆಷ್ಟೋ ರಾಜ-ರಾಣಿಯರು ಶಕುನಿಯಂಥ ದುರಾತ್ಮರ ಮೋಸಕ್ಕೆ ಒಳಗಾಗಿ ಇನ್ನಿಲ್ಲದಂತೆ ದೇಹ ಮಣ್ಣಲ್ಲಿ ಮಣ್ಣಾದರೂ, ಅವರ ಆದರ್ಶ ವ್ಯಕ್ತಿತ್ವ ಜನಪದರ ಬಾಯಲ್ಲಿ ಉಳಿದು ಬಂದಿದೆ. ಒಡೆಯ-ಒಡತಿಯರ ಅನುಪಸ್ಥಿತಿಯಲ್ಲಿ ಜರುಗಿದ ರಾಜಕೀಯ ಸ್ಥಿತ್ಯಂತರಗಳು, ಸಮಾಜದಲ್ಲಾದ ಪರಿವರ್ತನೆಗಳು, ಬದುಕಿನಲ್ಲಿ ಅಳವಡಿಸಿಕೊಂಡು ಬಂದ ಆದರ್ಶಗಳು ಕುಸಿಯುತ್ತಿರುವ ವಿಷಮ ಸ್ಥಿತಿಯನ್ನು ಕಂಡುಂಡ ಜನಪದರು ತಮ್ಮದೇ ಆದ ಭಾಷೆಯಲ್ಲಿ, ಅವೆಲ್ಲವನ್ನು ಕಟ್ಟಿ, ತಮ್ಮ ಸುಮಧುರ ಕಂಠದಿಂದ ಅವು ಉಳಿಯುವಂತೆ ಮಾಡಿದರು.'

ಬೆಳಗಾವಿ ಜಿಲ್ಲೆಯ ಕಿತ್ತೂರ ಸಂಸ್ಥಾನವನ್ನು ಕುರಿತು ವೀರಸಾಹಿತ್ಯವು ಅಪಾರವಾಗಿದೆ. ಕಿತ್ತೂರ ರಾಣಿ ಚೆನ್ನಮ್ಮನನ್ನು ಕುರಿತ ಜನಪದ ಸಾಹಿತ್ಯವನ್ನು ಸಂಗ್ರಹಿಸಿದವರಲ್ಲಿ ದೊಡ್ಡ ಭಾವೆಪ್ಪ ಮೂಗಿ, ಡಾ.ಗದ್ದಗಿಮಠ, ಡಾ.ಸುಂಕಾಪುರ, ಡಾ.ಎಂ.ಎಸ್.ಲಠ್ಠೆ, ಎಸ್.ಎಂ.ಬಿದರಿ, ಡಾ.ದೇ.ಜವರೇಗೌಡ, ನಿಂಗಣ್ಣ ಸಣ್ಣಕ್ಕಿ, ಶಿವಲಿಂಗಪ್ಪ ಭಾವಿಕಟ್ಟಿ ಪ್ರಮುಖರಾಗಿದ್ದಾರೆ. ಅಲ್ಲದೆ ಸಂಸ್ಥಾನದ ದೊರೆಗಳು ಮತ್ತು ಚೆನ್ನಮ್ಮನನ್ನು ಕುರಿತು ಹಾಡುಗಳನ್ನು ಕಟ್ಟಿದವರಲ್ಲಿ ಚಿವಟಗುಂಡಿಯ ಪಡದಯ್ಯ, ಹೊಸೂರ ಸೋಮಲಿಂಗ, ಚೆನ್ನಹೊಸೂರ ಮಲ್ಲೇಶಿ, ಹೊಂಗಲದ ದುರದುಂಡೀಶ, ನೇಸರಗಿಯ ಅಡವೆಪ್ಪ ಬೌಬಾರಿ, ಹೊಂಗಲದ ಬಸವ, ತಿಗಡೊಳ್ಳಿ ಮರಿಕಲ್ಲಪ್ಪ ಇತ್ಯಾದಿ ಕವಿಗಳು ತಮ್ಮ ಆನಂದ, ನೋವು-ನಿರಾಶೆಗಳೆಲ್ಲವನ್ನು ತಮ್ಮ ಲಾವಣಿಗಳಲ್ಲಿ ಹಂಚಿಕೊಂಡಿದ್ದಾರೆ.

"ಜಾನಪದ ಕಿತ್ತೂರಿನ ಕಿಡಿಗಳು" ಎಂಬ ಕೃತಿಯನ್ನು ನೀಡಿದ ಡಾ.ಇಮ್ರಾಪುರರು ಕಿತ್ತೂರಿನ ವೀರ ಸಾಹಿತ್ಯದ ಮೇಲೆ ಸಾಕಷ್ಟು ಕೃಷಿಗೈದಿದ್ದಾರೆ. 'ರಾಣಿ ಚೆನ್ನಮ್ಮ' ಕೃತಿಯನ್ನು ಬರೆದ ಸದಾಶಿವ ಒಡೆಯರು ಕಿತ್ತೂರು ಹಾಗೂ ಕಿತ್ತೂರಿನ ಇತಿಹಾಸಕ್ಕೆ ಸಂಬಂಧಿಸಿದ ಸ್ಥಳಗಳಿಗೆ ಭೇಟಿ ನೀಡಿ. ಸಂಗ್ರಹಿಸಿದ ದಾಖಲೆಗಳಲ್ಲಿ ಸ್ಥಳೀಯ ಲಾವಣಿ, ಜನಪದ ಹಾಡು, ಕವಿತೆ, ನಾಟಕ, ಇತರ ಸಾಹಿತ್ಯಿಕ ಬರವಣಿಗೆಗಳಿವೆ ಎಂದಿದ್ದಾರೆ. 'ಕಿತ್ತೂರ ಕಾಳಗ' ಕೃತಿಯನ್ನು ಬರೆದ ದೊಡ್ಡಭಾವೆಪ್ಪ ಮೂಗಿ ಅವರು ಇತಿಹಾಸಕ್ಕೆ ಸಂಬಂದಪಟ್ಟ ಜಾನಪದದ ಕೋಲುಪದ, ಸೋಬಾನಪದ, ಲಾವಣಿ ಹಾಡುಗಳನ್ನು ಆಯ್ದು ಈ ಕೃತಿಯಲ್ಲಿ ತಂದಿದ್ದಾರೆ. ಜನರು ತಾವು ದಿನನಿತ್ಯ ಹಾಡುವ ಹಾಡುಗಳಲ್ಲಿ ತಮ್ಮ ನಾಡಿನ ಐತಿಹಾಸಿಕ ಸಂಗತಿಗಳನ್ನು ಉಳಿಸಿಕೊಂಡು

ಬಂದಿದ್ದಾರೆ. ಇವರ ಹಾಡುಗಳಲ್ಲಿ ಬರುವ ಐತಿಹಾಸಿಕ ವ್ಯಕ್ತಿಗಳ ವ್ಯಕ್ತಿತ್ವವು ಜನತೆಗೆ ಮಾರ್ಗದರ್ಶನವಾಗಿತ್ತೆಂಬುದನ್ನು ಮರೆಯುವಂತಿಲ್ಲ. 'ಹಿಡಿಯೊ ಮೋಜಿನ ಕಾಳಿಯ' ಎಂಬದು ಚೆನ್ನಮ್ಮ ರಾಣಿಯ ಕಾಲದಲ್ಲಿ ಪ್ರಚಲಿತವಿದ್ದ ಒಂದು ಕಹಳೆಯ ಪದವಾಗಿದೆ. 'ವೀರಪ್ಪದೇಸಾಯಿ' ಕಿತ್ತೂರ ದೊರೆ ಮಲ್ಲಸರ್ಜನ ಶೌರ್ಯ, ಸಾಹಸಗಳನ್ನು ಇಲ್ಲಿ ಹಾಡಲಾಗಿದೆ. 'ದೊರೆ ಮಲ್ಲಸರ್ಜ' ಎಂಬ ಕೋಲಿನಪದ ಕಿತ್ತೂರಿನ ದೊರೆ ಮಲ್ಲಸರ್ಜನು ತನ್ನ ಆಳ್ವಿಕೆಯ ಬಹುಭಾಗವನ್ನು ಯುದ್ಧದಲ್ಲಿ, ದಂಗೆಗಳನ್ನು ಸದೆಬಡಿಯುವುದರಲ್ಲಿಯೇ ಕಳೆದನು. ಕ್ರಿ.ಶ.೧೭೮೫ರಲ್ಲಿ ಟಿಪ್ಪು ಈತನನ್ನು ಸೆರೆಹಿಡಿದ ಸಂದರ್ಭವನ್ನು ಜನಪದರು ಸೊಗಸಾಗಿ ಹಾಡಿದ್ದಾರೆ.

> "ಮಡದಿ ರುದ್ರವ್ವ ಅಳದಿರ। ಏನೆನ್ನ।
> ಮಾತಿನ ಮಾಹಾರಾಯನ ಕೈ ಶರಿಯ
> ಕೋಟಿ ಕೋಟಿ ಸುತ್ತ ಕಾಟಕರು ಮಡಿದಾರ।
> ಬಾಲಿ ಚೆನ್ನವ್ವ ಅಳದಿರ।
> ಏನಿನ್ನ ರಾಯರನ್ನೊಯದಾರ ಕೈ ಶರಿಯ"[೪೯]

ಎಂದು ವರ್ಣಿಸುತ್ತಾ, ರಾಣಿಯರಾದ ರುದ್ರವ್ವ ಮತ್ತು ಚನ್ನವ್ವರನ್ನು ದಾಖಲಿಸಲಾಗಿದೆ.

ಮಲ್ಲಸರ್ಜನ ಶೌರ್ಯವನ್ನು, ಸಾಹಸವನ್ನು ಕಂಡು, ಪೇಶ್ವೆಯು 'ಪ್ರತಾಪರಾವ್' ಎಂಬ ಬಿರುದನ್ನು ಕೊಟ್ಟನೆಂಬ ಅಂಶವನ್ನು ಈ ಹಾಡು ಧ್ವನಿಸುತ್ತದೆ. 'ಶಿವಲಿಂಗ ರುದ್ರಸರ್ಜ' ತಂದೆ ಮಲ್ಲಸರ್ಜನ ನಂತರ ಅಧಿಕಾರಕ್ಕೆ ಬಂದ ರುದ್ರಸರ್ಜ, ಲಿಂಗಪೂಜಾ ನಿಷ್ಠನಾಗಿದ್ದನಲ್ಲದೆ, ಹಲವಾರು ಹಾಡುಗಳನ್ನು ರಚನೆ ಮಾಡಿದನೆಂಬ ಅಂಶಗಳು ಈ ಹಾಡಿನಿಂದ ತಿಳಿದುಬರುತ್ತವೆ. 'ಚೆನ್ನಮ್ಮ ರಾಣಿ' ಎಂಬ ಕೋಲುಪದವು

> "ಅಪ್ಪ ಮಲ್ಲಸರಜ್ಯಾನ ಮಡದೀಯು।
> ಗಂಡನ ದರಬಾರ ನಡಸ್ಯಾಳೊ
> ಆರೆ ಇನ್ನ ತನ್ನ ಗಂಡನ ದರಬಾರ ನಡಸ್ಯಾಳೊ। ಕೋ ಕೋ"[೫೦]

ಎಂದು ಮಲ್ಲಸರ್ಜನ ಮರಣದ ತರುವಾಯ ರಾಣಿ ಚೆನ್ನಮ್ಮ ಆಡಳಿತ ನಿರ್ವಹಿಸಿದ ಬಗೆಯನ್ನು ಚಿತ್ರಿಸುತ್ತದೆ. ಮಲ್ಲಸರ್ಜನ ರಾಣಿ ಚೆನ್ನಮ್ಮಾಜಿಯು ಬ್ರಿಟಿಷರಿಗೆ "ಹಿಂದೀಯರ ರಾಜ್ಯಭಾರದಲ್ಲಿ ಕೈಹಾಕುವ ಅಧಿಕಾರ ಬ್ರಿಟಿಷರಿಗೆ ಇಲ್ಲವೆಂದು"[೫೧] ನೀಡುವ ಎಚ್ಚರಿಕೆಯ ಮಾತು. ಆಕೆಯ ಶೌರ್ಯದ ಪ್ರತೀಕವಾಗಿದೆ. "ಸಾಹೇಬನ ದಂಡ ಕದಕದದ ಕಡಿವತಾಳೊ ಕುರಿಹಾಂಗ ಕೊಯ್ದು ಒಟ್ಟತಾಳೊ"[೫೨] ಎಂಬ ಮಾತು ರಣರಂಗದಲ್ಲಿ ಉಗ್ರರೂಪ ತಾಳಿದ ರಾಣಿಯನ್ನು ಬಿಂಬಿಸುವಂಥದ್ದು. "ಚೆನ್ನವ್ವ ಸಾಹೇಬನ ಚಂಡ ಚಟ್ಟನೆ ಹೊಡದಾಳೊ"[೫೩]

ಎಂದು ಜನಪದರು ರಾಣಿಯ ಶೌರ್ಯವನ್ನು ಹಾಡಿ ಹೊಗಳಿದ್ದಾರೆ. 'ಕಿತ್ತೂರಿನ ಮುತ್ತಿಗೆ ಹಾಡಿನಲ್ಲಿ ಮುತ್ತಿಗೆ ಹಾಕಲು ಹೊಂಚು ಹಾಕುತ್ತಿದ್ದ ಫಿರಂಗಿಯರು ಹಾಗೂ ಕಿತ್ತೂರಿನ ಜನತೆ ಕಾಳಗಕ್ಕೆ ಸಿದ್ಧಗೊಳ್ಳುತ್ತಿರುವ ಬಗೆಯನ್ನು ಹಾಡಿನ ಮೂಲಕ ಜನಪದರು ಕಟ್ಟಿಕೊಟ್ಟಿದ್ದಾರೆ. 'ಚೆನ್ನಮ್ಮನ ಕೊನೆಯ ಕಾಳಗ', 'ಕಿತ್ತೂರ ರಾಣಿಯ ಅಂತ್ಯ', 'ಕಿತ್ತೂರಿನ ಕೊನೆಯ ಕಾಳಗ' ಇತ್ಯಾದಿ ಹಾಡುಗಳಲ್ಲಿ ಕಿತ್ತೂರಿನ ಐತಿಹಾಸಿಕ ಘಟನೆಗಳನ್ನೆಲ್ಲ ಹಾಡಿನ ಮೂಲಕ ಧ್ವನಿಸಿದ್ದಾರೆ. ಇದಲ್ಲದೆ 'ಐದ್ಹಾಕು ಚಿನ್ನದ ಕೋಲು' ಎಂಬ ಕೋಲುಪದವನ್ನು 'ಗಂಡು-ಹೆಣ್ಣಿನ ಸಂವಾದ' ರೂಪದ ಹಾಡುಗಳನ್ನು ಮೂಗಿಯವರು ನೀಡಿದ್ದಾರೆ.

ಕಿತ್ತೂರಿನ ಬಗೆಗೆ ಹುಟ್ಟಿಕೊಂಡ ಬಹುಪಾಲು ಹಾಡುಗಳಲ್ಲಿ ಕನ್ನಡಿಗರ ಮನೆಮಾತಾಗಿರುವ ಚೆನ್ನಮ್ಮ ಕೇಂದ್ರವ್ಯಕ್ತಿ. ಚೆನ್ನಮ್ಮನ ವೀರಬದುಕು ಅಪಾರ ಸಾಹಿತ್ಯ ಸೃಷ್ಟಿಗೆ ಮೂಲದ್ರವ್ಯವಾಯ್ತು. ಚೆನ್ನಮ್ಮನ ಆದರ್ಶ ಜೀವನವೇ ಒಂದು ಕಾವ್ಯವಾಯ್ತು. ಜೆ.ಎಫ್.ಫ್ಲೀಟ್ ಕನ್ನಡ ಜನಪದ ಸಾಹಿತ್ಯ ಆದ್ಯ ಸಂಗ್ರಹಕಾರರಲ್ಲಿ ಒಬ್ಬರೆಂಬುದು ನಮಗೆಲ್ಲ ತಿಳಿದಿರುವ ಸಂಗತಿಯೇ ಆಗಿದೆ. 'ಗೀತಪ್ರಕಾರವನ್ನು ಮೊತ್ತಮೊದಲು ಸಂಗ್ರಹಿಸಿದ ಕೀರ್ತಿ ಇವರದು. ಹೀಗಾಗಿ ಕನ್ನಡ ಜನಪದ ಪ್ರಪಂಚದಲ್ಲಿ ಫ್ಲೀಟ್ ಅಗ್ರಗಣ್ಯರು. ಫ್ಲಿಟ್ ಸಂಗ್ರಹಿಸಿದ ಲಾವಣಿಗಳನ್ನು ಕ್ಯಾತನಹಳ್ಳಿ ರಾಮಣ್ಣರು ಪುಸ್ತಕ ರೂಪದಲ್ಲಿ ನೀಡಿದ್ದಾರೆ. 'ಸಂಗೊಳ್ಳಿ ರಾಯಣ್ಣನ ದಂಗೆ' ಎಂಬುದು ರಾಯಣ್ಣ ಕಿತ್ತೂರ ಸ್ವಾತಂತ್ರಕ್ಕೆ ಹೋರಾಡಿ, ಮಡಿದ ಕನ್ನಡಿಗನೊಬ್ಬನ ವೀರಕಥೆ ಇಲ್ಲಿ ಬಿಂಬಿತಗೊಂಡಿದೆ. 'ಕಿತ್ತೂರ ಚೆನ್ನವ್ವನ ಸೊಸೆ' 'ಬಾಪು ಸಾಹೇಬ್' ಶಿವಲಿಂಗ ರುದ್ರಸರ್ಜನ ಹೆಂಡತಿಯಾದ ವಿಧವೆ ಈರವ್ವನ ಶೋಕ ಮತ್ತು ಸಾವುಗಳನ್ನು, ಆ ಕಾಲದ ಸ್ಥಳೀಯ ಕುತೂಹಲಕಾರಿ ಜೀವನವನ್ನು ಈ ಹಾಡು ಬಿಂಬಿಸುತ್ತದೆ. 'ಕಿತ್ತೂರ ಚೆನ್ನವ್ವ ಪದ', 'ಕಿತ್ತೂರ ಮೇಲಿನ ಪದ', 'ಕಿತ್ತೂರ ಚೆನ್ನವ್ವನ ಸೊಸಿ ಪದ' ಇತ್ಯಾದಿ ಹಾಡುಗಳು ರಾಣಿ ಚೆನ್ನಮ್ಮನ ಐತಿಹಾಸಿಕ ಬದುಕನ್ನು ಬಿಂಬಿಸುತ್ತವೆ.

ಕನ್ನಡ ಜನಪದ ಸಾಹಿತ್ಯದ ಸತ್ವಯುತವಾದ ಭಾಗವೆಂದರೆ ಲಾವಣಿ ಸಾಹಿತ್ಯ ಲಾವಣಿಗಳ ಮೂಲ ಉದ್ದೇಶವು ಕಥೆ ಹೇಳುವುದೇ ಆದರೂ ಲಾವಣಿಗಳು ಕಥೆಯನ್ನು ಹಾಡಿನ ಮೂಲಕ ಬಿಂಬಿಸುತ್ತವೆ. ಈ ನಿಟ್ಟಿನಲ್ಲಿ ಡಾ.ವಿರೇಶ ಬಡಿಗೇರ ಅವರು 'ಹಳೆಯ ಲಾವಣಿ'ಗಳು ಎಂಬ ಕೃತಿಯನ್ನು ಸಂಪಾದಿಸಿಕೊಟ್ಟಿದ್ದಾರೆ. ಅಲ್ಲದೆ ಲಾವಣಿಯು ತನ್ನದೇ ಆದ ಗತ್ತು-ಗಮ್ಮತ್ತುಗಳನ್ನು ಉಳಿಸಿಕೊಂಡು, ಜನಪ್ರಿಯ ಸಾಹಿತ್ಯ ಪ್ರಕಾರವಾಗಿದೆಂದೂ, ಇದು ಗಾಯಕಿ ಸಂಪ್ರದಾಯಕ್ಕೆ ಸೇರಿದ ಕಥನಗೀತ ಪ್ರಕಾರವಾಗಿದೆ ಎನ್ನುತ್ತಾರೆ. 'ಸಂಗೊಳ್ಳಿ ರಾಯಣ್ಣ' 'ರಾಯನಾಯ್ಕನ ಪದ'ದಲ್ಲಿ ರಾಯಣ್ಣನ ವಂಶ, ವೃತ್ತಿ, ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟದ ಬದುಕೆಲ್ಲವನ್ನು ಇವು ಕಟ್ಟಿಕೊಡುತ್ತವೆ. ಶಿವರಾಮು ಅವರ 'ಕನ್ನಡದ ಕಡುಗಲಿಗಳು' ಎಂಬುದು ಕಿತ್ತೂರ

ಸಂಸ್ಥಾನದ ಸಾಂಸ್ಕೃತಿಕ ಅಧ್ಯಯನವಾಗಿದೆ. ಇದು ಆ ಸಂಸ್ಥಾನದ ರಾಜಕೀಯ, ಜನಾಂಗ, ಕಲೆ, ಸಾಹಿತ್ಯ, ವಾಣಿಜ್ಯ, ಧರ್ಮ ಇತ್ಯಾದಿ ಅಂಶಗಳನ್ನು ವಿವರಿಸುತ್ತದೆ. ಅಲ್ಲದೆ ಸ್ವಾಭಿಮಾನಿ ಪ್ರಜೆಗಳು ರಾಣಿಯ ಸ್ಫೂರ್ತಿಯ, ಕೆಚ್ಚೆದೆಯ ಮಾತಿನಿಂದ ಸ್ಫೂರ್ತಿಗೊಂಡು ಬ್ರಿಟಿಷರ ವಿರುದ್ಧ ಹೋರಾಡಿದ್ದು, ಅಲ್ಲದೆ ರಾಣಿಯು ಬಂಧಿಯಾಗಿ ೫ ವರ್ಷಗಳ ಕಾಲ ಸೆರೆಯಲ್ಲಿದ್ದು, ತನ್ನ ೫೧ನೇ ವಯಸ್ಸಿನಲ್ಲಿ ದಿ.೦೨-೦೨-೧೮೨೯ರಲ್ಲಿ ಶನಿವಾರದಂದು ನಿಧನಳಾದ ಐತಿಹಾಸಿಕ ಮಹತ್ವವುಳ್ಳ ವಿಚಾರವನ್ನು ಈ ಕೃತಿಯು ಚಿತ್ರಿಸುತ್ತದೆ. ಹೀಗೆ ಸ್ವಾಭಿಮಾನಿ ಚೆನ್ನಮ್ಮನ ಮಾತುಗಳೇ ವೀರತ್ವದ ಕಿಡಿಗಳಾಗಿದ್ದವೆಂಬುದನ್ನು ಜನಪದ ಮಾತಿನಲ್ಲೆ ಹೇಳುವುದಾದರೆ,

"ಕಪ್ಪ ಕಾಣಿಕೆ ಬೇಡಲಾಕ ಬಂದೀರಿ<br>
ನಮ್ಮ ವಂಶಕ ಹುಟ್ಟಿರೇನ<br>
ಹಣ ಕೊಟ್ಟು ನಿಮ್ಮನ್ನ ಸಂತೈಸಲಾಕ<br>
ಬೆನ್ನಿಗೆ ಬಿದ್ದ ಅಣ್ಣತಮ್ಮರೇನು? ಹಿಂದೂಸ್ತಾನ ಬಿಟ್ಟು ಎದ್ದೇಳಿ<br>
ಇಲದಿದ್ರ ಜೀವಂತ ಹಿಡಿತಂದ ನುಡಿಸುವೆನು"[೫೪]

ಎಂಬ ನುಡಿ ಎಂಥವರನ್ನು ನಡುಗಿಸುವಂಥದ್ದು. ಇದು ಬನಹಟ್ಟಿ ಅಪ್ಪಣ್ಣನ 'ಕಿತ್ತೂರ ಚೆನ್ನಮ್ಮ' ಲಾವಣಿಯ ನುಡಿಯಾಗಿದೆ. ಅಲ್ಲದೆ ಹೆಗ್ಗೋಡಿ ಮಾಳದ ಮೇಲೆ ಯುದ್ಧ ಪ್ರಾರಂಭವಾದಾಗ ಚೆನ್ನಮ್ಮ ಚಾಮುಂಡಿಯಾಗಿ ರಣಗತ್ತಿ ಹಿಡಿದು ಹೊರಟ ಅವಳ ಸಾಹಸವನ್ನು ಹಂತಿ ಪದವು-

"ಚೆನ್ನಮ್ಮ ದಂಡಿನೊಳಗ ಹೊಗತಾಳೋ<br>
ಶರಣೆಂದು ಕತ್ತಿ ಹಿಡಿದಾಳೊ<br>
ಮಲ್ಲಸರ್ಜ ನಿನ್ನ ಪುಣ್ಯ ಇರಲೆಂದು<br>
ಗಂಡನ ಕತ್ತಿ ಹಿಡಿದಾಳೊ ಚೆನ್ನವ್ವ<br>
ಸಾಹೇಬನ ಚಂಡ ಚಟ್ಟನೆ ಹೊಡೆದಳೊ।"[೫೫]

ಎಂಬ ಹಂತಿ ಪದವು ಆಂಗ್ಲರ ವಿರುದ್ಧ ಕೆರಳಿ ಹಸಿದ ಸಿಂಹಿಣಿಯಾಗಿ ಗರ್ಜಿಸಿದ ರಾಣಿಯ ವಿರಾಟರೂಪವನ್ನು ಇಲ್ಲಿ ಬಿಂಬಿಸಲಾಗಿದೆ. ಜನಪದ ಕವಿಯೊಬ್ಬ ಸಂಸ್ಥಾನ ಪತನವಾದ ಸಂಗತಿಯನ್ನು ಹಾಗೂ ಚೆನ್ನಮ್ಮನ ವಯಸ್ಸನ್ನು ನಿರ್ದೇಶನ ಮಾಡಿದ ಸಂಗತಿ ವ್ಯಕ್ತಗೊಂಡ ಬಗೆ ವಿಶೇಷವಾದುದು.

"ರಕ್ತದ ಕಾಲ್ವೆಹರಿದಸತ್ತ ಹೆಣ ತೇಲಿ ಹೋಗಿ<br>
ಸಂಸ್ಥಾನ ಪತನವಾಯಿತು ಒಂದು ದಿವಸಕ್ಕೆ

ನಾಲವತ್ತಾರ ವಯಸ್ಸಿನ ಚೆನ್ನಮ್ಮ ರಾಣಿಯವರನ್ನು

ಸ್ಥಾನಬದ್ಧ ಮಾಡಿ ಇಟ್ರು ಬೈಲಹೊಂಗಲಕ"[೫೬]

ಹೀಗೆ ಅಪಾರವಾದ ಜನಪದ ಸಾಹಿತ್ಯವು ತನ್ನ ಒಡಲಿನಲ್ಲಿ ಸಾಕಷ್ಟು ಐತಿಹಾಸಿಕ ಸಂಗತಿಗಳನ್ನು ಇರಿಸಿಕೊಂಡಿರುವುದು ಸತ್ಯ. ಹೀಗೆ ಒಡಲಾಳದಲ್ಲಿ ಅಡಗಿದ ಸತ್ಯ ಸಂಗತಿಗಳನ್ನು ಎಳೆ ಎಳೆಯಾಗಿ ಬಿಡಿಸಿಕೊಂಡು, ಸತ್ಯಾಸತ್ಯತೆಯನ್ನು ಪರಿಶೀಲಿಸುವ ಅಗತ್ಯವಿದೆ. ಈ ನಿಟ್ಟಿನಲ್ಲಿ ನಮ್ಮ ನೆಲೆಯಲ್ಲಿಯೇ ಚಿಗುರೊಡೆದಿರುವ ಜನಪದ ಸಾಹಿತ್ಯವು ರಾಣಿ ಕಿತ್ತೂರ ಚೆನ್ನಮ್ಮನ ಮೇಲೆ ಬೀರಿದ ಪ್ರಭಾವದಿಂದ ರಾಣಿ ಕೇವಲ ಒಬ್ಬ ಹೆಣ್ಣಲ್ಲ, ರವಿಚಿನ್ನವಾಗಿದ್ದಾಳೆ.

ಬೆಳವಡಿಯನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ ಸಮರ್ಥರಾಣಿ ಮಲ್ಲಮ್ಮ, ಮಲ್ಲಮ್ಮನ ಕುರಿತಾಗಿಯೂ ಲಾವಣಿಯನ್ನು ಹೊಸೂರು ಸೋಮಲಿಂಗನು ರಚಿಸಿದನೆಂಬುದಾಗಿ ಡಾ.ಎಂ.ಎಸ್.ಲಠ್ಠೆಯವರು ದಾಖಲಿಸಿದ್ದಾರೆ.

"ಮಲ್ಲಮ್ಮನ ರಾಜ್ಯ।

ಮಲ್ಲಮ್ಮ ಆಳಲೆಂದು ಛತ್ರಪತಿ ಹೇಳಿ ತೆರಳಿದ್ದು।

ಶೂರ ಶಿವಾಜಿಯನ್ನ।

ಭಯಗೊಳಿಸಿದ ವೀರ

ನಾರಿ ಮಲ್ಲಮ್ಮನ ಚರಿತ್ರೆಯಿದು"[೫೭]

ಎಂಬುದನ್ನು 'ಜನಪದ ಕವಿಚರಿತ್ರೆ'ಯಲ್ಲಿ ದಾಖಲಿಸಿದ್ದಾರೆ. ಹೀಗೆ ಕೆಳದಿ, ಸೋದೆ, ಬೆಳವಡಿ, ಬಿಳಗಿ ರಾಣಿಯರನ್ನು ಕುರಿತ ಜನಪದ ಕಾವ್ಯಗಳು, ಸಮಕಾಲೀನ ಸಾಮಾಜಿಕ ನಡವಳಿಕೆಯನ್ನು, ಐತಿಹಾಸಿಕ ಅಂಶಗಳನ್ನು ಒಳಗೊಂಡಿರುವವು. ವಿದ್ವಾಂಸರ ಪ್ರಕಾರ ಜನಪದ ಗೀತೆಗಳು ಹುಟ್ಟಿಕೊಂಡಿದ್ದು ೨೦೦-೩೦೦ ವರ್ಷಗಳ ಹಿಂದೆಯಷ್ಟೇ. ಹೀಗಾಗಿ ಇವುಗಳಲ್ಲಿ ವಾಸ್ತವಾಂಶಗಳು ಇಲ್ಲವೆನ್ನಲು ಆಗುವುದಿಲ್ಲ ಎಂಬ ಮಾತನ್ನು ಗಮನಿಸಿದರೆ ಸಾಕು, ಜನಪದ ಕಾವ್ಯಗಳಲ್ಲಿಯ ಐತಿಹಾಸಿಕ ಸಂಗತಿಗಳ ಅರಿವು ನಮಗಾಗುತ್ತದೆ.

ಸಂಶೋಧನೆಯ ಸಂದರ್ಭದಲ್ಲಿ ದಾಖಲೆಗಳ ಕೊರತೆ ಇದ್ದಾಗಲೆಲ್ಲ ಒಂದು ಬೆಳಕಿನ ಕಿರಣವನ್ನು ಜಾನಪದವು ನೀಡುತ್ತದೆ. ಗತಿಸಿ ಹೋದ ಎಷ್ಟೋ ಬದುಕಿನ ಸಾರವನ್ನು ಜಾನಪದವು ಜೀವಂತ ಉಳಿಸಿಕೊಂಡಿದೆ. ಹೀಗೆ ಶಿಷ್ಟ ಸಾಹಿತ್ಯದ ಕೊರತೆಯನ್ನು ಜಾನಪದ ಸಾಹಿತ್ಯವು ನೀಗಿಸುತ್ತದೆಂದರೆ ತಪ್ಪಾಗದು. ಐತಿಹ್ಯ, ದಂತಕತೆ, ಲಾವಣಿ, ಹಾಡು, ಪುರಾಣಗಳ ಮುಸುಕಿನಲ್ಲಿ ಮರೆಯಾಗಿರುವ ವಾಸ್ತವಿಕ ಅಂಶಗಳನ್ನು ಗುರುತಿಸಿದರೆ, ಒಂದು ನಾಡಿನ, ಒಂದು ರಾಜ ಮನೆತನದ, ಸಂಪೂರ್ಣ ಚರಿತ್ರೆಯನ್ನು ಕಟ್ಟಿಕೊಡಲು ಸಾಧ್ಯವಾಗುತ್ತದೆ. ಈ

ಹಿನ್ನೆಲೆಯಲ್ಲಿ ಕನ್ನಡ ಜನಪದ ಸಾಹಿತ್ಯದ ಅಧ್ಯಯನದಿಂದ ಕೇವಲ ಒಬ್ಬ ವ್ಯಕ್ತಿಗೆ, ಒಂದು ಜನಾಂಗಕ್ಕೆ, ಅಥವಾ ಒಂದು ಕುಟುಂಬಕ್ಕೆ ಮಾತ್ರ ಲಾಭವಾಗದೇ, ಇಡೀ ಒಂದು ಸಮಾಜಕ್ಕೆ ಲಾಭವಾಗುತ್ತದೆ. ಜಾನಪದ ಸಾಹಿತ್ಯವು ಭಾವನಾತ್ಮಕವಾದ ಆತ್ಮವಿಶ್ವಾಸವನ್ನು ಇಮ್ಮಡಿಗೊಳಿಸುತ್ತವಷ್ಟೇ ಅಲ್ಲದೆ ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಡಲು ಸಹಕಾರಿಯಾಗಿವೆ.

**೪. ವದಂತಿಗಳು:** ವದಂತಿ ಎಂದರೆ ಹೇಳಲ್ಪಡುವ ವಿಷಯವು ಸತ್ಯ ಅಥವಾ ಅಸತ್ಯವಾಗಿರಬಹುದಾದ ಘಟನೆಗಳ ಸುತ್ತ ಬೆಳೆದುಬಂದವುಗಳಾಗಿವೆ. ಈ ವದಂತಿಗಳನ್ನು ಜನಪ್ರತೀತಿ ಎಂದು ಕರೆಯಲಾಗುತ್ತಿದೆ. ಇಂಥ ಪ್ರತೀತಿಗಳು ರಾಣಿಯರನ್ನು ಕುರಿತು ಹೇರಳವಾಗಿ ಸಿಗುತ್ತವೆ. ಕೆಳದಿಯ ರಾಣಿಯಾದ ಚೆನ್ನಮ್ಮಾಜಿಯು ಸೋಮಶೇಖರ ನಾಯಕನ ಮರಣದ ನಂತರ ತೆರವಾದ ಸಿಂಹಾಸನಕ್ಕೆ ಅಧಿಪತಿಯನ್ನು ಸಮರ್ಥನಾದವನ್ನು ದತ್ತು ತೆಗೆದುಕೊಳ್ಳಲು ಯೋಚಿಸಿ, ರಾಜ, ಬಂಧುಗಳ ಮಕ್ಕಳೆಲ್ಲರನ್ನು ಕರೆಯಿಸಿ ಒಂದು ಕೋಣೆಯಲ್ಲಿ ತಿಂಡಿ, ತಿನಿಸು, ಬಟ್ಟೆ ಬರೆ, ಆಟದ ಸಾಮಾನುಗಳು, ಕತ್ತಿ, ಆಯುಧಗಳು, ಶಿವಪ್ಪ ನಾಯಕನ ತೈಲ ವರ್ಣಚಿತ್ರ, ಒಂದು ವಚನ ಗ್ರಂಥ ಇವೆಲ್ಲವನ್ನು ಇಡಲಾಗಿತ್ತು. ಅಲ್ಲಿರುವ ಮಕ್ಕಳೆಲ್ಲರೂ ತಮಗೆ ಬೇಕಾದ ಆಕರ್ಷಕ ವಸ್ತುಗಳೆಲ್ಲವನ್ನು ಆಯ್ಕೆ ಮಾಡಿಕೊಂಡರು. ಆದರೆ ಇವರಲ್ಲಿ ಹತ್ತು ವರ್ಷದ ಬಾಲಕನೊಬ್ಬ ಶಿವಪ್ಪನಾಯ್ಕನ ತೈಲವರ್ಣಚಿತ್ರ, ಒಂದು ವಚನ ಗ್ರಂಥ ಹಾಗೂ ಕತ್ತಿಯನ್ನು ಆಯ್ಕೆ ಮಾಡಿಕೊಂಡನು. ಅಲ್ಲದೆ ರಾಣಿಯ ಎದುರು ಧೈರ್ಯವಾಗಿ ನಿಂತು ನಾನು ಶಿವಪ್ಪನಾಯ್ಕನ ಹಾಗೆ ಆಗಬೇಕು. ನಾನು ಬಹಳ ಓದಿ ದೊಡ್ಡ ಪುಸ್ತಕ ಬರೀಬೇಕು ಎಂಬ ಆಸೆ ಇದೆ. ರಾಜನಾದರೆ ಶತ್ರುಗಳ ನಾಶಕ್ಕೆ ಕತ್ತಿ ಅವಶ್ಯವಿದೆ. ಹಾಗಾಗಿ ಇವನ್ನು ಆರಿಸಿಕೊಂಡೆನೆಂದು ಧೈರ್ಯವಾಗಿ ಹೇಳಿದಂತೆ. ಹೀಗಾಗಿ ರಾಣಿ ಚೆನ್ನಮ್ಮಾಜಿಯು ಆ ಬಾಲಕನನ್ನು ತನ್ನ ದತ್ತು ಪುತ್ರನನ್ನಾಗಿ ಸ್ವೀಕರಿಸಿದಳು ಎಂಬ ಅಂಶ ತಿಳಿಯುತ್ತದೆ. ರಾಣಿ ಚೆನ್ನಮ್ಮಾಜಿಯು ದತ್ತು ಸ್ವೀಕರಿಸಿದ ಬಸಪ್ಪನಾಯಕನು ಶಿವಪ್ಪನಾಯ್ಕನಂತೆ ಸಮರ್ಥ ಅರಸನಾದನು. ಗ್ರಂಥವನ್ನು ಆಯ್ಕೆ ಮಾಡಿಕೊಂಡ ಆತ 'ಶಿವತತ್ವರತ್ನಾಕರ'ದಂಥ ಬೃಹತ್ ಗ್ರಂಥವನ್ನು ಬರೆದನೆಂಬ ಅಂಶ ಇತಿಹಾಸದಲ್ಲೇ ವಿಶೇಷವಾದುದಾಗಿದೆ ಎಂಬ ವದಂತಿಯನ್ನು ಬಳ್ಳಿಕೆರೆ ಹನುಮಂತಪ್ಪನವರು ದಾಖಲಿಸಿದ್ದಾರೆ. ಸೋದೆ ಅರಸನಿಗೆ ಸಂಬಂಧಿಸಿದ ವದಂತಿ ರಾಜನ ಕಣ್ಣಿಗೆ ಕಂಡ ಸುಂದರ ಹೊಲತಿಯೊರ್ವಳನ್ನು ಅರಸ ತನ್ನ ಸಂಗಾತಿಯನ್ನು ಮಾಡಿಕೊಂಡಾಗ, ಆಕೆಯ ಅಂತಸ್ತು, ಆರ್ಥಿಕ ಸ್ಥಿತಿಗತಿಗಳೆಲ್ಲವು ಸುಧಾರಣೆಗೊಂಡಿತು.

ಬಯಸದೇ ಬಂದ ಭಾಗ್ಯವೆಂಬಂತೆ ರಾಜನೊಬ್ಬ ಹೆಂಡತಿಯೋರ್ವಳನ್ನು ಬಯಸಿ, ಅವಳನ್ನು ಸಂಗಾತಿಯನ್ನಾಗಿಸಿಕೊಂಡಿದ್ದು, ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತೆಯೇ ಸರಿ. ಇದರಿಂದ

ಹೊಲತಿಯ ಅಂತಸ್ತು, ಆರ್ಥಿಕ ಸ್ಥಿತಿಗಳೆಲ್ಲ ಸುಧಾರಣೆಯಾಗಿ ಈಕೆ ಸಾಮಾನ್ಯರ ಅನುಕೂಲಕ್ಕೆ ಕೆರೆ, ಬಾವಿ, ಕಟ್ಟಡಗಳನ್ನು ಕಟ್ಟಿಸಿ, ಜನಸಾಮಾನ್ಯರ ದೃಷ್ಟಿಯಲ್ಲಿ ಶ್ರೇಷ್ಠವಾದಳು. ಈ ಹಿನ್ನೆಲೆಯಲ್ಲಿ ಶಿರಸಿಯ 'ಮುಸುಕಿನ ಭಾವಿ', 'ದೇವಿ ಕೆರೆಗಳು' ಇಂಥವೇ ಎಂದು ಅಲ್ಲಿಯ ಜನ ಕಥೆ ಕಟ್ಟಿ ಹೇಳುತ್ತಾರೆ. ಇದು ಸಂಭವನೀಯ ಸತ್ಯಾಂಶವೆಂದು ಡಾ.ವಾರಿಯವರು ಅಭಿಪ್ರಾಯಪಡುತ್ತಾರೆ. ತಪ್ಪು ಯಾರದೇ ಇರಲಿ, ಅಪವಾದ ಹೊರುವವಳು ಹೆಣ್ಣೆ ಅಲ್ಲವೆ. ರಾಜ ಹೊಲತಿಯನ್ನು ಬಯಸಿದರೂ, ಜನ ಕೆಳಜಾತಿಯ ಹೊಲತಿಯಿಂದಲೇ ರಾಜ ಕೆಟ್ಟ ಎಂಬ ಕಥೆಗಳು ಹೊಸ ಜನ್ಮ ಪಡೆದು, ಹೊಸ ಹೊಸ ರೂಪಗಳಲ್ಲಿ ಕವಲೊಡೆದವು. ಅಂಥ ರಾಜ 'ಸೊಂದೆಕಿ–ರಾಣಿ–ಕಾ–ರಾಜಾ' ಎಂಬ ನುಡಿಗಟ್ಟನ್ನು ಕಟ್ಟಿ ರಾಜನ ಅಧಃಪತನಕ್ಕೆ ಹೊಲತಿಯೇ ಕಾರಣವೆಂದು ಹೇಳತೊಡಗಿದರು.

ಕಳಲೆಯಲ್ಲಿ ನಡೆದಿದೆಯೆನ್ನಬಹುದಾದ ವದಂತಿಯು ಕಳಲೆಯ ರಾಣಿಯರಾದ ದೊಡ್ಡಮ್ಮಣ್ಣಿ, ಚೆನ್ನಾಜಮ್ಮಣ್ಣಿ, ದೊಡ್ಡ ತಿಮ್ಮಮ್ಮಣ್ಣಿ, ದೇವಮ್ಮಣ್ಣಿಯರಿಗೆ ಸಂಬಂಧಿಸಿದುದಾಗಿದೆ. ಈ ನಾಲ್ವರು ತಿಮ್ಮರಾಜ ಒಡೆಯರ ಪತ್ನಿಯರು ಕಳಲೆಯ ಪಟ್ಟವನ್ನು ತಿಮ್ಮರಾಜ ಒಡೆಯರ ಹಿರಿಯ ಪತ್ನಿ ದೊಡ್ಡಮ್ಮಣ್ಣಿಯ ಮಗನಾದ ಲಕ್ಷ್ಮೀಕಾಂತ ಒಡೆಯರಿಗೆ ಕಟ್ಟಿದರು. ಆದರೆ ತಗಡೂರಿನ ಚೆನ್ನಾಜಮ್ಮಣ್ಣಿಯು ರಾಜಗದ್ದುಗೆ ತನ್ನ ಮಗನಿಗೆ ದೊರಕಲಿಲ್ಲವೆಂದು ಲಕ್ಷ್ಮೀಕಾಂತ ಒಡೆಯರನ್ನು ಕೊಲ್ಲಿಸಿದಳೆಂದೂ, ಅಲ್ಲದೆ ತಿಮ್ಮರಾಜ ಒಡೆಯರ ನಾಲ್ಕನೇ ಪತ್ನಿಯಾದ ದೇವಮ್ಮಣ್ಣಿಯವರ ಕುಮಾರನಾದ ಕರಿಕಲ್ಲು ಮಲ್ಲರಾಜ ಒಡೆಯರನ್ನು ಕೊಲ್ಲಿಸಲು ಪ್ರಯತ್ನಿಸಿದಳೆಂದು, ಅದು ಫಲಿಸಲಿಲ್ಲ. ಇದರಿಂದ ದೇವಮ್ಮಣ್ಣಿಯವರನ್ನು ನಿರ್ಬಂಧದಲ್ಲಿರಿಸಿದ್ದಳು.

ರಾಣಿ ಚೆನ್ನಾಜಮ್ಮಣ್ಣಿಯರಿಂದ ಕೊಲ್ಲಿಸಲ್ಪಟ್ಟ ರಾಜ ಲಕ್ಷ್ಮೀಕಾಂತ ಒಡೆಯರ ಪತ್ನಿಯಾದ ಲಿಂಗಾಜಮ್ಮಣ್ಣಿಯು ತನ್ನ ಪತಿಯ ಸಾವಿಗೆ ಮಮ್ಮಲ ಮರುಗಿದಳು. ತನ್ನ ಪತಿಯ ಸಾವಿನಿಂದ ತಾನು ಆತ್ಮಾರ್ಪಣೆಗೆ ಸಿದ್ಧಳಾದಳು. ತಾನೇ ಸ್ವತಃ ಗಂಧ, ಪುಷ್ಪಗಳಿಂದ ಅಲಂಕರಿಸಿಕೊಂಡು ಕೆಂಪು ಕಣಗಿಲೆಯ ದಂಡೆಯನ್ನು ಹಾರವಾಗಿ ಹಾಕಿಕೊಂಡು, ಕುಂಕುಮ, ಅರಿಸಿಣಗಳಿಂದ ಮೈಯನ್ನೆಲ್ಲಾ ಲೇಪಿಸಿಕೊಂಡು, ಪತಿಯ ಉರಿಯುತ್ತಿರುವ ದೇಹವನ್ನು ಮೂರು ಸಾರಿ ಪ್ರದಕ್ಷಿಣೆಯನ್ನು ಹಾಕಿ "ಕೂಡಲಪುರದ ಗದ್ದೇ ಅಕ್ಕಿ ರಕ್ತದ ಕೂಲ ಕಲಿಸಿದಂತೆ ಇರಲಿ, ತನ್ನ ಗಂಡನನ್ನು ಕೊಲ್ಲಿಸಿದ ಚೆನ್ನಾಜಮ್ಮನ ವಂಶ ಬೆಳೆಯದಿರಲೆಂದೂ ಮೈಸೂರು ಅರಸರ ಬೋಳ ಚಾಮರಾಜ ಒಡೆಯರ ಪುತ್ರಿ ದೇವಮ್ಮಣ್ಣಿಯವರ ವಂಶ ಬೆಳೆಯಲಿ' ಎಂದು ದೇವಮ್ಮಣ್ಣಿಯವರ ಕೈಯಲ್ಲಿ ವೀಳ್ಯವನ್ನು ಕೊಟ್ಟು ಅಗ್ನಿ ಪ್ರವೇಶ ಮಾಡಿದಳೆಂಬ"[೪] ಪ್ರತೀತಿ ಇದೆ. ಕಳಲೆಯ 'ಇಟ್ಟಿಗೆ ಮಾಳಮ್ಮನ' ಗುಡಿಯಲ್ಲಿ ಶ್ರೀಗಂಧದ ಮರದಲ್ಲಿ ಕೆತ್ತಿದ ಸ್ತ್ರೀಯ ಚಿತ್ರವು ಲಿಂಗಮ್ಮಣ್ಣಿಯವರದೆಂದು ಪ್ರತೀತಿಯಿದೆ.

ಮತ್ತೊಂದು ವದಂತಿಯ ಪ್ರಕಾರ ಶ್ರೀರಂಗಪಟ್ಟಣವನ್ನು ಚಿಕ್ಕದೇವರಾಜ ಒಡೆಯರು ಆಳುತ್ತಿದ್ದರು. ದಳವಾಯಿ ಕುಮಾರಯ್ಯನವರು ತಿರುಚನಾಪಳ್ಳಿಗೆ ಮುತ್ತಿಗೆ ಹಾಕಿರುವ ಸಂದರ್ಭವನ್ನು ನೋಡಿಕೊಂಡು, ಮರಾಠಿ ಸರದಾರರಾದ ಜೇಜಿಘಾಟ್, ದಾಮೋಜೀಘಾಟ್ ಎಂಬುವರು ತಮ್ಮ ಅರವತ್ತು ಸಾವಿರ ಕುದುರೆ ಫೌಜಿನೊಡನೆ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದರು. ಆ ಸಂದರ್ಭದಲ್ಲಿ ಅವರನ್ನು ಎದುರಿಸಲು ದೊಡ್ಡಯ್ಯನನ್ನು ದಳವಾಯಿಯಾಗಿ ನೇಮಿಸಿ, ಕಳುಹಿಸಲಾಯ್ತು. ದಳವಾಯಿ ದೊಡ್ಡಯ್ಯನು ಚಾಣಾಕ್ಷನಾಗಿದ್ದು, ಎದುರಾಳಿಗಳಿಗೆ ಚಳ್ಳೇಹಣ್ಣನ್ನು ತಿನ್ನಿಸಲು ಉಪಾಯವೊಂದನ್ನು ಮಾಡಿದನು. ರಾತ್ರಿಯಾದ ಕೂಡಲೇ ತಮ್ಮ ದಂಡಿನಲ್ಲಿರುವ ಮೂರು ಸಾವಿರ ಎತ್ತುಗಳ ಕೊಂಬುಗಳಿಗೆ ಉರಿಯುವ ಪಂಜನ್ನು ಕಟ್ಟಿ, ಮರಾಠರಿದ್ದ ಪಾಳೇಯದ ಕಡೆಗೆ ಓಡಿಸುವೆ. ಆಗ ಎದುರಾಳಿಗಳು ಭ್ರಾಂತರಾಗುತ್ತಾರೆ. ಆ ಸಂದರ್ಭದಲ್ಲಿ ನಾವು ಹಿಂದುಗಡೆಯಿಂದ ಬಂದು ಶತ್ರುಗಳ ಮೇಲೆ ಬೀಳಬೇಕು ಎಂದು ಮಾಡಿದ ಉಪಾಯವು ಫಲಿಸಿತು. ಶತ್ರುಗಳು ದಿಕ್ಕಾಪಾಲಾಗಿ ಓಡಿದರು. ಈ ವಿಜಯದ ವಿಷಯವು ದೆಹಲಿಯ ಬಾದಶಹನಾದ ಔರಂಗಜೇಬನಿಗೂ ತಿಳಿಯಿತು. ಚಿಕ್ಕವೀರರಾಜ ಒಡೆಯರನ್ನು, ದಳವಾಯಿ ದೊಡ್ಡಯ್ಯನವರನ್ನು ಪ್ರಶಂಸಿಸಿದನು. ಅಲ್ಲದೆ ಮರಾಠ ಸರದಾರರನ್ನು ಸೋಲಿಸಿದವರಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡುವುದಾಗಿ ಶಪಥ ಮಾಡಿದ್ದನು. ಹೀಗಾಗಿ ದಳವಾಯಿ ದೊಡ್ಡಯ್ಯರನ್ನು ದೆಹಲಿಗೆ ಕಳುಹಿಸಿಕೊಡಿರೆಂದು ಚಿಕ್ಕವೀರರಾಜ ಒಡೆಯರಿಗೆ ಕೇಳಿಕೊಂಡಾಗ, ದೊಡ್ಡಯ್ಯನವರನ್ನು ದೆಹಲಿಗೆ ಕಳುಹಿಸುವ ಮನಸ್ಸಿಲ್ಲದ ಒಡೆಯರು, ದೊಡ್ಡಯ್ಯ ಯುದ್ಧದಲ್ಲಿ ಮಡಿದನೆಂದು ಔರಂಗಜೇಬನು ಕಳುಹಿಸಿದ ನಿಯೋಗಿಗೆ ಹೇಳಿ ಕಳುಹಿಸಿದನು. ದೆಹಲಿ ಬಾದಶಹನು ಇದನ್ನು ಕೇಳಿ ದುಃಖಪಟ್ಟು ದೊಡ್ಡಯ್ಯನವರ ತೈಲಚಿತ್ರವನ್ನು, ಅವನು ಹಿಡಿಯುತ್ತಿದ್ದ ಕತ್ತಿಯನ್ನು ತರಿಸಿಕೊಂಡು, ಆ ಪಟಕ್ಕೂ, ಆ ಕತ್ತಿಗೂ ತನ್ನ ಮಗಳನ್ನು ಮದುವೆ ಮಾಡಿಕೊಟ್ಟ ನೆಂಬುದಾಗಿ ಪ್ರತೀತಿಯಿದೆ."[೪೫]

ಸುಗಟೂರ ರಣಬೈರೆಗೌಡನು ತನ್ನ ಏಳು ಮಂದಿ ಸಹೋದರರೊಂದಿಗೆ ಕಂಚಿಯ ಹತ್ತಿರವಿರುವ ಯಣಮಂಚಿ ಪುತ್ತೂರಿನಲ್ಲಿ ನೆಲೆಸಿದನು. ಅಲ್ಲಿನ ದುಷ್ಟ ಪಾಳೇಗಾರನು ರೂಪವತಿಯಾದ ದೊಡ್ಡಮ್ಮನೆಂಬ ರಣಬೈಕಿಗೌಡನ ರೂಪವತಿಯಾದ ಮಗಳನ್ನು ವಿವಾಹವಾಗಲು ಬಯಸಿದನು. ಅನ್ಯ ಜಾತಿಯವನಾದ ಪಾಳೇಗಾರನಿಗೆ ಮಗಳನ್ನು ಕೊಡಲೊಪ್ಪದೇ ಊರನ್ನೇ ಬಿಟ್ಟು ಉತ್ತರ ದಿಕ್ಕಿಗೆ ಪ್ರಯಾಣ ಮಾಡಿದರು. ಆಗ ತುಂಬಿ ಹರಿಯುತ್ತಿದ್ದ ಪಾಲಾರು ಹೊಳೆಯನ್ನು ದಾಟಲು ಸಾಧ್ಯವಾಗದೇ ನಿಂತಾಗ ದೊಡ್ಡಮ್ಮನು ಭಕ್ತಿಯಿಂದ ಪ್ರಾರ್ಥಿಸಲು ಹೊಳೆ ಇಬ್ಭಾಗವಾಯ್ತು. ಹೊಳೆಯನ್ನು ದಾಟಿದ ಇವರು ಆವಚಿ ಎಂಬಲ್ಲಿ ಬಂದು ನೆಲೆಸಿದರು. ಅಲ್ಲಿ ದೊರೆತ ಗುಪ್ತನಿಧಿಯಿಂದ ರಾಜ್ಯ ಕಟ್ಟಿದರೆಂಬ ವದಂತಿ ಇದೆ.

ನಾಡಗೌಡ ಮನೆತನಕ್ಕೆ ಗಂಡು ಸಂತಾನವಿಲ್ಲವೆಂಬ ನೆಪವೊಡ್ಡಿ ಗುರುಗುಂಟಿಯ ದೊರೆಗಳು ಗೆಜ್ಜಲಗಟ್ಟೆ ಮನೆತನವನ್ನು ತಮ್ಮ ಸ್ವಾಧೀನಪಡಿಸಿಕೊಳ್ಳಲು ಪ್ರಯತ್ನಿಸಿದಾಗ ರಾಣಿ ಲಕ್ಷ್ಮೀದೇವಿಯು ಪ್ರತಿತಂತ್ರವನ್ನು ಹೂಡಿ ಕತ್ತಲಾಗುತ್ತಿದ್ದಂತೆ ಅಲ್ಲಲ್ಲಿ ಸಾವಿರಾರು ಪಂಜುಗಳನ್ನು ಹೊತ್ತಿಸಿದಳೆಂಬ ವದಂತಿ ಇದೆ.

## ೨.೨. ದಾಖಲು ಸಾಹಿತ್ಯ

ದಾಖಲೆಯೆಂದರೆ ಕಾಗದ ಪತ್ರ, ರುಜುವಾತು, ಲೆಕ್ಕಕ್ಕೆ ಸೇರಿದುದು, ಆಧಾರ ಪೂರ್ವಕವಾದದ್ದು, ಪ್ರಮಾಣಬದ್ಧವಾದ ಕಾಗದ ಪತ್ರ, ಅಪ್ಪಣೆ ಎಂಬುದಾಗಿ ನಿಘಂಟುಗಳು ಅರ್ಥೈಸುತ್ತವೆ. ಡಾ.ಕೆ.ರವೀಂದ್ರನಾಥರು ನಿಘಂಟುಗಳು ನೀಡುವ ಸೀಮಿತ ಅರ್ಥವನ್ನು ಅಲ್ಲಗಳೆದು, ಸಾಂಸ್ಕೃತಿಕ ಇಲ್ಲವೇ ಚಾರಿತ್ರಿಕ ಹಿನ್ನೆಲೆಯಲ್ಲಿ ಮಹತ್ವದ ಸಂಗತಿಗಳನ್ನು ಒದಗಿಸುವ, ಕಾವ್ಯಗುಣ ಗೌಣವಾಗಿಸುವ, ಚರಿತ್ರೆಯ ದೃಷ್ಟಿಯಿಂದ, ವಿಚಾರ ಯೋಗ್ಯವಾದ ಗದ್ಯ ಪ್ರಧಾನ ಸಾಹಿತ್ಯವನ್ನು 'ದಾಖಲು ಸಾಹಿತ್ಯ' ಎಂದಿದ್ದಾರೆ. ಡಾ.ಎಂ.ಎಂ.ಕಲಬುರ್ಗಿಯವರು ದಾಖಲೆಗಳ ಮಹತ್ವವನ್ನು ಕುರಿತು 'ನಮ್ಮ ರಾಷ್ಟ್ರದ ನಿಜವಾದ ಇತಿಹಾಸವೆಂದರೆ ಕೇವಲ ಕವಿಗಳು ಬರೆದ ಕಾಳಗದ ಕಥೆಯಲ್ಲ. ಕರಣಿಕರು ಬರೆದಿಟ್ಟ ಕೃತಕ ದಾಖಲೆಗಳಲ್ಲ. ಈ ರಾಷ್ಟ್ರದ ಪ್ರಜೆಗಳು ಯಾವ ಆದರ್ಶಗಳಿಗಾಗಿ, ಯಾವ ಮೌಲ್ಯಗಳಿಗಾಗಿ ಬಾಳಿದರೆಂಬುದನ್ನು, ಅವುಗಳನ್ನು ಅನುಷ್ಠಾನ ಗೊಳಿಸುವಲ್ಲಿ ಹೇಗೆ ನಡೆದುಕೊಂಡರೆಂಬುದನ್ನು ಇಂಥ ದಾಖಲೆಗಳು ತಿಳಿಸುತ್ತವೆನ್ನುತ್ತಾರೆ. ಇದು ಸತ್ಯದ ಮಾತೇ ಸರಿ. ಭಾಷಾಸಾಮಗ್ರಿಗಳಲ್ಲಿ ದಾಖಲೆಗಳು ಲಿಖಿತ ಸಂಪ್ರದಾಯಕ್ಕೆ ಸೇರುವ ಆಕರಗಳು. ಏಕ ಪ್ರತಿರೂಪದಲ್ಲಿ ಸಿಗುವ ಇವುಗಳ ವಿಷಯ ಸಾಮಾನ್ಯವಾಗಿ ಚಾರಿತ್ರಿಕ ಸಂಗತಿಗಳ ನಿರೂಪಣೆಯಾಗಿರುತ್ತದೆ. ಈ ಕಾರಣವಾಗಿ ಕರ್ನಾಟಕ ಅರಸುಮನೆತನಗಳ ಚರಿತ್ರೆಗೆ ಪೂರಕ ಆಕರಗಳಾಗುತ್ತವೆ. ದಾಖಲೆಗಳಲ್ಲಿ ಶಾಸನಗಳು, ನಿರೂಪಗಳು, ಕೈಫಿಯತ್ತುಗಳು, ಬಖೈರುಗಳು, ನಾಮೆಗಳು ಮತ್ತು ಪತ್ರಗಳು ಸಮಾವೇಶಗೊಳ್ಳುತ್ತವೆ. ಶಾಸನಗಳನ್ನು ಹೊರತು ಪಡಿಸಿದರೆ, ಮಧ್ಯಕಾಲೀನೋತ್ತರ ಕರ್ನಾಟಕ ಸಂಸ್ಥಾನಿಕರನ್ನು ಕುರಿತು, ಅನೇಕ ಮಾಹಿತಿಯನ್ನು ಒದಗಿಸುತ್ತವೆ. ಹೀಗಾಗಿ ಇವುಗಳ ಸ್ಥಳೀಯ ಚಾರಿತ್ರಿಕ ಮಹತ್ವವನ್ನು ಎತ್ತಿ ಹೇಳಬಹುದು.

### ೨.೨.೧. ಶಾಸನಗಳು

ಶಾಸನಗಳು ಪ್ರಾಚೀನ ಆಳರಸರ ಆದೇಶಗಳು, ಹೀಗಾಗಿ ದಾನ, ವೀರ ಮತ್ತು ಸಾಮಾಜಿಕ ಬದುಕಿನ ಚಿತ್ರಣಗಳನ್ನು ಕಾಣುವುದರ ಜೊತೆಗೆ ಆಡಳಿತ ಪದ್ಧತಿಯ ಹಿನ್ನೆಲೆಯಲ್ಲಿ ತೆರಿಗೆ ಪದ್ಧತಿ, ಕಂದಾಯ ಇಲಾಖೆಯ ಕಾರ್ಯಭಾರಗಳು, ನೀರಾವರಿ ವ್ಯವಸ್ಥೆ ಮುಂತಾದ ಅಭಿವೃದ್ಧಿಪರ

ಸಂಗತಿಗಳನ್ನು ಬಿಚ್ಚಿ ತೋರಿಸುತ್ತವೆ. ಅಂದರೆ ಒಂದು ನಾಡಿನ ಜನಜೀವನದ ಪ್ರತಿಬಿಂಬಗಳಾಗಿ ಶಾಸನಗಳು ಅಭಿವ್ಯಕ್ತಿಗೊಂಡಿವೆ. ಈ ಅಭಿವ್ಯಕ್ತಿಯಲ್ಲಿ ಒಂದಿಷ್ಟು ಪ್ರಶಂಸೆಯಿರಬಹುದಾದರೂ, ಜರುಗಿದ ಸತ್ಯ ಘಟನೆ ಮಾತ್ರ ಇಲ್ಲಿ ದಾಖಲಾಗುತ್ತದೆಂಬುದಾಗಿ ಡಾ.ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ. ಹೀಗಾಗಿ ಶಾಸನಗಳು ಒಂದು ನಾಡಿನ ಇತಿಹಾಸವನ್ನು ನಿಖರವಾಗಿ ತಿಳಿಸಲು ಸಹಕಾರಿಯಾಗಿವೆ. ಶಾಸನಗಳು ಅಂದಂದಿನ ಸಮಾಜದ ಪರಿಸ್ಥಿತಿಯನ್ನು ದಾಖಲಿಸುವ ಪ್ರಮುಖ ಆಧಾರಗಳಾಗಿವೆ. ಇತರ ಐತಿಹಾಸಿಕ ಸಂಗತಿಗಳಂತೆ ಕರ್ನಾಟಕ ರಾಣಿಯರ ಚಾರಿತ್ರಿಕ ಸಂಗತಿಗಳನ್ನು ದಾಖಲೆಗಳು ನಿರೂಪಿಸುತ್ತವೆ. 

ಆಗ ತಾನೇ ಕರ್ನಾಟಕದಲ್ಲಿ ಕುಡಿಯೊಡೆಯುತ್ತಿರುವ ಶರಣ ಚಳವಳಿಯ ಲಿಂಗಾಯತ ತತ್ವಗಳನ್ನು, ಆಚರಣೆಗಳನ್ನು, ಸಿದ್ಧಾಂತಗಳನ್ನು ತಮ್ಮ ಬದುಕಿನಲ್ಲಿ ರೂಪಿಸಿಕೊಳ್ಳುತ್ತಲೇ ಸಮಾಜ ಪರವಾಗಿ ಅವುಗಳನ್ನು ಪರಿಚಲನೆಗೊಳಿಸುವ ಎಲ್ಲ ಸಾಧ್ಯತೆಗಳನ್ನು ಮೈಗೂಡಿಸಿಕೊಂಡು ಬದುಕಿದ ಕಲ್ಯಾಣ ಚಾಲುಕ್ಯ ರಾಣಿಯರ ಚಾರಿತ್ರಿಕ ಆಕರಗಳಾಗಿ ದಾಖಲೆಗಳು ನಿಲ್ಲುತ್ತವೆ.

ಕಲ್ಯಾಣ ಚಾಲುಕ್ಯ ಅರಸು ಐದನೆಯ ವಿಕ್ರಮಾದಿತ್ಯನ ಪತ್ನಿಯೂ, ತೈಲಪನ ತಾಯಿಯೂ ಆದ ಬೊಂತಾದೇವಿಯನ್ನು ೧೦೭೭ರ ಏವೂರ ಗ್ರಾಮದ ಉತ್ತರಕ್ಕಿರುವ ಸೋಮೇಶ್ವರ ದೇವಾಲಯದ ಪಕ್ಕದಲ್ಲಿರುವ ಶಾಸನವು "ಚೇದೀಶವಂಶ ತಿಳಕಾಶ ಲಕ್ಷ್ಮಣರಾಜಸ್ಯ ನನ್ದನಾಂನುತ ಶಿಲಾಂ, ಬೊನ್ಥಾದೇವಿಂ ವಿಧಿ ವತ್ಪರಿಣಿತ್ಯೇ ವಿಕ್ರಮಾದಿತ್ಯಃ"[೫೮] ಎಂದೂ 'ಅಜನಯದಥ ಬೋನ್ಥಾದೇವ್ಯತಃ, ತೈಲಭೂಪಂ ವಿಭವವಿಜಿತಶಕ್ರಂ ವಿಕ್ರಮಾದಿತ್ಯ ನಾಮ್ನಃ' ಎಂದು ದಾಖಲಿಸಿದೆ. ಅದರಂತೆ ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ವೀರಸೋಮೇಶ್ವರನ ಕಾಲದ ಹೆಮ್ಮಡಗಿ ಶಾಸನವು (ಕ್ರಿ.ಶ.೧೧೮೨)"ಆ ವಂಶಜಾತನಖಿಳ ಕಳಾವಿದನೆನಿಸಿರ್ದ್ದ ವಿಕ್ರಮಾಂಕಂಗಂ ಸಂಭಾವಿತೆ ವಿನೂತೆ ಬೋ... ಮಾಗೆ ತನೂಭಯವಂ ತೈಲನ್ರಿಪಂ।"[೫೯] ಇತ್ಯಾದಿ ವಿವರಗಳಲ್ಲಿವೆ.

ಸು.೧೧-೧೨ನೇ ಶತಮಾನದ ಇಂಡಿ ತಾಲ್ಲೂಕಿನ ಖೇಡಗಿ ಶಾಸನವು ಆರನೇ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿಯನ್ನು "ಪಿರಿಯರಸಿ ಎಂದೂ, ಕಂಕೋಜ ಮತ್ತು ಮಸಣಿಕವ್ವೆ ಈಕೆಯ ತಂದೆ ತಾಯಿಗಳೆಂದು"[೬೦] ದಾಖಲಿಸಿದೆ. ಕ್ರಿಶ.೧೧೯೭ರ ಡೋಣಿ ಶಾಸನವು(ಮುಂಡರಗಿ ತಾ.) ಲಕ್ಷ್ಮೀದೇವಿಯನ್ನು

"ಘನಜಘನದಿಂದುಬಿಂಬಾ
ನನದ ಸರೋಜಾತನಯನದಲೆ ನಿಬಿಡ ಘಟ
ಸ್ತನ ಪರಮುಷ್ಪ ನಿನದದ
ವನಿತಾ ಜನ ತಿಳಕಮಲ್ತೆ ಲಕ್ಷ್ಮಿದೇವಿ"[೬೧]

ಎಂದು ಬಣ್ಣಿಸಿದೆ. ಅಲ್ಲದೆ ಸೂಡಿ ಶಾಸನವು ಲಕ್ಷ್ಮೀದೇವಿಯ ಬಹುಮುಖ ವ್ಯಕ್ತಿತ್ವವನ್ನು ವಿವರಿಸುತ್ತದೆ.

ಕಲ್ಯಾಣ ಚಾಲುಕ್ಯ ಜಯಸಿಂಹ(ಕ್ರಿ.ಶ.೧೦೧೮-೧೦೪೨)ನ ಪಟ್ಟಮಹಿಷಿ ಸುಗ್ಗಲದೇವಿಯನ್ನು ವಿಜಾಪುರ ಜಿಲ್ಲೆಯ ದೇವೂರಿನ ಕ್ರಿ.ಶ.೧೦೨೯ರ ಶಾಸನವು

"xxxxಭುವನಾಸ್ರ(ಯ) ಶ್ರೀ ಪೃಥ್ವಿವಲ್ಲಭ ಮಹಾರಾಜ
xxxಪರಮೇಶ್ವರ ಪರಮ ಭಟ್ಟಾರಕಂ ಸತ್ಯಾಶ್ರಯ
xxxಕುಳತಿಳಕಂ ಚಾಳುಕ್ಯಾಭರಣಂ ಶ್ರೀ ಮಜ್ಜಗದೇಕಮಲ್ಲದೇವರ
xx(ಯ) ಉತ್ತರೋತ್ರ(ರಂ)ಸಲುತ್ಥಮಿರೆ ಸ್ವಸ್ತ್ಯನವರತ ಪ
xxಕಲ್ಯಾಣಾಭ್ಯುದಯ ಸಹಶ್ರಫಳ ಭೋಗಬಾಗಿ
xದ್ವಿತೀಯ ಲಕ್ಷ್ಮಿವಿಶಿಷ್ಟಜಿನ ಕಾಮಧೇನು ಆಶ್ರಿತ
ಜನ ಕಲ್ಪಲತೆ ರೂಪ ವಿದ್ಯಾಧರಿ ಕಲಿಕಾಲ ಸರಸ್ವ(ತಿ)
ಶ್ರೀಮಜ್ಜಗದೇಕ ಮಲ್ಲದೇವರ ವಿಶಾಲ ವಕ್ಷಸ್ಥಳ ನಿವಾಸಿನಿ
(ಯುಗ) ಪ್ಪ ಶ್ರೀ ಮತ್ಸುಗ್ಗಲದೇವಿಯರು ಸಕನ್ರಿಪ
ಕಾಳಾತೀತ ಸಂವತ್ಸ
(ರ) ಸತಂಗ ೯೫೧ನೆಯ(ಶು)ಕ್ಲ ಸಂವತ್ಸರದ ತದ್ವರಿಷಾಭ್ಯ
(ತರ)ದ ಪುಷ್ಯ ಬ೧ ಬುಧವಾರ ಮುತ್ತೆರೊತ್ತರಾಯೂಸಂಕ್ರಾ"[೬೨]

ಎಂಬ ವಿವರಣೆಯನ್ನು ಒದಗಿಸುತ್ತದೆ. ಅಲ್ಲದೆ ಕೆಲವೆಡೆ ಸಾಂದರ್ಭಿಕವಾಗಿಯೂ ಸುಗ್ಗಲೆಯನ್ನು ಸ್ಮರಿಸಿದ ಉಲ್ಲೇಖಗಳು ದೊರೆಯುತ್ತವೆ.

ಚಿಕ್ಕಮಗಳೂರು ಜಿಲ್ಲೆಯ ಕೆರೆಸಂತೆ ಕ್ರಿ.ಶ.೧೧೮೨ರ ಶಾಸನವು ಹೊಯ್ಸಳ ಬಲ್ಲಾಳನ ಧರ್ಮಪತ್ನಿ ಕೇತಲದೇವಿಯನ್ನು ಬಣ್ಣಿಸುವಾಗ ರಾಣಿ ಸುಗ್ಗಲೆಯನ್ನು ವರ್ಣಿಸಿದ ವಿವರವಿದೆ.

"ಪಡೆದಳ್ಸುಗ್ಗಲದೇವಿ ಮುನ್ನ ಜಯಸಿಂಹೊರ್ವೀಶನೊಳು ಸಾಮ್ಯವಂ
ಪಡೆದಳು ಸಾಂತಲದೇವಿ ಮತ್ತೆ ತೊದಳೇ ಶ್ರೀ ವಿಷ್ಣುಭೂಪಾಲನೊಳ್
ಪಡೆದಳ್ಕೇತಲದೇವಿ ವಲ್ಲಭನೊಳೀ ಬಲ್ಲಾಳ್ ಭೂಪಾಲದೊಳ್
ಪಡೆದರ್ಮ್ಮಾವರು ಮೂವರರಸಿಯರು ಸೌಭಾಗ್ಯ ಭಾಗ್ಯಂಗಳುಂ"[೬೩] ಎನ್ನುತ್ತದೆ.

ಕೆಳದಿ ಇತಿಹಾಸದ ಮೇಲೆ ಬೆಳಕು ಬೀರುವ ಅನೇಕ ಶಾಸನಗಳು ಕರ್ನಾಟಕದಾದ್ಯಂತ ದೊರೆತಿವೆ. ಕವಲೇದುರ್ಗ, ಕೆಳದಿ, ಸಾಗರ, ಸೊರಬ, ಶಿಕಾರಿಪುರ, ಶಿವಮೊಗ್ಗ, ಚಿಕ್ಕಮಗಳೂರು,

ಗದಗ, ಡಂಬಳ ಮತ್ತಿತರ ಕಡೆಗಳಲ್ಲಿ ಶಿಲಾ ಹಾಗೂ ತಾಮ್ರಶಾಸನಗಳು ದೊರೆತಿದ್ದು, ಅಂದಿನ ರಾಜಕೀಯ, ಆರ್ಥಿಕ, ಸಾಮಾಜಿಕ ಸ್ಥಿತಿಗಳ ಬಗ್ಗೆ ನಿಖರವಾದ ವಿವರಣೆಯನ್ನು ಒದಗಿಸುತ್ತವೆ. ಎಫಿಗ್ರಫಿಯಾ ಕರ್ನಾಟಕಾ, ಎಪಿಗ್ರಫಿಯಾ ಇಂಡಿಕ, ಮೈಸೂರು ಅರ್ಕಿಯಾಲಜಿಕಲ್ ರಿಪೋರ್ಟ್ ಆನ್ ಸೌತ್ ಇಂಡಿಯಾ, ಕೆಳದಿ ಅರಸರ ಶಾಸನ ಸಂಪುಟ ಇತ್ಯಾದಿ ಕೆಳದಿ ಅರಸರ ರಾಜಕೀಯ, ಸಾಹಿತ್ಯಕ, ಧಾರ್ಮಿಕ ವಿಷಯಗಳ ಮೇಲೆ ಹೆಚ್ಚಿನ ಬೆಳಕು ಬೀರುತ್ತವೆ. ಕೆಳದಿ ಸಂಸ್ಥಾನದ ಮೇಲೆ ಬೆಳಕು ಬೀರುವ ೬೦೦ಕ್ಕೂ ಹೆಚ್ಚು ಶಿಲಾ ಹಾಗೂ ತಾಮ್ರ ಶಾಸನಗಳು ದೊರೆತಿದ್ದು, ಅವುಗಳಲ್ಲಿ ಕೆಳದಿ ರಾಣಿ ಚೆನ್ನಮ್ಮಾಜಿಗೆ ಸಂಬಂಧಿಸಿದ ೪೧ ಶಾಸನಗಳು, ರಾಣಿ ವೀರಮ್ಮಾಗೆ ಸಂಬಂಧಿಸಿದ ೧ ಶಾಸನ ದೊರೆತಿದೆ. ಅಲ್ಲದೆ ಸಾಮಾನ್ಯ ಮಹಿಳೆಯರು ದಾನ-ದತ್ತಿ ನೀಡಿದ ಉಲ್ಲೇಖಗಳು ಅನೇಕ ಶಾಸನಗಳಲ್ಲಿ ದೊರೆಯುತ್ತವೆ.

ಕೆಳದಿ ರಾಣಿ ಚೆನ್ನಮ್ಮಾಜಿಯು "ವಿರೂಪಾಕ್ಷ ದೇವರಿಗೆ ಭೂಮಿ ಕ್ರಯದಾನ ಶಾಸನವನ್ನು ಬರೆಸಿಕೊಟ್ಟಳೆಂಬ ವಿವರವನ್ನು ಕ್ರಿ.ಶ.೧೬೭೫ರ ಕವಲೇದುರ್ಗದ ಮಹಾಮಹತ್ತಿನ ಮಠದಲ್ಲಿ ದೊರೆತ ಆರನೆಯ ತಾಮ್ರಶಾಸನವು ಹೀಗೆ ಉಲ್ಲೇಖಿಸುತ್ತದೆ.

**ಮುಂಭಾಗ**

ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರ
ವೆ ತ್ರೈಲೋಕ್ಯನಗರಾರಂಭಮೂಲಸ್ತಂಭಾಯ
ಶಂಭವೆ೧ ಸ್ವಸ್ತಿ ಶ್ರೀಜಯಾಭ್ಯುದಯಶಾಲಿ
ವಾಹನಶಕವರುಷ ೧೬೧೮ನೆಯ ಯುವ
ಸಂವತ್ಸರದ ಶ್ರಾವಣ ಶುದ ೧೫ಲ್ಲೂ ಶ್ರೀಮದ್ದೆ
ಡವಮುರಾರಿ ಕೋಟಿಕೊಳಾಹಳ ವಿಶುಧವೈದಿಕಾ
ದ್ವೈತಸಿಧಾಂತಪ್ರತಿಷ್ಟಾಪಕ ಶಿವಗುರುಭಕ್ತಿಪ
ರಾಯಣರಾದ ಕೆಳದಿ ಸದಾಶಿವರಾಯನಾಯ
ಕರ ವಂಶೋದ್ಭವರಾದ ಸಂಕಂಣನಾಯಕರ ಪ್ರ
ಪೌತ್ರರು ಸಿದಪ್ಪನಾಯಕರ ಪೌತ್ರರು ಶಿವಪ್ಪನಾ
ಯಕರ ಪುತ್ರರು ಸೋಮಶೇಖರನಾಯಕರ ಧ
ರ್ಮಪತ್ನಿಯರಾದ ಚೆಂನಂಮ್ಮಾಜಿಯವರೂ
ಆರಗದ ಕಂಬಾಳ ಸಿದರಾಮದೇವರ ಶಿಶ್ಯರು ।
ವಿರೂಪಾಕ್ಷದೇವರಿಗೆ ಬರಸಿಕೊಟ್ಟ ಭೂಮಿಕ್ರ

ಯಥಾನಧರ್ಮಶಾಸನದ ಕ್ರಮವೆಂತ್ತೆಂದರೆ ನೀ

ಮ ಕೈಯ ಕ್ರಯ ಗ ೧೮೫ ಶಾಸನ ಬರಸಿಕೊಡುವ ।

ಬಗೆ ಕಾಣಿಕೆ ಗ ೧೫ ಉಭಯ ಗ ೨೦೦ ಯಿಂನೂ

**ಹಿಂಭಾಗ**

ರುವರಹನೂ ಅರಮನೆಗೆ ತೆಗೆದುಕೊಂಡು ಬಿಟ್ಟ

ಸ್ವಾಸ್ತೆ ಮಧುವಂಕನಾಡಸೀಮೆ ಪಟ್ಟಣ ಸುತ್ತಣ ಪಟ್ಟ

ಡಿವಳಗಣ ಬಾಳಗೋಡಗ್ರಾಮದಿಂದ ದುರ್ಗದ ಜಾಕ

ಪನ ಭದ್ರಂಣನ ಸ್ವಾಸ್ತೆಯಿಂದ ಸುಂಕದ ಕೋನಪನಿಂದ

ಕ್ರಯವಾಗಿ ಬಂದ ಬಗೆಯಲ್ಲು ಬಿಜ ಖ ೩೦ಕೆ ಭತ್ತ

ಖ ೧೧೫ಕ್ಕೆ ಗ ೧೪೩॥೦ ಬಿರಾಡದಿಂದ ಗ ೨॥೦ ಉಭ

ಯಂ ಗ ೧೬॥೩॥೦ ವಿಂಗಡದಿಂದ ಸಾಲೂರಿಂದ ವಿಜ

ಖ ೩ ಕೆ ಭತ್ತ ೧೩ ಕೆ ಗ ೧॥೧।೦ ಉಭಯಂ ರೇಖೆ ಪ್ರಮಾ

ಣು ಸಿಸ್ತು ಗ ೧೮॥೦ ಹದಿನೆಂಟ್ಲುವರೆ ವರಹನ ಸ್ವಾಸ್ತೆ

ನೂ ಶಿವಾರ್ಪಿತವಾಗಿ ಬಿಟ್ಟೆವಾಗಿ ಯೀ ಭೂಮಿಗೆ ನೆಟ್ಟಲಿ

ಂಗಮುದ್ರೆ ಕಲ್ಲಿನೊಳಗುಳ ನಿಧಿನಿಕ್ಷೇಪಜಲಪಾಷಾಣ ಅಕ್ಷೀ

ಣಿಆಗಾಮಿಸಿಧಸಾಧ್ಯಂಗಳೆಂಬ ಅಷ್ಟಾಭೋಗತ್ತೇಜಸ್ವಾ

ಂಮ್ಯವನೂ ಪೂರ್ವಮರಿಯಾದೆಯಲ್ಲಿ ಆಗುಮಾಡಿಕೊಂ

ಡು ಶಿಶ್ಯಪಾರಂಪರ್ಯ್ಯವಾಗಿ ಆಚಂದ್ರಾರ್ಕಸ್ಥಾಯಿಗಳಾಗಿ ಸು

ಖದಿಂ ಅನುಭವಿಸಿದಾಹದೆಂದು ಬರಸಿಕೊಟ್ಟ ಭೂದಾನಧರ್ಮ

ಶಾಸನ ಆದಿತ್ಯಚಂದ್ರಾವನಿಲೊನಲಶ್ಚ ದ್ಯೌರ್ಭೂಮಿರಾ

ಮೊ ಹ್ರುದಯಂ ಯಮಶ್ಚ ಅಹಶ್ಚ ರಾತ್ರಿಶ್ಚ ಉಭೇಚ ಸ

ಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ಉತ್ತರ೧ ದಾನಪಾಲನಯೋ

ರ್ಮಧ್ಯೇ ಧಾನಾಛ್ರೇಯೋನುಪಾಲನಂ ದಾನಾತ್ಸ್ವರ್ಗಮವಾಪ್ನೋ

ತ್ರಿ ಪಾಲನಾದಚ್ಯುತಂ ಪದಂ೨ ಶ್ರೀಸದಾಶಿವ"[೬೪]

ಎಂಬ ಉಲ್ಲೇಖವಿದ್ದು ರಾಣಿ ಚೆನ್ನಮ್ಮಾಜಿಯವರು ಆರಗದ ಕಂಬಾಳಸಿದ್ಧರಾಮೇದೇವರ ಶಿಷ್ಯರಾದ ವಿರೂಪಾಕ್ಷ ದೇವರಿಗೆ ಬರೆಸಿಕೊಟ್ಟ ಭೂಮಿ ಕ್ರಯದಾನದ ವಿವರವನ್ನು ಇಲ್ಲಿ ಒದಗಿಸಲಾಗಿದೆ. ಅಲ್ಲದೇ ಅದೇ ಮಠದಲ್ಲಿಯ ಕ್ರಿ.ಶ.೧೬೯೦ರ ೨೭ನೇ ತಾಮ್ರಶಾಸನವು ರಾಣಿ

ಚೆನ್ನಮ್ಮಾಜಿಯು ಕೆಂಪಿನ ಮನೋಹರದೇವರಿಗೆ ಬರೆಸಿಕೊಟ್ಟ ಕ್ರಯದಾನದ ವಿವರವನ್ನು ನೀಡುತ್ತದೆ. "ಸೋಮಶೇಖರ ನಾಯಕರ ಧರ್ಮಪತ್ನಿಯರಾದ ಚೆಂನಮ್ಮಾಜಿಯವರೂ ಮನೋಹರದ ಜೆಟಾಶಂಕರ ದೇವರ ಶಿಷ್ಯರು ಮನೋಹರದ ಮಹತ್ತು ಮಲ್ಲಿಕಾರ್ಜುನ ದೇವರ ಶಿಷ್ಯರು, ಕೆಂಪಿನ ಮನೋಹರದೇವರಿಗೆ ಬರೆಸಿಕೊಟ್ಟ ಕ್ರಯದಾನ ಧರ್ಮಶಾಸನದ ಕ್ರಮವೆಂತ್ತೆಂದರೆ ಹೊಂಬುಚ ಸೀಮೆಯಲ್ಲಿ ಸುಂಕದ ಸಿದಬಸವೈಗೆ ಪ್ರಾಕು ಪ್ರಮಾದಿ ಸಂವತ್ಸರದಲ್ಲಿ ಕ್ರಯ ಗ ೩೦೦ ಮುಂನೂರು ವರಹನ ತೆಗೆದುಕೊಂಡ ನಾಲ್ವತ್ತು ವರಹನೂ ಮೂರು ಹಣ ಹಾಗದ ಸ್ವಾಸ್ತೆಯ ಉತ್ತರವ ಕೋಟೆದಲಿ ಆತನ ಮಗ ನಂಜಣನೂ ತಂನ ಅನುಪತ್ಯ ಕುರಿತು ಕೆಂಚವನ ಕಯ್ಯ ಮುಂನೂರು ವರಹನ ಸಲವ ತೆಗೆದುಕೊಂಡು ಅಡಪಹಾಕಿ ಶಾಸನವನೂ ಕೊಟೆದಲಿ ಹಣ ಬಡಿಸಹಾ ಹೇರಳವಾದರಿಂದ ಬಿಡಿಸಿಕೊಂಬಲ್ಲಿಗೆ ಅವಕಾಶವಿಲ್ಲದೆ ಸ್ವಾಸ್ತನೆ ಮತ್ತೆ ಯಾರಿಗಾದರೂ ಕ್ರಯಕೆ ಹೊಂದಿಸಿಕೊಟ್ಟು ಹಣ ಬಡಿಯ ತೆಗೆದುಕೊ ಯೆಂದ ಆಕೆ ಕೊಡೆ ಹೇಳಲಾಗಿ ಆಕೆಯೂ ನಿಂಮ ಕೈಯ ತಂನ ಹಣ ಬಡಿ ಬಗೆ ಸಹ ನಿರ್ನಮವ ಮಾಡಿ ಗ ೪೦೦ ನಾನೂರು ವರಹನ ತೆಗೆದುಕೊಂಡು ಆ ಸ್ವಾಸ್ತಿಯನೂ ನಿಮಗೆ ಕ್ರಯಕ್ಕೆ ಕೊಟ್ಟ"[೬೫] ಎಂಬ ವಿವರಗಳಿವೆ. ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ 'ಹರಿಗೆ'ಯ ನಿರ್ವಾಣಿಕರಿಯನ ವರ್ಗ ಜಮೀನಿನಲ್ಲಿ ನೆಟ್ಟ ಕಲ್ಲಿನಲ್ಲಿ ಕಾಲ ಶಾ.ಶ.೧೫೯೪ ಕ್ರಿ.ಶ.೧೬೭೪ರ ಶಾಸನವು ಕೆಳದಿಯ ಪುಣ್ಯ ಸ್ತ್ರೀಯಾದ ಚೆನ್ನಮ್ಮಾಜಿಯವರು ಕೊಟ್ಟಿಗ ಎಂಬುವವನಿಗೆ ಉಂಬಳಿ ಬಿಟ್ಟ ವಿವರವಿದೆ. "ಸೋಮಶೇಖರ ನಾಯಕರ ಪುಣ್ಯ ಸ್ತ್ರೀಯರಾದ ಚಂನಮಾಜಿಯರು। ಹರಿಗೆಯ ತಳವಾರ ನಾಗನ ಮಗಕೊಟ್ಟಿಗ ಕೊಟ್ಟ ಭೂಸ್ವಾಸ್ಥೆ ಬೀಜವರಿ ೮(೧) ಕೆ ಹಕ್ಕಲು ಸಹ ರೇಖೆ ಗ ೩ ಮುರು ವರಹಾನ ಹಳದ ಗದ್ದೆಯನೂ ಉಂಬಳಿಯಾಗಿ ಬಿಟ್ಟೆವಾಗಿ। ನಿಂನ ಸಂತಾನ ಪರಿಪರಿಯಾಗಿ ಉಂಡುಬಹುದು"[೬೬] ಎಂಬ ಉಲ್ಲೇಖವಿದೆ. ಅಲ್ಲದೆ ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು 'ತೂದುರಸ' ಮಂಜಪ್ಪನವರಲ್ಲಿದ್ದ ೪ನೇ ತಾಮ್ರಶಾಸನದ ಕಾಲ ಶಾ.ಶ.೧೫೯೭ ಕ್ರಿ.ಶ.೧೬೭೫. ರಾಣಿ ಚೆನ್ನಮ್ಮಾಜಿಯು ಶಿವರಾಜಪುರದ ಮಹತ್ತಿನ ಮಠಕ್ಕೆ ಬಿಟ್ಟ ಧರ್ಮಶಾಸನದ ವಿವರವನ್ನು ಒದಗಿಸುತ್ತದೆ. "ದ್ಯಾವಾಪೃಥ್ವೀ ಮಹಾಮಹತ್ತಿನವಳಗಾದ ಮಾಳೂರ ಸೀಮೆ ತೂದೂರ ತುಂಗಭದ್ರಾ ತೀರದಲು ಶಿವಪ್ಪನಾಯಕ ಅಯ್ಯನವರ ಹೆಸರಲು ಕಟಿಸ್ತ ಶಿವರಾಜಪುರ ಮಹತ್ತಿನ ಮಟಧರ್ಮಕೆ ಚೆಂನಮಾಜಿಯವರೂ ಬರೆಸಿಕೊಟ ಯತಿನ ಮಾನ್ಯದ ಶಾಸನದ ಕ್ರಯವೆಂತೆಂದರೆ ಮಟಧರ್ಮಕೆ ೧೫ ಹದಿನೈದು ಯೆತ್ತಿನ ಮಾನ್ಯವ ಬಿಟ್ಟಿದೇವೆ"[೬೭] ಎಂಬ ವಿವರಗಳಿವೆ.

ಕವಲೇದುರ್ಗ ಶಕ ೧೬೩೦(೧೭೦೮ ಕ್ರಿ.ಶ.) ಮಹಾಮಹತ್ತಿನ ಮಠದ ಏಳನೆಯ ತಾಮ್ರಶಾಸನ

"ದ್ಯಾವಾ ಪೃಥವಿ ಮಹಾಮಹತ್ತಿಗೊಳಗಾದ ತ್ರೀರ್ಥರಾಜಪುರದಲು ವೀರಂ
ಮಾಜಿಯವರು ಕಟ್ಟಿಸಿದ ಮಹತ್ತಿನ ಮಠದ ಧರ್ಮಕ್ಕೆ ಯಡವಮು
ರಾರಿ ಕೋಟೆ ಕೋಳಹಲ ವಿಶುಧವೈದಿಕಾದ್ವೈತ ಸಿಧಾಂತ ಪ್ರತಿಷ್ಠಾಪ
ಕ ಶಿವಗುರು ಭಕ್ತಿ ಪಾರಾಯಣರಾದ ಕೆಳದಿ ಸದಾಶಿವರಾಯ
ನಾಯಕರ ವಂಶೋದ್ಭವರಾದ ಸಿದ್ಧಪ್ಪನಾಯಕರ ಪ್ರಪೌತ್ರರು
ಶಿವಪ್ಪನಾಯಕರ ಪೌತ್ರರು ಸೋಮಶೇಖರ ನಾಯಕರ ಧರ್ಮಪ
ತ್ನಿಯರಾದ ಚೆಂನಂಮ್ಮಾಜಿಯವರ ಪುತ್ರರು ಬಸಪ್ಪನಾಯಕರು
ಬರಸಿಕೊಟ್ಟ ಯೆತ್ತಿನಮಾಂನ್ಯದ ಶಾಸನದ ಕ್ರಮವೆಂತ್ತಿಂದರೆ"[೧೮] ಎಂಬ ವಿವರವಿದೆ.

ದಕ್ಷಿಣ ಕನ್ನಡದ ಕುಂದಾಪುರ ತಾಲ್ಲೂಕಿನ ಕೊಲ್ಲೂರು ದೇವಾಲಯದ ನವರಂಗದ ಮೇಲಿರುವ ಮೆಟ್ಟಿನಲ್ಲಿ ಕಾಲ ಕ್ರಿ.ಶ.ಸು.೧೬೯೮. ಕನ್ನಡ ಭಾಷೆಯಲ್ಲಿದೆ. ಚೆನ್ನಮ್ಮಾಜಿ ದೇವಾಲಯಕ್ಕೆ ಸಲ್ಲಿಸಿದ ಭಕ್ತಿಯ ಸೇವೆ.

'ಕೆಳದಿ ಚಂನಂಮಾಜಿಯ ಸೇವೆ"[೧೯]

ಮಹಾಮಹತ್ತಿನ ಮಠದಲ್ಲಿಯ ೨೩ನೇ ತಾಮ್ರಶಾಸನ ಕವಲೇದುರ್ಗ ೧೬೬೪ರ ಶಾಸನ.

"ಹೊಂಬುಚಸೀಮೆ ಸುಣ್ಣದ ಬಸ್ತಿಯ ಸಿದ್ದಾಪುರದಲ್ಲಿ ಸಿದ್ದಮ್ಮಾಜಿಯವರು ಮಹಾಮಹತ್ತಿನ ಮಠ ಕಟ್ಟಿಸಿದರೆಂದು ಈ ಮಠಕ್ಕೆ ಸೋಮಶೇಖರ ನಾಯಕರು ಧರ್ಮಶಾಸನ ಕೊಟ್ಟರೆಂಬ"[೨೦] ವಿವರವಿದೆ. ಅಲ್ಲದೆ

"ಕೆಳದಿ ಸದಾಶಿವನಾಯಕರ ವಂಶೋದ್ಭವರಾದ
ಸಂಕಣನಾಯಕರ ಪೌತ್ರರು ಶಿವಪ್ಪನಾಯಕರ ಪುತ್ರರಾ
ದ ಸೋಮಶೇಖರ ನಾಯಕರೂ ಕೊಟ್ಟ ಧರ್ಮಶಾಸನದ
ಕ್ರಮವೆಂತ್ತೆಂದರೆ ಹೊಂಬುಚಸಿಮೆ ಸುಂಣದ ಬಸ್ತಿಯ
ಸಿದ್ಧಾಪುರದಲ್ಲೂ ಸಿದ್ದಂಮಾಜಿಯವರು ಕಟ್ಟಿಸ್ತ ಮಹ
ತ್ತಿನ ಮಠಕೆ। ಪ್ರಾಕು ಮೊಸರೂರಸೀಮೆ ಗಂದ್ರವಳಿಗ್ರಾ
ಮಲೂ ಉತ್ತಾರವಾಗಿದಲ್ಲಿ। ಆ ಮಠವಾ ಪ್ರಾಕು....."[೨೧]

ಇತ್ಯಾದಿ ವಿವರವಿದೆ.

ಕವಲೇದುರ್ಗ ಶಕ ೧೫೬೩(೧೬೪೦)ರ ಮಹಾಮಹತ್ತಿನ ಮಠದಲ್ಲಿಯ ಮೂವತ್ತೂರನೆಯ ತಾಮ್ರಶಾಸನ.

"ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ
ಶಕವರುಷ ೧೫೬೩ನೇಯ ವಿಕ್ರಮಸಂವತ್ಸರ
ದ ಪುಶ್ಯ ಬ ೧ಲೂ ಶ್ರೀ ಮತ್ಸಜನಶುಧ ಶಿವಾ
ಚಾರ ಸಂಪಂನ ದ್ಯೇವಾ ಪೃಥ್ವೀ ಮಹಾಮಲೆನವಳಗದ
ಸೋಮೇಶ್ವರದಲೂ ಸಿದ್ದಂಮಾಜಿಯವರ ಹೆಸರಲೂ
ಕಟ್ಟಿಸಿದ ಮಹತಿನ ಮಠದ ಧರ್ಮಕೆ ಯಡವಮುರಾರಿ
ಕೋಟೆ ಕೋಳಾಹಳ ವಿಶುಭವಯಿ ದಿಕಾದ್ವಯಿತ ಸಿಧಾಂತ
ಪ್ರತಿಷ್ಟಾಪಕ ಶಿವಗುರು ಭಕ್ತಿ ಪರಾಯಣರಾದ ಕೆಳದೀ
ವೆಂಕಟಪ್ಪನಾಯಕರ ಪೌತ್ರರಾದ ಭದ್ರಪ್ಪನಾಯಕರ
ಪುತ್ರರಾದ ವೀರಭದ್ರನಾಯಕರೂ ಶಿವಾರ್ಪಿತವಾಗಿ
ಬಿಟ್ಟ ತಾಂಬ್ರಶಾಸನದ ಕ್ರಮವೆಂತೆಂದರೆ
ತ್ತೊಂಭಲೆನ ಸೀಮೆವಳಗಣ ಸಿರಂಗೂರು ಗ್ರಾಮವನೂ
ಮಠದರ್ಮಕೆ ಬಿಟೆವಾಗಿ ಆ ಗ್ರಾಮಕೆ ಸಲುವ ರೇಖೆ...."[೨೨]

ಇತ್ಯಾದಿ ವಿವರಗಳಿವೆ.

ಕವಲೇದುರ್ಗ ಮಹಾಮಹತ್ತಿನ ಮಠದಲ್ಲಿಯ ೩೫ನೇ ತಾಮ್ರಶಾಸನವು "ಶ್ರೀ ಮತ್ಕೆನನೂರ ಸೀಮೆಯ ಉಳುವೆಗ್ರಾಮದಲೂ ಲಿಂಗಂಮಾಜಿಯವರ ಹೆಸರಲ್ಲೂ ಕಟ್ಟಿಸಿದ ಲಿಂಗೇಶ್ವರ ದೇವರ ಕಟ್ಟಳೆ ಕಂದಾಚಾರ ಸತ್ರ ಮುಂತಾದ ಧರ್ಮಕ್ಕೆ ಸೋಮಶೇಖರ ನಾಯಕರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ"[೨೩] ಎಂಬಿತ್ಯಾದಿ ವಿವರಗಳಿವೆ. ಅಲ್ಲದೆ "ಅಯಿನೂರ ನಾಲ್ಕು ವರಹಂನು ಆಯಿದು ಹಣ ಹಾಗದ ಭೂಮಿಯ ಗ್ರಾಮಗಳನು ನಂಮ ತಾಯಿಗಳಾದ ಲಿಂಗಂಮಾಜಿಯವರ ಹೆಸರಲೂ ದೇವಸ್ಥಾನವ ಕಟಿಸಿ ಪ್ರತಿಷ್ಠೆಯ ಮಾಡಿಸಿದಲ್ಲಿಂಗೇಶವರ ದೇವರ ಕಟಳೆ ಕಂದಾಚಾರ ಸತ್ರ ಮುಂತ್ತಾದ ಧರ್ಮಕೆ ಯಿ ಶು ೧೫ ಸೌಮ್ಯವಾಸರ ಸೋಮೋಪರಾಗದ ಪುಂಣ್ಯಕಾಲದಲ್ಲಿ ನಂಮ ತಾಯಿಗಳಿಗೆ ಶಾಶ್ವತ ಶಿವಲೋಕವಿವಾಹವಾಗ ಬೇಕೆಂದು ಶಿವಾರ್ಪಿತ್ತವಾಗಿ ಬಿಟ್ಟೆವಾಗಿ"[೨೪] ಎಂಬ ವಿವರಗಳಿವೆ.

ಅದೇ ಮಠದಲ್ಲಿಯ "೪೯ನೇ ತಾಮ್ರಶಾಸನವು ಚೆನ್ನಮ್ಮಾಜಿಯವರು ತಮ್ಮ ತಾಯಿ ಪಾರ್ವತಿ ಅಮ್ಮನವರು ಆಗುಂಬೆಗುಳಿ ಕಟ್ಟಿಸಿದ ಮಹತ್ತಿನ ಮಠಧರ್ಮಕ್ಕೆ ಐಹು ವೃತ್ತಿಸ ಮಾನ್ಯವನ್ನು ಬಿಟ್ಟುಕೊಟ್ಟಳೆಂಬ"[೨೫] ವಿವರವಿದೆ. ಅಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯು ಕೋಡ್ಲಾದಿ ತಾಲ್ಲೂಕಿನ ಕೋಟ್ಲಾದಿಯಲ್ಲಿ ದೊರೆತ ತಾಮ್ರಶಾಶನ ಕಾಲ ಶಾ.ಶ.೧೬೦೩ ಕ್ರಿ.ಶ.೧೬೮೧.

ರಾಣಿ ಚೆನ್ನಾಮ್ಮಾಜಿಯು "ಕಡಲಿ ಸೀಮೆಯ ಭಾಂಡದ ವೇಣುನದಿ ತೀರದಲ್ಲೂ ಬುಸನಿ ಕೃಷ್ಣೆಯನು ಪ್ರತಿಷ್ಠೆಯ ಮಾಡಿದ ತ್ರಿಯಂಬಕೇಶ್ವರ ದೇವರ ದೇವತ್ತಾವೆಚ್ಚ ಸತ್ರ ಮುಂತ್ತಾದ್ದಕೆ"[೭೬] ಕೊಟ್ಟ ದಾನದ ವಿವರವಿದೆ. ಕವಲೇದುರ್ಗದ ಮಹಿಳಾಮಹತ್ತಿನ ಮಠದಲ್ಲಿಯ ೭ನೆಯ ತಾಮ್ರಶಾಸನವು ಶಾ.ಶ.೧೬೩೦(ಕ್ರಿ.ಶ.೧೭೦೮)ರಲ್ಲಿ ರಾಣಿ ವೀರಂಮ್ಮಾಜಿಯವರು ತೀರ್ಥರಾಜಪುರ ದಲ್ಲಿ ಮಠವನ್ನು ಕಟ್ಟಿಸಿದ ಉಲ್ಲೇಖವಿದೆ. ಅದೇ ಮಠದ ೧೬ನೇ ತಾಮ್ರಶಾಸನವು ಭುವನಗಿರಿಯಲ್ಲಿ ದುರ್ಗದ ತಿಮ್ಮಣ್ಣನು ಕಟ್ಟಿಸಿದ ಮಠಕ್ಕೆ ರಾಣಿ ಚೆನ್ನಮ್ಮಾಜಿಯು ದಾನ ನೀಡಿದ ವಿವರಗಳಿವೆ.

ಕಾರವಾರ ಜಿಲ್ಲೆಯ ಸಿರಸಿ ತಾಲ್ಲೂಕಿನ ಸೋದೆಯಿಂದ ರಾಜ್ಯಭಾರವನ್ನು ಮಾಡಿದ ಅರಸ-ಅರಸಿಯರ ಬಗ್ಗೆ ಹಲವಾರು ಶಾಸನಗಳು ಉಪಲಬ್ಧವಿವೆ. ಇತಿಹಾಸದ ಬರವಣಿಗೆಗೆ ಅವಶ್ಯಕ ಲಿಖಿತ ಸಾಮಗ್ರಿಗಳಾದ ಶಾಸನಗಳು ರಾಣಿಯರ ಧಾರ್ಮಿಕ ಬದುಕಿನ ಮೇಲೆ ಹೊಸ ಬೆಳಕನ್ನು ಬೀರಿವೆ. ಉತ್ತರ ಕನ್ನಡ ಜಿಲ್ಲೆ, ಸಿರಸಿ ತಾಲ್ಲೂಕು, ಬನವಾಸಿಯ ಮಧುಕೇಶ್ವರ ದೇವಾಲಯದ ಪಶ್ಚಿಮಗೋಡೆಗೆ ನಿಲ್ಲಿಸಿರುವ ಶಾಸನವು ಅರಸಪ್ಪ ಒಡೆಯರ ಮಕ್ಕಳಾದ 'ಅರಸಾದೇವಿ ಅಂಮ'ನವರು ನೀಡಿದ ದಾನದ ವಿವರವನ್ನು ಕೊಡುತ್ತದೆ. "ಶ್ರೀ ಮಂನಾಳ್ವ ಮಹಾಪ್ರಭು ಸೋದೆಯಿಂಮಡಿ ಅರಸಪ್ಪೊಡೆಯರ ಮಕ್ಕಳೂ ಅರಸಾದೇವಿ ಅಂಮನವರೂ ಬನವಸೆಯ ನಾರಸಿಂಹ್ಯದೇವರಿಗೆ ಅಭಿಷೇಕ, ನಂದಾದೀಪ್ತಿ, ಅಮೃತಪಡಿ, ಸಹಸ್ರನಾಮ ಪರಿಮಳಕ್ಕೆ ಭೂದಾನವನ್ನು ಕೊಟ್ಟ ವಿವರವನ್ನು ದಾಖಲಿಸುತ್ತದೆ. ಅಲ್ಲದೆ ಬನವಸೆಯ ನಾರಸಿಂಹ್ಯ ದೇವರಿಗೆ ಕೊಟ್ಟ ಕ್ಷೇತ್ರ ಜೆಡೆಯದ ಸೀಮೆಯ ಒಳಗಣ ವರದ ನದಿ ತೀರದ ವದಿರಾಮರ ಗ್ರಾಮ ೧ಕ್ಕೆ ಪ್ರತಿನಾಮವಾದ ನಾರಸಿಂಹ್ಯಪುರವೆಂಬ ಸರ್ವಮಾಂನ್ಯದ ಅಗ್ರಹಾರವನ್ನು ಸಹಿರಂಣ್ಯೋದಕ ದಾನ ನೀಡಿದ ಬಗ್ಗೆ ಉಲ್ಲೇಖವಿದೆ. ಶಿವಮೊಗ್ಗ ಜಿಲ್ಲೆ ಕೋಡಿಕೊಪ್ಪದಲ್ಲಿ ದೊರಕಿದ ಶಾಸನದಲ್ಲೂ ಅರಸಪ್ಪನಾಯಕನ ತಾಯಿಯಾದ ಚಂಗಮ್ಮನವರ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. "ಸೋದೆ ಯಿಂಮಡಿ ಅರಸಪ್ಪನಾಯಕರು ನಂಮ್ಮ ತಾಯಿ ಚಂಗಮ್ಮನವರಿಗೆ ಪುಣ್ಯವಾಗಬೇಕೆಂದು ತೆಲುಗಡ್ಡೆ ಸೀಮೆಯೊಳಗಣ ಕೋಡಿಕೊಪ್ಪ ಪ್ರತಿನಾಮವಾತಂಗ ಸಮುದ್ರವನು ಪ್ರಾಕು ಅಗ್ರಹಾರವಾಗಿದ್ದ ಸಂಮೆಂಧ ಜೀರ್ಣೋದ್ಧಾರವಾಗಿ ಹದಿನೋಳು ಮಂದಿ ಬ್ರಾಹ್ಮಣರಿಗೆ ದಾನ ಧಾರಾತ್ವ ಪೂರ್ವಕವಾಗಿ ಧಾರೆನೆರೆದು ಕೊಟ್ಟ ಸರ್ವಮಾನ್ಯ ದಶಾ ಶ್ರೀ ಸೋಮಲಿಂಗ, ಶ್ರೀ ರಾಮಚಂದ್ರ"[೭೭] ಎಂಬ ಉಲ್ಲೇಖವಿದೆ.

ಬೆಳವಡಿಯ ವೀರ ರಾಣಿ ಮಲ್ಲಮ್ಮಾಜಿಯು ಶಿವಾಜಿಯೊಂದಿಗೆ ಶೂರತನದಿಂದ ಹೋರಾಡಿದ ನಂತರದಲ್ಲಿ ಹಾಕಿಸಿದ ದಾನಶಾಸನಗಳು ರಾಣಿಯ ಧಾರ್ಮಿಕ ಬದುಕಿನ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ. ಮಗನಾದ ನಾಗಭೂಷಣನ ಚೌಲಕರ್ಮದ ನಿಮಿತ್ತವಾಗಿ ರಾಣಿಯು

ಪೂವಲ್ಲಿ ಪಂಚವಣ್ಣಿಗಿಮಠದ ಸಿದ್ಧವೀರಮಹಾಸ್ವಾಮಿಗಳಿಗೆ ಪಟ್ಟಿಹಾರಮರವನ್ನು, ಸಹಸ್ರ ನಾಣ್ಯಗಳನ್ನು ದಾನವಾಗಿ ಕೊಟ್ಟಿರುವುದನ್ನು "ಗುರುಂ ಸಮಭ್ಯುರ್ಚ್ಯ ಯಥಾವಿಧಾನಂ ಗವಾಶತಂ ನಿಷ್ಕಸಹಸ್ರಕಂ ಚ ಸಮರ್ಪ್ಯ ಪಟ್ಟಾಳಪುರಂ ತಥೈವ ವಿರುಜನೇನ್ಮಿನ್ ಭುವಿ ಮಲ್ಲಮಾಂಚಿ॥"[೭೮] ಎಂಬ ಶಾಸನ ವಾಕ್ಯ ತಿಳಿಸುತ್ತದೆ.

ಕೊಡಗಿನಲ್ಲಿ ದೊರೆತಿರುವ ಹಲವಾರು ಶಾಸನಗಳು ಕೊಡಗಿನ ಹಾಲೇರಿ ಮನೆತನದ ರಾಣಿಯರ ಬಗ್ಗೆ ಉಪಯುಕ್ತವಾದ ದಾಖಲೆಗಳನ್ನು ಒದಗಿಸುತ್ತದೆ. ಕೊಡಗಿನ ಮಡಿಕೇರಿ ತಾ. ತಲಕಾವೇರಿ ೨೩ನೇ ಶಾಸನ ಅಗಸ್ತ್ಯೇಶ್ವರ ದೇವಸ್ಥಾನದ ಘಂಟೆಯ ಮೇಲಿರುವ ಶಾಸನವು "ಮೊಣಪ್ಪನವರ ಪತ್ನಿಯಾದ ಮುದ್ದಮ್ಮನವರ" ಹೆಸರನ್ನು "ಮನೆಯ ಪಂಡ ಮೊಂಣಪ್ಪನವರ ಪತ್ನಿ ಮುದ್ದಮ್ಮನವರ ಜ್ಞಾಪಕಾರ್ಥವಾಗಿ"[೭೯] ಎಂದು ದಾಖಲಿಸುತ್ತದೆ. ಕ್ರಿ.ಶ.೧೬೩೩ರಿಂದ ಕ್ರಿ.ಶ.೧೮೩೪ರವರೆಗೆ ೨೦೦ ವರ್ಷ ಕಾಲ ಆಳ್ವಿಕೆ ನಡೆಸಿದ ಹಾಲೇರಿ ಅರಸರಲ್ಲಿ ಪ್ರಮುಖನಾದ ಒಂದನೇ ವೀರರಾಜೇಂದ್ರ ಒಡೆಯನ ಕಾಲದಲ್ಲಿನ ಪ್ರಮುಖ ಘಟನೆಯನ್ನು ದಾಖಲಿಸುತ್ತದೆ. "ಲಕ್ಷ್ಮೀ ನಾರಾಯಣ ಮತ್ತು ಕುಮಾರಸ್ವಾಮಿ ವಿಗ್ರಹಗಳು ಮತ್ತು ಭಗಂಡೇಶ್ವರನ ಉತ್ಸವ ಮೂರ್ತಿಗಳನ್ನು ಟಿಪ್ಪುಸುಲ್ತಾನನ ಆಕ್ರಮಣ ಕಾಲದಲ್ಲಿ ಸ್ಥಳಾಂತರಿಸಲಾಗಿತ್ತೆಂದೂ, ನಂತರದಲ್ಲಿ ಕ್ರಿ.ಶ.೧೭೯೭ ಜನವರಿ ೨೯ರಂದು ಪುನಃ ಈ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಯ್ತೆಂದು ಇದು ವೀರರಾಜೇಂದ್ರನು ದೇವಮ್ಮಾಜಿಯನ್ನು ವಿವಾಹವಾದ ದಿನವೆಂದು ಶಾಸನಗಳು ದಾಖಲಿಸುತ್ತವೆ."[೮೦] "ವಿಲಾಯತಿಯಲ್ಲಿ ಮರಣ ಹೊಂದಿದ ಕೊಡಗಿನ ಕೊನೆಯ ಅರಸ ಚಿಕ್ಕವೀರರಾಜೇಂದ್ರನ ಪಾರ್ಥಿವ ಶರೀರವನ್ನು ಚಿಕ್ಕವೀರರಾಜೇಂದ್ರನ ಪಟ್ಟದ ರಾಣಿಯಾದ ನಂಜಮ್ಮಾಜಿಯು ಹಡಗಿನಲ್ಲಿ ಹಿಂದೂ ದೇಶಕ್ಕೆ ತರಿಸಿದಳು. ಕಾಶೀ ಜಂಗಮವಾಡಿ ಮಠದ ಆವರಣದಲ್ಲಿ ವೀರಶೈವ ಧರ್ಮಾನುಸಾರ ಸಮಾಧಿ ವಿಧಿಕ್ರಿಯೆ ಮಾಡಲಾಯ್ತು."[೮೧]

ಇಂಗ್ಲೆಂಡಿನಲ್ಲಿ ಇದ್ದು, ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದ ರಾಣಿ ವಿಕ್ಟೋರಿಯಾ ಗೌರಮ್ಮನವರು ೧೮೬೪ರಲ್ಲಿ ತನ್ನ ೨೩ನೇ ವಯಸ್ಸಿನಲ್ಲಿ ಮರಣ ಹೊಂದಿದಾಗ ಇಂಗ್ಲೆಂಡಿನ ಬ್ರಾಂಪ್ಟನ್ ಸ್ಮಶಾನದಲ್ಲಿ ಗೌರಮ್ಮನ ಸಮಾಧಿ ಮಾಡಲಾಯ್ತು. ಅವಳ ಸಮಾಧಿಯ ಮೇಲಿನ ಶಿಲಾಫಲಕದ ಮೇಲಿನ ಶಾಸನವು "Sacred to the memory of the princess N.Gowramma daughter of Ex-Raja of Coorg the beloved wife of Liftnent Cornel John Conybell. Born in India 4th July 1841. She was brought carefully in life to England baptised in to the christian faith under the immediate care and protection of queen victoria,

who stood sponsor to her and took a deep intrest in her life. she died 30th march 1864."[೮೧] ಎಂಬ ಉಲ್ಲೇಖವಿದೆ. ಮತಾಂತರ ಎಂಬುದು ಕ್ರಿ.ಶ.೧೯, ೧೭ನೆಯ ಶತಮಾನದಲ್ಲಿ ಸಾಮಾನ್ಯವಾದುದಾಗಿದ್ದು, ಕೇವಲ ಸಾಮಾನ್ಯ ಜನರಷ್ಟೇ ಅಲ್ಲದೆ ಒಬ್ಬ ಅರಸು ಮನೆತನದ ರಾಣಿಯು ಕ್ರಿಶ್ಚಿಯನ್ ಮತಕ್ಕೆ ಮತಾಂತರ ಹೊಂದಿರುವುದು ಪರಮಾವಧಿಯ ನಿದರ್ಶನವಾಗಿದೆ.

ವೀರಶೈವ ಮನೆತನವಾದ ಕಳಲೆಯ ಮನೆತನವೂ ಕೂಡ ಕರ್ನಾಟಕದ ಸಂಸ್ಕೃತಿ ರಕ್ಷಣೆಗೆ ಶ್ರಮ ವಹಿಸಿದ್ದನ್ನು ಮರೆಯುವಂತಿಲ್ಲ. ಕಳಲೆಯ ರಾಣಿ ದೇವಾಜಮ್ಮ, ಮಲ್ಲಾಜಮ್ಮ, ಮೀನಾಕ್ಷಮ್ಮ, ಚೆಲುವಾಜಮ್ಮಣ್ಣಿ, ಲಕ್ಷ್ಮಮ್ಮಣ್ಣಿ, ಲಿಂಗಾಜಮ್ಮಣ್ಣಿ ಇತ್ಯಾದಿ ರಾಣಿಯರು ಧಾರ್ಮಿಕ ಕ್ಷೇತ್ರಕ್ಕೆ ನೀಡಿದ ಸೇವೆಯನ್ನು ಶಾಸನಗಳು ಉಲ್ಲೇಖಿಸುತ್ತವೆ. "ಮೃತ್ಯುವಿನ ಅತಿಥಿಯಾದ ಮೈಸೂರಿನ ದೊರೆ ರಣಧೀರ ಕಂಠೀರವ ನರಸರಾಜರ ಸ್ಮರಣಾರ್ಥವಾಗಿ ಅರಸಿ ದೇವಾಜಮ್ಮ ಕಳಲೆಯಲ್ಲಿ ಒಂದು ಮಠವನ್ನು ಕಟ್ಟಿಸಿರುವಳು. ಅಲ್ಲದೆ ಅದನ್ನು ವೀರಶೈವ ಮಹಾಮಹತ್ತಿನ ಮಠಕ್ಕೆ ಒಪ್ಪಿಸಿದಳು. ಆ ಮಠಕ್ಕೆ ಶಿವಾರ್ಪಿತವಾಗಿ ಕುರುಹಟ್ಟ, ಸಂಬುಪುರ ಹಾಗೂ ಉಪ್ಪಿನಹಳ್ಳಿ ಗ್ರಾಮಗಳನ್ನು ನೀಡಿದಳು."[೮೨]

ಕಳಲೆ ಮಲ್ಲರಾಜ ಅರಸನ ಮಗಳಾದ ಮಲ್ಲಾಜಮ್ಮನಿಗೆ ಇದು ತನ್ನ ತಂದೆ ನೀಡಿದ ಬಳವಳಿಯಾಗಿತ್ತು. ಈಕೆ ಯಳಂದೂರು, ಮಲ್ಲಾರಪಾಳ್ಯ ಶಾಸನವು ಕ್ರಿ.ಶ.೧೬೪೭ರ ಕಾಲಕ್ಕೆ ಸಂಬಂಧಿಸಿದ್ದಾಗಿದ್ದು, ಈಕೆ ವೀರಶೈವ ಮಹಾಮಹತ್ತಿನ ಕಲ್ಲುಮಠ(ಶಿಲಾ)ವೊಂದನ್ನು ಕಟ್ಟಿಸಿದುದನ್ನು ಶಾಸನವು ಉಲ್ಲೇಖಿಸುತ್ತದೆ.

> "ಸುಭಮಸ್ತು ಸ್ವಸ್ತಿಶ್ರೀ ವಿಜಯಾಬ್ಯುದಯ ಸಾಲಿವಾಹನ ಸಕ
> ವರುಷ ೧೮೭೧ರನೇ ಸರ್ವಜಿತ್ ಸಂವತ್ಸರದ ಆಶಾಡ ಬ ೫ ಲ್ಲು
> ಶ್ರೀ ರಾಜಾಧಿರಾಜ ಶ್ರೀ ರಾಜಪರಮೇಶ್ವರ ಚತುಸ
> ಮುದ್ರಾಧೀಶ್ವರ ಶ್ರೀ ವೀರ ಶ್ರೀರಂಗರಾಯರು ಪೃಥ್ವಿರಾಜಂಗೈಯುತಿರಲಾ
> ಗಿ ಹದಿನಾಡ ಸೀಮೆಯ ಪ್ರಭು ತಿರುಮಲನಾಯಕರ ಕೊಮಾ
> ರ ಲಿಂಗರಾಜೆಯ್ಯನವರು ಮಾತಾ ಪಿತೃಗಳಿಗೆ ಪುಣ್ಯವಗಲಿಯೆಂದು
> ದಿಸಾಭಾಗದ ಮಹಾಮಹತ್ತಿಗೆ ಗಿಂಣಲು ಕೊಟಂತ್ತೆ ಮಳಲಗವಿ
> ಯ ಸಂಗನಬಸವರಜದೇವರು ಯಳವಂದುರು ಮಹಾಮಹತ್ತಿಗೆ
> ವಿಭೂತಿ ಮುಂತಾಗಿ ದಂಡಕೋಲು ಗುಂಡಗಪ್ಪಗಕ್ಕೆ ಸಗಣ ನಾಗಿ ನಿವರ ತ
> ಂಮ ಪಟ್ಟದ ಶ್ರೀಯರಾದ ಕಳಿಲೆಯ ಪ್ರಭುಮಲ್ಲಿರಾಜ ಅರಸಿನ
> ವರ ಕೊಮಾರತಿಯಾದ ಮಲ್ಲಾಜಿಯಮ್ಮನವರು ಕಟ್ಟಿಸಿದ ಮಹಾ

ಮಹತ್ತಿನ ಕಲ್ಲುಮಠಕ್ಕೆ ತಂದು ಕಾಳಾಂಜಿ ಸೀಮೆ ಯವಳಗಾದ
ಮದೂರ ಸ್ತಳದೊಳಗಾದ ಮಾವಿನಹಳಿ ಕರಿಸಿದ್ದನಮಿರ ಯಿಯರಡು
ಗ್ರಾಮಕೆ ಸಲುವ ಚತುಸೀಮೆಯಲ್ಲಿ ಅಕ್ಷಿಣಿ ಆಗಾಮಿ ನಿಧಿ ನಿಕ್ಷೇಪಿಸಿ
ಧ ಸಾಧ್ಯ ಜಲ ಪಾಶಾಣಯಂಭಿ ಅಷ್ಟಭೋಗ ತೇಜ ಶ್ವಾಮ್ಯವನು ನೀವು
ಮಹಾಮಹತ್ತಿನ ಹರಂಪರಾನ್ವಯವಾಗಿ ಆ ಚಂದ್ರಾರ್ಕಂ ಸ್ತಾ
ಯಿಯಾಗಿ ಅನುಭವಿಸಿಕೊಂಡು ಬರುವಿರೆಂದು ಸರಣಮಾಡಿದ
ಧರ್ಮಶಿಲಾಶಾಸನ॥ ಗ್ರಂಥಾ॥ದನ ಪಾಲನಯೋರ್ಮದ್ಯೆ ದಾನಾತ್ತ್ರೆಯೋನು
ಪಾ।ಲನಂ ದಾನಾತ್ತ್ರ್ವರ್ಗಮವಾಪ್ನೋತಿ ಪಾಲನಾದ ಚ್ಯುತಂಪದಂ
ಸ್ವದತ್ತಾ ದ್ವಿಗುಂ ಪುಣ್ಯಂ ಪರದತ್ತಾನುಮುನಾಂ ಪರದತ್ತಾಪಹಾರೇಣ
ಸ್ವದತ್ತಂ ನಿಷ್ಪಲಂ ಭವೇತ ಸ್ವದತ್ತಾಂ ಪರದತ್ತಾಮ ವಾಯೋ ಹರೇ
ತಿ ವಸುಂಧೂಂ ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಠಾಯಾಂ
ಜಾಯತೇ ಕ್ರಿಮಿಃ" ಎಂಬ ಉಲ್ಲೇಖವಿದೆ.

ಅರಸಿಯಾದ ಲಕ್ಷ್ಮಮ್ಮಣ್ಣಿಯು ಕಳಲೆಯ ಶ್ರೀ ಲಕ್ಷ್ಮೀಕಾಂತಸ್ವಾಮಿ ದೇವಾಲಯಕ್ಕೆ ಬೆಳ್ಳಿಯ ತಟ್ಟೆ ಹಾಗೂ ಕಂಚಿನ ಘಂಟೆಯನ್ನು ಕಾಣಿಕೆಯಾಗಿ ಅರ್ಪಿಸಿದ್ದಳು.[೮೫] ಬಸವರಾಜಯ್ಯನ ಪತ್ನಿ ಮೀನಾಕ್ಷಮ್ಮ ಎಡೆಯೂರು ಸಿದ್ಧಲಿಂಗೇಶ್ವರ ಗುಡಿಗೆ ಘಂಟೆಯೊಂದನ್ನು ಕೊಡುಗೆಯಾಗಿ ಕೊಟ್ಟಳು. ಅರಸಿ ಚೆಲುವಾಜಮ್ಮಣ್ಣಿಯು ಕಳಲೆಯ ಲಕ್ಷ್ಮೀಕಾಂತಸ್ವಾಮಿ ದೇವಾಲಯಕ್ಕೆ ಮಂಟಪವನ್ನು ನಿರ್ಮಿಸಿದಳು. "ಕಳಲೆಯ ಲಕ್ಷ್ಮೀಕಾಂತ ದೇವಾಲಯದ ಬೆಳ್ಳಿಯ ತಟ್ಟೆಯ ಮೇಲೆ ಮಹಾಮಾತೃ ಶ್ರೀ ಲಕ್ಷ್ಮಮ್ಮಣ್ಣಿಯರ ಸೇವಾರ್ಥ ಎಂದು ಕೆತ್ತಲ್ಪಟ್ಟಿದೆ." ಅಲ್ಲದೆ "ಅದೇ ದೇವಸ್ಥಾನದಲ್ಲಿರುವ ಗಂಟೆಯ ಮೇಲೆಯೂ ಲಕ್ಷ್ಮೀಕಾಂತ ಚಾಮರಾಜ ಒಡೆಯರ ಪತ್ನಿ ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರ ಸೇವೆ"[೮೬] ಎಂಬ ಉಲ್ಲೇಖವಿದೆ. ಹೀಗೆ ಕಳಲೆ ಮನೆತನದಲ್ಲಿಯ ಮತ್ತೊಬ್ಬ ರಾಣಿ ಅಮೃತಮ್ಮನವರು ಹಂಗಳದಲ್ಲಿ ಮಠ ಕಟ್ಟಿಸಿದಳೆಂದೂ ಹಾಗೂ ಹಂಗಳ ಸ್ಥಳದ ಹೊರಕೇರಿ ಬಾಚಳ್ಳಿ ಗ್ರಾಮವನ್ನು ಹಂಗಳದ ವೀರಶೈವ ಶಿಕ್ಷಕ ಮರಳ ಬಸವಲಿಂಗದೇವರಿಗೆ ದತ್ತಿಯಾಗಿ ಕೊಟ್ಟ ಬಗ್ಗೆ ಕ್ರಿ.ಶ.೧೬೫೬ನೇ ವರ್ಷದ ಗುಂಡ್ಲುಪೇಟೆ ತಾಲ್ಲೂಕಿನ ಹಂಗಳ ಶಾಸನವು ಉಲ್ಲೇಖಿಸುತ್ತದೆ. "ರಾಜ ಒಡೆಯರು ಮುಕ್ತರಾದ ಬಳಿಯ ಅಮೃತಂಮ ಕಲಮಠ ಕಟ್ಟಿಸಿ ಲಿಂಗ ಸ್ಥಾಪ್ಯವ ಮಾಡಿ ಮರಳ ಬಸವ ಲಿಂಗದೇವರಿಗೆ ಸ್ವತಂತ್ರವ ಮಠವ ಕಟ್ಟಿಸಿ ಹಂಗು ಸ್ಥಳದ ಹೊರಕೇರಿ ಬಾಚಳ್ಳಿ ಗ್ರಾಮಕ್ಕೆ ಸಲ್ಲುವ..."[೮೭] ಮುಂತಾಗಿ ವಿವರಗಳಿವೆ.

ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲ್ಲೂಕಿನ, ಸಿದ್ಧಾಪುರದಲ್ಲಿಯ ವಿಘ್ನೇಶ್ವರ ದೇವಸ್ಥಾನದಲ್ಲಿಯ ಶಾಸನವು ಸಿದ್ದನಾಮ್ಮಿ ಜೆಟ್ಟೆಮ್ಮ, ರಾಣಿಯರ ಬಗ್ಗೆ ಉಪಯುಕ್ತ ಮಾಹಿತಿಯನ್ನು

ಒದಗಿಸುತ್ತದೆ. ಅಲ್ಲದೆ ಬಿಳಗಿಗೆ ಶ್ವೇತಪುರವೆಂದು ಕರೆಯಲಾಗಿದೆ. ತಮ್ಮೇಂದ್ರಭೂಪಾಲಕನ ಧರ್ಮಪತ್ನಿಯಾದ ಶ್ರೀ ಸಿದ್ಧನಾಮ್ನಿಯ ಕುಮಾರನಾದ ಘಂಟೇಂದ್ರ ಭೂಪಾಲಕನ ಹೆಸರು ಹಾಗೂ ಘಂಟೇಂದ್ರನ ಪತ್ನಿಯ ಗುಣವನ್ನು ಶಾಸನವು ಹೊಗಳುತ್ತದೆ. "ಘಂಟೇಂದ್ರ ಪತ್ನೀ ಸಮಪಕ್ಷಪಾತಃ ರೂಪೇನ ಲಕ್ಷ್ಮೀ ಕ್ಷಮಯಾ ಧರಿತ್ರೀ ಶೀತೀನ ಗೌರೀ ವಚಸಾ ಚ ವಾಣೀ ಘಂಟೇಂದ್ರ ಪತ್ನ್ಯಾಂ ಸುಗುಣಾಶ್ರಯಂ"[೮೮] ಎಂಬುದಾಗಿ ದಾಖಲೆಯಿದೆ. "ಶಾಲಿವಾಹನ ಶಕ ವರುಷ ೧೫೭೪ನೆಯ ಖರ ಸಂವತ್ಸರದ ಅಶಾಡ ಶುಶಿಲು ಸಿದ್ಧಾಪುರದ ವಿಘ್ನೇಶ್ವರ ದೇವರ ದಿವ್ಯಶ್ರೀಪಾದ ಪದ್ಮಂಗಳಿಗೆ ಶ್ರೀಮನ್ಮಹಾಪ್ರಭು ಬಿಳಿಗೆ ಘಂಟೆವಡೇರ ರಾಣಿವಾಸದ ಜೆಟ್ಟೆಂಮ್ಮನವರೂ ನಂಮ ಪತಿ ಘಂಟೆವಡೆರಿಗೆ ಅಕ್ಷಯ ಪುಂಣ್ಯಲೋಕ ಪ್ರಾಪ್ತಿಯಾಗಬೇಕು. ನಮಗೆ ಸಿವ ಸಾಮಾಜ್ಯವಾಗಬೇಕೆಂದು ಭೂಸ್ವಾಸ್ಥೆಗಳನ್ನು ಕೊಟ್ಟ ಧರ್ಮ ಶಿಲಾಶಾಸನದ"[೮೯] ವಿವರವಿದೆ. ಚಿಕ್ಕಮಾಳಿಗೆ ನಾಡಿನ ಹಣಜೆಬಯಲು ಹಾಗೂ ಚಾವುಗನಹಳ್ಳಿಗಳನ್ನು ಬ್ರಾಹ್ಮಣರಿಗೆ ಕಾಣಿಕೆಯಾಗಿ ನೀಡಿದಳು. ಕವಲೆದುರ್ಗದ ಮಹಾಮಹತ್ತಿನ ಮಠದಲ್ಲಿರುವ ನಲವತ್ತನೆಯ ತಾಮ್ರಶಾಸನವು "ಬಿಳಿಗಿಯ ಘಂಟೆವಡೆಯರ ಪೌತ್ರರಾದ ಇಮ್ಮಡಿ ಶಿವಪ್ಪನಾಯಕನು ಶಿವಾರ್ಪಿತವಾಗಿ ಕೊಟ್ಟ ದಾನಶಾಸನದ ವಿವರವಿದೆ."[೯೦] ನಾಲ್ಕನೆಯ ಘಂಟೇಂದ್ರನ ಕಾಲಕ್ಕೆ ಕೆಳದಿ ಹಾಗೂ ಬಿಳಿಗಿ ಮನೆತನಗಳ ನಡುವೆ ವೈವಾಹಿಕ ಸಂಬಂಧಗಳು ಏರ್ಪಟ್ಟಿತ್ತು. "ತೀರ್ಥಹಳ್ಳಿ ತಾಲ್ಲೂಕು ಕವಲೇದುರ್ಗದ ಮಹಾಮಹತ್ತಿನ ಮಠದಲ್ಲಿರುವ ೧೬೬೮ರ ತಾಮ್ರಪಟವು ಆರಂಭದಲ್ಲಿ "ಶ್ರೀ ಶಿವಾಯ ನಮಃ ಎಂದಿದ್ದು, ಮಹಾಮಹತ್ತಿಗೊಳಗಾದ ಪಿನಗುಂಡಿಯ ವಿರೂಪಾಕ್ಷದೇವರ ಮುಖಾಂತ್ರ ಮಹಾಮಹತ್ತಿಗೆ ಶ್ರೀ ಮನ್ಮಹಾಪ್ರಭು ಶಿವಭಕ್ತಿ ಪರಾಯಣರಾದ ಬಿಳಿಗಿ ದೇವಪ್ಪೊಡೇರ ಪುತ್ರರಾದ ಘಂಟೆವೊಡೆರ ಪುತ್ರಿಯಾದ ಘಂಟೆ ಅಂಮಾಜಿಯವರು ಕೊಟ್ಟ ಧರ್ಮಶಾಸನದ ಕ್ರಮವೆಂತಂದರೆ ಬಿಳಿಗೆ ಸೀಮೆಯೊಳಗೆ ನಂಮ ತಂದೆಗಳು ನಂಮನು ಸದಾಶಿವನಾಯಕರ ಕುಮಾರರಾದ ಭದ್ರಪ್ಪನಾಯಕರಿಗೆ ಧಾರೆನೆರೆದು ಕೊಡುವಾಗ ಧಾರಾದತ್ತವಾಗಿ ಕೊಟ್ಟುದು ಅಯಿನೂರು ವರಹದ ಗ್ರಾಮದ ನಜೂರು ಅರಂದೂರು"[೯೧] ಈ ಶಾಸನವು ಅಪೂರ್ಣವಾಗಿದೆ. ತಿಮ್ಮರಸ ಒಡೆಯರು ತಮ್ಮ ಅಕ್ಕನಾದ ತಿಮ್ಮಾಂಬಿಕೆಯ ಹೆಸರಿನಲ್ಲಿ ಬಸವಿಯನ್ನು ಕಟ್ಟಿಸಿ, ಶಾಂತೇಶ್ವರನನ್ನು ಪ್ರತಿಷ್ಠಾಪಿಸಲಾಯ್ತೆಂಬ"[೯೨] ವಿವರಗಳಿವೆ.

ಕುರುಗೋಡು ಸಿಂಧ ಅರಸರಲ್ಲಿ ಪ್ರಮುಖನಾದವನು ಒಂದನೇ ರಾಚಮಲ್ಲ. "ಈತನ ರಾಣಿಯರು ಮಾಕಲದೇವಿ ಮತ್ತು ಸೋವಲದೇವಿ. ರಾಣಿ ಸೋವಲದೇವಿಯ ಮಗನಾಗಿ ಇರುಂಗೋಳ ಜನಿಸಿದನೆಂದು ಕುರಗೋಡು ಶಾಸನವು[೯೩] ಉಲ್ಲೇಖಿಸುತ್ತದೆ. ಅಲ್ಲದೆ ಇರುಂಗೋಳನ ರಾಣಿ ಬಲದೇವಿಯನ್ನು ದಾಖಲಿಸಿದ್ದು, ಈಕೆಗೆ ಏಚಲದೇವಿಯೆಂಬ ಮತ್ತೊಂದು ಹೆಸರು

ಇದ್ದಿತೆಂಬುದನ್ನು ಕುರುಗೋಡು ಶಾಸನವು ತಿಳಿಸುತ್ತದೆ. ಕುರುಗೋಡದ ಉಜಾಳೇಶ್ವರ ದೇವಾಲಯದ ಅಂತರಾಳದ ದ್ವಾರಶಾಖೆಗಳ ಕೆಳಭಾಗದಲ್ಲಿ ಚೌರಿಯನ್ನು ಹಿಡಿದು ನಿಂತಿರುವ ಎರಡು ಮೂರ್ತಿಗಳು ಇದ್ದು, ಇವುಗಳ ಕೆಳಗೆ 'ಶ್ರೀ ಲೋಕಾಪುರದ ಏಚಲದೇವಿ' ಎಂಬ ಶಾಸನವನ್ನು ಬರೆಯಲಾಗಿದೆ.[೯೪] ಅಲ್ಲದೆ ಒಂದನೇ ರಾಚಮಲ್ಲನ ಪಿರಿಯರಸಿಯಾದ ಮಾಕಲದೇವಿ ಗಂಡನೊಂದಿಗೆ ಆಡಳಿತದಲ್ಲಿ ತೊಡಗಿದ್ದಳೆಂಬುದನ್ನು ಶಾಸನಗಳು ಉಲ್ಲೇಖಿಸುತ್ತವೆ.

ಚಾವುಂಡನಿಗೆ ದೇಮುಲದೇವಿ ಎಂಬ ರಾಣಿ ಇದ್ದಳು. "ಇವಳು ಸಕಲ ಭೋಗಭಾಗಿನಿ, ದ್ವಿತೀಯ ಲಕ್ಷ್ಮೀ ಸಮಾನೆ, ಪ್ರತ್ಯಕ್ಷ ಪಾರ್ವತಿ, ಪತಿವ್ರತಾ ಅರುಂಧತಿ, ಶಿಷ್ಟೇಷ್ಟಜನ ಕಲ್ಪವೃಕ್ಷೆ, ಅಭಿನವ ಸರಸ್ವತಿ, ಬೇಡಿದುದನ್ನು ನೀಡುವ ಸುರಧೇನುವೆನಿಸಿದ್ದಳು. ಅರಸೀಬೀದಿಯ ಶಾಸನವು ಈಕೆಯನ್ನು ಪಿರಿಯರಸಿ ಪಟ್ಟಮಹಾದೇವಿ"[೯೫] ಎಂದು ಕರೆದಿದೆ.

ಮಧುಗಿರಿಯಲ್ಲಿರುವ ಶಾಸನವು ಮಧುಗಿರಿ ಬೆಟ್ಟದ ತಪ್ಪಲಿನಲ್ಲಿರುವ ಬೃಂದಾವನವನ್ನು ಗೌರಮ್ಮನಿಗಾಗಿ ನಿರ್ಮಿತವಾಯ್ತೆಂದು "ಸ್ವಸ್ತಿಶ್ರೀ ಶಾಲಿವಾಹನ ಶಕ ವರ್ಷಂಗಳು ೧೬೧೨ನೇ ಪ್ರಮಾಥೂತ ಸಂವತ್ಸರ ಕಾರ್ತಿಕ ೧೨ ಗುರುವಾರ ಶ್ರೀ ಚಿಕ್ಕದೇವರಾಯ ನಿರ್ಮಿತ ಮಂಟಪ ಬೃಂದಾವನ ಗೋಪಾಲ ಸರಸು ಗೌರಮ್ಮ..... ಎಂದಿದೆ. ಈ ಬೃಂದಾವನವು ಸಿದ್ದನಕಟ್ಟೆಗೆ ಹೋಗುವ ಮಾರ್ಗದಲ್ಲಿದೆ."[೯೬]

ಬ್ರಹ್ಮಸಮುದ್ರ ಗ್ರಾಮದಲ್ಲಿ ದೊರೆಯುವ ಮುಮ್ಮಡಿ ಚಿಕ್ಕಭೂಪಾಲನ ಶಾಸನವು ಕ್ರಿ.ಶ.೧೫೬೨ರ ಕಾಲದ್ದು. ತನ್ನ ಮಗಳಾದ 'ಶಾಂತಮ್ಮಳಮ್ಮ' ಕರಿಯಪಗೌಡನಿಗೆ ಕೊಟ್ಟು, ಕರಿಕೆರೆ ಗ್ರಾಮವನ್ನು ನೀಡಿದನೆಂದು "ಶ್ರೀಮನ್ ಮಹಾನಾಡಪ್ರಭುಬಿಜ್ಜವರದ ಮುಂಮ್ಮಡಿ ಚಿಕ್ಕಪ್ಪಗೌಡರೈಯನವರು ನಂಮ ಅಳಿಯ... ಕೆರೆಯಪಗೌಡ ನಂಮ ಹೆಂಣ್ಣು ಮಗಳ ಕ.... ರಮಗೆ ಕೊಡುಗ್ರಾಮ ಉಂಬಳಿ..." ಇತ್ಯಾದಿ ವಿವರಗಳನ್ನು ಒದಗಿಸುತ್ತದೆ.

ನಮ್ಮ ನಾಡಿನ ಭಾಷೆ, ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಏಳ್ಗೆಗಾಗಿ ಶ್ರಮಿಸಿದ ಸಣ್ಣಪುಟ್ಟ ಸಂಸ್ಥಾನಗಳಲ್ಲಿ ಸುಗಟೂರು ಸಂಸ್ಥಾನವೂ ಒಂದು. ಈ ಸಂಸ್ಥಾನದಲ್ಲಿ ರಾಣಿಯು ನೇರ ಆಡಳಿತ ಕೈಗೊಳ್ಳುವುದಲ್ಲದೆ, ಹಲವಾರು ರಾಣಿಯರು ಕೆರೆ, ಕಾಲುವೆ, ಗುಡಿ–ಗೋಪುರ, ಕೋಟೆ–ಕೊತ್ತಲ, ಮಠ–ಮಾನ್ಯಗಳನ್ನು ಸೃಷ್ಟಿಸಿ, ನಮ್ಮ ನಾಡಿನ ಸಂಸ್ಕೃತಿಗೆ ಅವಿಸ್ಮರಣೀಯವಾದ ಕೊಡುಗೆಯನ್ನು ನೀಡಿದ್ದಾರೆ. ಮುಳಬಾಗಿಲು ತಾಲೂಕಿನ ಆವನಿ ಬೆಟ್ಟದ ಧನುಷ್ಕೋಟಿ ತೀರ್ಥದ ಉತ್ತರದ ಕಡೆಗಿನ ಶಾಸನವು ತೆಲುಗು ಭಾಷೆಯಲ್ಲಿದ್ದು ಕನ್ನಡ ಹಾಗೂ ತೆಲುಗು ಲಿಪಿಯಲ್ಲಿದೆ. "ಸುಗಟೂರು ಚಿಕ್ಕತಮ್ಮಯಗೌಡುವಾರಿ ಅಕ್ಕಾಗಾರು ಹಲಸರಾತಮ ಪುರೋಹಿತ ಕೃಷ್ಣಭಟ್ಟ ತಿರುಮಲ ಸೋಮಯಾಜು ಜಾತ ದೇವತುಲಪಾದಾಲು... ದಕ್ಷಿಣ ಗಯ ತಿಲೋದಕ

ಪಿಂಡ ಪ್ರಧಾನಂ ಚೇಶಿ ಕಾಶಿ ಗಯ ಪ್ರಯಾಗ ಅಂದು ಚೇಸಿನ ಫಲಂ ವಾಲ್ಮೀಕಿ ಪ್ರೋಕ್ತು"[೯೭] ಎಂದಿದೆ. ಇದರರ್ಥ ಸುಗಟೂರಿನ ಚಿಕ್ಕ ತಮ್ಮಯ್ಯಗೌಡರ ಅಕ್ಕನಾದ ಹಲಸರಾತಮ್ಮಳು ಪುರೋಹಿತ ಕೃಷ್ಣಭಟ್ಟ ತಿರುಮಲ ಸೋಮಯಾಜು ಎಂಬುವುದರ ಮೂಲಕವಾಗಿ ದೇವತೆಗಳ ಪಾದಗಳನ್ನು ಪ್ರತಿಷ್ಠಾಪಿಸಿದಳು.

ಮುಳಬಾಗಿಲು ತಾಲೂಕಿನ ನಾಗರಕುಂಟೆಯ ಪಶ್ಚಿಮದ ಬಂಡೆ ಮೇಲಿನ ಶಾಸನವು ಕನ್ನಡ ಭಾಷೆಯಲ್ಲಿದೆ. "ಇಮ್ಮಡಿ ತಮ್ಮಯ್ಯ ಗೌಡರ ಪುಣ್ಯವಿದು. ಮಗಳಾದ ಕೆಂಪಮನು ಕಾಶಿ ಅಮೃತ ಮಲ್ಲಿಕಾರ್ಜುನಗೆ ಯಜ್ಞ ಮಾಡಿಸಿದಳು"[೯೮] ಎಂಬ ಮಾಹಿತಿ ಇದೆ. ಮುಮ್ಮಡಿ ತಮ್ಮಗೌಡನು ನಗರೇಶ್ವರ ದೇವರ ಶಿಷ್ಯರಾದ ಮಹಾದೇವರಿಗೆ ಕೊಟೂರು, ಹೊಸಳ್ಳಿ, ವೀರಪುರವನ್ನು ತಮ್ಮ ತಂದೆ-ತಾಯಿಗಳಿಗೆ ಪುಣ್ಯವಾಗಬೇಕೆಂದು ದತ್ತಿ ನೀಡಿ, ಆ ಊರಿನಲ್ಲಿರುವ ಬಸವಲಿಂಗ ದೇವರ ಗುಡಿಯನ್ನು, ಮರವನ್ನಾಗಿಸಿ ಕಟ್ಟಿಸಿದನು. ಪುಂಗನೂರಿನ ವೆಂಕಟರಮಣ ಸ್ವಾಮಿ ಬೀದಿಯ ಪಶ್ಚಿಮದ ಕೊನೆಯಲ್ಲಿನ ಕೆರೆಯ ತೂಬಿನ ಕಲ್ಲಿನ ಮೇಲಿನ ಶಾಸನವು "ವೀರ ಚಿಕ್ಕರಾಯನ ಪುತ್ರ ಇಮ್ಮಡಿ ಚಿಕ್ಕರಾಯನ ಹೆಂಡತಿಯೂ ಗುಂಡುಪಲ್ಲೆ ವೆಂಕಟಪತಿನಾಯಕನ ಮಗಳೂ ಆದ ಮುದ್ದಮ್ಮನಿಂದ ಜಗದೇಶ್ವರ ದೇವಾಲಯಕ್ಕೆ ಕೆರೆಯನ್ನು ನಿರ್ಮಿಸಲಾಯ್ತೆಂಬ"[೯೯] ದಾಖಲೆಯಿದೆ.

ಪುಂಗನೂರು ಜಮೀನ್ದಾರರ ವಶದಲ್ಲಿದ್ದ ತಾಮ್ರಪಟ ತೆಲುಗುಭಾಷೆ ಹಾಗೂ ತೆಲಗು ಲಿಪಿಯಲ್ಲಿದ್ದು ಶಕ ೧೬೭೫ ಶ್ರೀಮುಖ, ಮಾಘ ಶು ೨೦ ಕ್ರಿ.ಶ.೧೭೫೪ ಫೆಬ್ರುವರಿ ೨ ಶನಿವಾರಕ್ಕೆ ಸಂಬಂಧಿಸಿದ್ದು, ಸುಗಟೂರು "ಇಮ್ಮಡಿ ಚಿಕ್ಕರಾಯರ ಪೌತ್ರ ಮುಮ್ಮಡಿ ಚಿಕ್ಕರಾಯರ ಪುತ್ರನಾದ ಇಮ್ಮಡಿ ಚಿಕ್ಕರಾಯ ಹಾಗೂ ಅವನ ಹೆಂಡತಿ ಮಂಜಮ್ಮಣ್ಣಿ ಅವರುಗಳು ಚೌಡೆಪಲ್ಲಿಯಲ್ಲಿ ಅವರಿಂದ ನಿರ್ಮಿಸಲಾದ ಮೃತ್ಯುಂಜಯೇಶ್ವರ ದೇವಾಲಯಕ್ಕೆ ಅನೇಕ ಪೂಜಾ ಕೈಂಕರ್ಯ ಹಾಗೂ ಹಬ್ಬ ಹರಿದಿನಗಳ ಆಚರಣೆಗಾಗಿ ಭೂದಾನ ನೀಡಿರುವ"[೧೦೦] ವಿವರವನ್ನು ಈ ಶಾಸನ ದಾಖಲಿಸಿದೆ.

ಚಿತ್ತೂರು ಜಿಲ್ಲೆ ಪುಂಗನೂರು ತಾಲ್ಲೂಕು ಕೂಡೂರು ಪಲ್ಲೆ ಪಾಳು ದೇವಾಲಯದ ಸಮೀಪದಲ್ಲಿರುವ ಕೊಳದ ಬಳಿ ಬಿದ್ದಿರುವ ಬಂಡೆಯ ಮೇಲಿನ ಶಾಸನವು ತೆಲುಗು ಭಾಷೆ ಹಾಗೂ ಲಿಪಿಯನ್ನು ಹೊಂದಿದ್ದು ಕ್ರಿ.ಶ.೧೮೧೭ರ ಕಾಲಕ್ಕೆ ಸಂಬಂಧಿಸಿದ್ದಾಗಿದ್ದು, ಸುಗಟೂರು ಇಮ್ಮಡಿ ತಿಮ್ಮರಾಯನ ಪುತ್ರ ಮುಮ್ಮಡಿ ಚಿಕ್ಕರಾಯ ಹಾಗೂ ವೂಲಪಾಟಿ ರಂಗೇಗೌಡರ ಮಗಳು ದೇವೀರಮ್ಮಣ್ಣಿಯವರು ತೋಡಿಸಿದ ಕೊಳ"[೧೦೧] ಎಂಬ ವಿವರವಿದೆ.

ಬಳ್ಳಾರಿ ಜಿಲ್ಲೆಯ ಶಾಸನಗಳಲ್ಲಿ ಹಂಡೆ ಪಾಳೇಗಾರರಾದ ಬಾಲದ ಹನುಮಪ್ಪನಾಯಕ, ರಾಮಪ್ಪನಾಯಕ ಮುಂತಾದವರ ಬಗೆಗೆ ದಾಖಲೆಗಳು ದೊರೆಯುತ್ತವೆ.

ಅನಂತಸಾಗರದಲ್ಲಿ ಚಿಕ್ಕಪ್ಪ ಒಡೆಯರು ನಿರ್ಮಿಸಿದ ತಟಾಕದ ಎಡಬಲಗಳಲ್ಲಿ ಬುಕ್ಕರಾಯನ ಹೆಸರಿನಲ್ಲಿ ಸಮುದ್ರವನ್ನು ಆತನ ಹೆಂಡತಿ ಅನಂತಮ್ಮನ ಹೆಸರಿನಲ್ಲಿ ನಿರ್ಮಿಸಿದನೆಂದು ದೇವರಕೊಂಡ ಶಾಸನದಿಂದ ತಿಳಿದುಬರುತ್ತದೆ.

### ೨.೨.೨. ಕೈಫಿಯತ್ತುಗಳು

ಸ್ಥಳೀಯ ಚರಿತ್ರೆಯನ್ನು ನಿರೂಪಿಸುವ ಕೈಫಿಯತ್ತುಗಳಲ್ಲಿ ನಾಡಿನ ಕೃಷಿ, ಆಡಳಿತ, ರಾಜಕೀಯ, ಧಾರ್ಮಿಕ ಹಾಗೂ ಸ್ಥಳಪುರಾಣಗಳು ಚಿತ್ರಿತಗೊಂಡಿವೆ. ಇವು ಕೂಡಾ ಲಿಂಗಾಯತ ರಾಣಿಯರ ರಾಜ್ಯಪಾಲನೆ ಕುರಿತು ಉಲ್ಲೇಖಿಸುತ್ತವೆ.

ಶೃಂಗೇರಿ ಕೈಫಿಯತ್ತಿನಲ್ಲಿ "ಸೋಮಶೇಖರ ನಾಯಕರ ಪತ್ನಿ ಚೆನ್ನಮ್ಮಾಜಿಯವರು ಸಂಸ್ಥಾನಕ್ಕೆ ಹೊಂದಿದ ಸಾಮಾಜಿಕ ಜನರು ಸಹಿತವಾಗಿ ಶತ್ರುಗಳಾದಂಥ ಅಭಾಸ ಬಸಪ್ಪನಾಯಕ ಮುಂತಾದ ತುಂಟ ಜನಗಳನ್ನು, ನಿರ್ಣಯವನ್ನು ಮಾಡಿ ಈ ಚೆನ್ನಮ್ಮಾಜಿಯವರು ಆಳಿದ್ದು ಸಹ ವರ್ಷ ೩೩ ತಿಂಗಳು ೫ ದಿನ ಮೂರಕ್ಕೆ ಆಳಿದಳು ಎಂದು ಉಲ್ಲೇಖಿಸುತ್ತದೆ. ಅಲ್ಲದೆ ಬಸಪ್ಪನಾಯಕರ ಪತ್ನಿಯಾದ ವೀರಮ್ಮಾಜಿಯು ತಮ್ಮ ಸೋದರ ಮಾವನಾದ ಬೆಂಕಿಪುರದ ಪಟ್ಟಣಶೆಟ್ಟಿ ಚೆನ್ನವೀರಪ್ಪನ ಮಕ್ಕಳು ನಾಯಕ ಮಂದಿಯಲ್ಲಿ ಹಿರೇಮಗ ಬುದ್ಧಿಶಾಲಿಯಾದ ಕಾರಣ ಆತನಿಗೆ ಸೋಮಶೇಖರನಾಯಕನೆಂದು ವೀರಮ್ಮಾಜಿಯೇ ರಾಜ್ಯಪಾಲನೆ ಮಾಡಿದ ಬಗ್ಗೆ ಉಲ್ಲೇಖವಿದೆ."[೧೦೨]

ನವಾಬ ಹೈದರಾಲಿಯು "ನಗರ ಸಂಸ್ಥಾನವನ್ನು ಹೆಂಗಸು ಆಳುತ್ತಾಳೆಂಬ ವರ್ತಮಾನವನ್ನು ಕೇಳಿ, ನಗರ ಸಂಸ್ಥಾನವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದಾಗ ರಾಣಿಯು ಈ ಕೋಟೆಯಲ್ಲಿ ನಿಲ್ಲುವುದಕ್ಕೆ ಚೈತನ್ಯವಿಲ್ಲವೆಂದು ತನ್ನ ಮಂದಿ, ಕುದುರೆ, ಸಾಮಾಜಿಕರು ಸಾಕು ಮಗನನ್ನು ಕರೆದುಕೊಂಡು ಕವಲೇದುರ್ಗಕ್ಕೆ ಸೇರಿದಳು. ನವಾಬ ಬಹದೂರವರು ನಗರದ ಕೋಟೆಯನ್ನು ತೆಗೆದುಕೊಂಡು ಠಾಣ್ಯ ಹಾಕಿ ಶಹರದಲ್ಲಿದ್ದಂಥ ಜನರಿಗೆ ಕೌಲು ಕರಾರು ಕೊಟ್ಟು... ಹೇಳಿ ಇಲ್ಲಿಂದ ರಾಣಿಯನ್ನು ಕೈಸೆರೆ ಹಿಡಿಯಬೇಕೆಂದು ಆಲೋಚನೆಯನ್ನು ಮಾಡಿ ನಗರವನ್ನು ಬಿಟ್ಟು ಹೊರಟಲ್ಲಿ, ಈ ವರ್ತಮಾನವನ್ನು ದುರ್ಗದಲ್ಲಿದ್ದ ರಾಣಿಯು ಕೇಳಿ ದುರ್ಗದಲ್ಲಿ ನಿಬಾಯಿಸಲಾರೆನೆಂಬುದಾಗಿ ತಿಳಿದುಕೊಂಡು ಅಲ್ಲಿಂದ ಹೊರಟು ಮಂದಿ ಕುದುರೆ ಮುಂತಾದ ಸಾಮಾಜಿಕರು ಮುಂತಾದವರನ್ನು ಕರೆದುಕೊಂಡು ಬಲ್ಲಾಳರಾಯನ ದುರ್ಗಕ್ಕೆ ಬಂದು ಸೇರಿದಳು.

ನವಾಬರು ಕವಲೇದುರ್ಗವನ್ನು ತೆಗೆದುಕೊಂಡು ನಗರ ಸೀಮೆಯನ್ನು ಸ್ವಾಧೀನ ಮಾಡಿಕೊಂಡರು."[೧೦೩] ಅಲ್ಲದೆ ತಮ್ಮ ಕಡೆಯಿಂದ ಹೀರಜಾದೇಯರನ್ನು ಕಳುಹಿಸಿ "ನೀನು ಯಾವುದೇ ಯೋಚನೆ ಮಾಡಬೇಡ, ನಿನ್ನ ಮಗನನ್ನು ಸಹಾ ನೀನು ಕರೆದುಕೊಂಡು ಬಂದಲ್ಲಿ ನಿನ್ನ ಮಗನಿಗೆ ಪಟ್ಟಾ ಕಟ್ಟಿ ಸಂಸ್ಥಾನದಲ್ಲಿಟ್ಟು ಹೋಗುತ್ತೇವೆಂದು ಹೇಳಿ ಕಳಿಸಿದುದರಿಂದ ರಾಣಿಯ ತನ್ನ ಮಗನಂ ಸಹಾ ಕರೆದುಕೊಂಡು ಬಂದು, ದಂಡಿಗೆ ದಾಖಲಾದಳು.[೧೦೪] ಆಗ ಹೈದರನ ಕಡೆಯವರು ರಾಣಿ ಮತ್ತು ಅವಳ ಮಗನನ್ನು ಸೆರೆಹಿಡಿದು ಮದ್ದಗಿರಿಗೆ ಕಳುಹಿಸಿ, ನಗರ ಸೀಮೆಯನ್ನು ಬಂದೋಬಸ್ತು ಮಾಡಿದರು. ಮುಂದೆ ಮರಾಠರು ಮದ್ದಗಿರಿಯನ್ನು ವಶಪಡಿಸಿಕೊಂಡಾಗ ರಾಣಿ ವೀರಮ್ಮಾಜಿಯನ್ನು ಹಾಗೂ ಅವಳ ಮಗನನ್ನು ಬಂಧನದಿಂದ ಮುಕ್ತ ಮಾಡಿದರು. ರಾಣಿಯ ಮಗನಿಗೆ ಸಿಡುಬು ಕಜ್ಜಿಯೆದ್ದು ಸತ್ತು ಹೋದ ನಂತರ ರಾಣಿಯು ಸತ್ತು ಹೋದಳೆಂಬ ಮಾಹಿತಿಯನ್ನು ಶೃಂಗೇರಿಯ ಕೈಫಿಯತ್ತು ಒದಗಿಸುತ್ತದೆ.

'ಸಾಗರದ ಕೈಫಿಯತ್ತು' ಸೋಮಶೇಖರನಾಯಕನ ತರುವಾಯ ಆತನ ರಾಣಿ ವೀರಮ್ಮಾಜಿಯು "ವರುಷಾ ೧ಕೆ ಮರಾಟೆಯವರಿಗೆ '೧ ಲಕ್ಷ ರೂಪಾಯಿ ಕೊಟ್ಟುಕೊಂಡು ರಾಜ್ಯವಾಳಿದಳು. ಅಗ್ಯೆ ಕಂದ ರಾಜಪ್ಪಯ.... ಮಗಕುಟುಕ.... ಚಿತ್ರಭಾನು ಸಂ೧ ಅಳುತಿರುವಾಗೆ ಸ್ತಳಕೆ ಅಳ್ಲು...? ....ಬದು ಬಿದರೂರ ತೆಗೆದುಕೊಂಡು ವೀರಮ್ಮಾಜಿಯವರನ್ನು ಕೈಸೆರೆ ಹಿಡಿದು ಮದ್ದಗಿರಿ ವಳಗೆ ಯಿಟ್ಟರು. ಯೀ ಬಿದರೂದ್ರಿಗೆ ಹೈದರ ನಗರವೆಂಬ ಹೆಸರುಯಿಟ್ಟರು."[೧೦೫]

"ಹೈದರ ಕೈಫಿಯತ್ತು-೧" ಚೆನ್ನಬಸಪ್ಪನಾಯಕನ ತಾಯಿ ಚೆನ್ನಮ್ಮಾಜಿ ಆಳ್ವಿಕೆ ನಡೆಸಿದ ವಿವರವನ್ನು "ವಂದಾನೋಂದು ದಿವ್ಸ ಯಿವನ ತಾಯಿ ಸದ್ರಿ ಚೆಂನ್ನಂಮಾಜಿ(>ವೀರಮ್ಮಾಜಿ) ಯೆಂಬುವಳು ತನ್ನ ಗಂಡ ತೀರಿದ ಬಳಿಕ ತಾನು ಕಾರಬಾರಿಸ್ತಳಾಗಿದ್ದಳು. ಅಲ್ಲದೆ ಈ ಚೆನ್ನಮ್ಮಾಜಿ(>ವೀರಮ್ಮಾಜಿ)ಯು ಪ್ರಧಾನಿ ವೀರಭದ್ರೈಯ್ಯನ ಯಿಟ್ಟುಕೊಂಡು ತನ್ನ ಗಂಡ ಆಳಿಕೊಂಡು ಯಿದ್ದ ಮೇರಿಗೆ ರಾಜ್ಯಪಾಲನೆ ಮಾಡಿಕೊಂಡು ಇದ್ದಳು"[೧೦೬] ಎಂಬ ಮಾಹಿತಿಯನ್ನು ನೀಡುತ್ತದೆ. ಅಲ್ಲದೆ ಈ ಕೈಫಿಯತ್ತು ತೆಲುಗು ಭಾಷೆಯಲ್ಲಿ ವೀರಮ್ಮಾಜಿಯು ಅಂತ್ಯ ಕಾಲದಲ್ಲಿ ನಗರಕ್ಕೆ ಅಗ್ನಿಯನ್ನು ಹಚ್ಚಿದ ಬಗ್ಗೆ ವಿವರ ಒಗಿಸುತ್ತದೆ. "ಹೈದರಲಿ ಖಾನ ಬಹದೂರರಡು । ಫಿತೂರಿ ಚೇತನೂ ॥ ಬಿದರೂರ್ರು । ಸಂಸ್ತನಂ ಕೋಟ ಚೇನುಕೊನಿ । ತಮ ಸ್ವಾಧೀನಂ ಚೇಸುಕೊನಿರ್ರಿಗನುಕ । ವೀರಮ್ಮಾಜಿತನ ನಗರ್ಕಿ ಅಗ್ನಿ ಪ್ರವೇಶಂ ಚೇಯಿಂಚಿ ವಂದುಲಯಿಂಟಿಕಿ ಸಹಾ ಖಚಾನಾ ಲೇಸುಕೋನಿ । ಪಿಳ್ಳಿ ಮೊಯಿ ಬಲ್ಲಾಲ । ರಾಯದುರ್ಗ್ಗಮಂಗು ನ್ರ೧ಃ೩ ವುಂಡಗ್ಲಾ । ನವಾಬು ವಾರಿಗರ್ರುವು ಕಾಕೀ ಸಾಹೇಬ ಆನೆವಾಡು । ಸಂಮ್ಮತಂ ಮೀದ ಯೀ ವಿರಂಮಾಜಿನಿ । ಪಿಲುಚು ಕೊನಿವೊಟ್ಟಿ ವಾರ್ಕಿ । ಕೊಡಿಯಾಲಂದಗ್ಗಿರ ಭೆಟ ಭ್ರಯಿಂಚಿರ್ರಿಗನುತ

। ಅಪ್ಪುಡು ನವಾಬು । ಮದ್ದಗಿರಿ ದುರ್ಗ್ಗಂದಗ್ಗರ ಶು । ವೀರಂಮಾಜಿ । ಯೀ ಕೊಮಾರುಡು ಸಾಕುಮಗ ಸೋಮಶೇಖರ ನಾಯಕುಣ್ಣು । ಸಹ ಅಂವೆಂಚಿರ್‍ರಿ । ಅಯಿ ಮೀದಟ ಅಕ್ಕಡನೇ ಪೇರು ವುಂಟ್ಟು ವುಂಡಂಗಾ ಅರೇಪಾರಿ ಘಾಟು ವಚ್ಚಿ ಮದ್ದಶಿರ್‍ರಿ ಕೋಟೆ ತಿಸಕೋನಿ ತಮಠಾಣ ಆಯಿನ ಮೀದಟ ಯೀ ಪಿರಂಮಾಜೀನಿ ಕೊಡಕುನು ಸಹ ಮರಾಠೆವಾಳ್ಲು ಕೊಡಕು ಪೊಸಿಪೊತು ವುಂಡಂಗಾ ಚಂನ್ನಗಿರಿ ಬಸವಾ ಪಟ್ಟಣಮಂದು । ವೀರಮಾಜಿ ಮೃತಮಾಯನು।[೧೦೭] ಎಂಬ ವಿವರವನ್ನೊದಗಿಸುತ್ತವೆ.

'ತುಳುದೇಶದ ಕಡಬಾ ಸಂಸ್ಥಾನದ ಕೈಫಿಯತ್ತಿ'ನಲ್ಲಿ ಚೆನ್ನಬಸವಪ್ಪ ನಾಯಕನ ತಾಯಿಯಾದ ಚೆನ್ನಮ್ಮಾಜಿ(>ವೀರಮ್ಮಾಜಿ)ಯ ನಡತೆ ಸರಿ ಇರಲಿಲ್ಲವೆಂದೂ, ಮಗನಾದ ಚನ್ನಬಸಪ್ಪನಾಯಕನಿಗೆ ಸತ್ಯ ತಿಳಿಯಿತೆಂದು ಆತನನ್ನು ಕೊಲ್ಲಿಸಲು ಪ್ರಯತ್ನಿಸಿದಳೆಂಬ ಮಾಹಿತಿ ದೊರೆಯುತ್ತದೆ.

'ಕುರುಗೋಡು ಕೈಫಿಯತ್ತು' ಬಳ್ಳಾರಿ ಜಿಲ್ಲೆಯಲ್ಲಿ ಬರುವ ಕುರುಗೋಡು ಸಿಂಧರ ರಾಣಿಯರ ಬಗ್ಗೆ, ಹಂಡೆ ಪಾಳೆಗಾರರ ರಾಣಿಯರ ಬಗ್ಗೆ ಕೆಂಚನಗುಡ್ಡದ ರಾಣಿಯರ ಬಗ್ಗೆ ವಿವರಣೆಯನ್ನು ಒದಗಿಸುತ್ತದೆ. ದ್ಯಾವಪ್ಪನಾಯಕನ ರಾಣಿಯರಾದ ಪದ್ಮಮ್ಮ, ನೀಲಮ್ಮರ ಬಗ್ಗೆ ವಿವರಗಳಿದ್ದು, ನೀಲಮ್ಮ ಮೂರು ವರ್ಷ ಕಾಲ ದೊರೆತನ ಮಾಡಿದಳು."[೧೦೮] ಪುತ್ರ ಸಂತಾನವಿಲ್ಲದ ರಾಣಿ "ದ್ಯಾವಪ್ಪನಾಯಕನ ಚಿಕ್ಕಹೆಂಡತಿ ಹನುಮಪ್ಪ ನಾಯಕನ ಹಿರೆಮಗ ಅಂಕುಶರಾಯಾ ಯಂಬವನು ನಂದ್ಯಾಲಾ ಶಿರಾವಾಳಾ ಶೀಮೆಯಲ್ಲು ದೊರೆತನ ಮಾಡಿಕೊಂಡು ಯಿದ್ದವರು ಸಂತತಿ. ಅವರಿಗೆ ನಂದ್ಯಾಲದ ದೊರೆತನವನ್ನು ಕಳಕೊಂಡು ಅವರ ಸಂತತಿ ಅವರು ಸಿದ್ದಪ್ಪ ಪ್ರಸನ್ನಪ್ಪಯೆಂಬ ಅಣ್ಣ ತಮ್ಮಂದಿರು ಬಳ್ಳಾರಿಗೆ ಪೂರ್ವ ಭಾಗದಲ್ಲು ೧ ಹರದಾರಿ ಮೇಲೆ ಹಂದರಾಳು ಯೆಂಬೊ ಗ್ರಾಮದಲ್ಲಿ ಕೆಲವು ಖರ್ಚುವೆಚ್ಚಗೆ ಬಳ್ಳಾರಿ ಅವರ ಕಡಿಯಿಂದಾ ತೆಗೆದುಕೊಂಡು ವ್ಯವಸಾಯ ಮಾಡಿಕೊಂಡು ಯಿದ್ದರು. ಆ ಸಿದ್ಧಪ್ಪಗೆ ಯಿಬ್ಬರು ಮಕ್ಕಳು ೧. ದೊಡ್ಡತಲೆ ರಾಮಪ್ಪ ನಾಯಕ, ೨. ಹನುಮಪ್ಪನಾಯಕ ಯೀ ಉಭಯತ್ರರನು ಬಳ್ಳಾರಿಗೆ ಕರಕೊಂಡು ಬಂದು, ಸದರಿ ಬರದ ದ್ಯಾವಪ್ಪನಾಯಕನ ಚಿಕ್ಕಹೆಂಡತಿ ನೀಲಮ್ಮನು ಸಾಮಾಧಿಕರ ಅನುಮತಿಯಿಂದಾ ದೊಡ್ಡ ತಲೆ ರಾಮಪ್ಪನಿಗೆ ಬಳ್ಳಾರಿ, ಕುರಗೋಡ, ತೆಕ್ಕಲಕೋಟೆ ಯೀ ಮೂರು ಸ್ಥಳದ ಪಟ್ಟಾಭಿಷೇಕ ಮಾಡಿದರು. ಆಗ ದೊಡ್ಡ ತಲೆ ರಾಮಪ್ಪನಾಯಕನಿಗೆ ಹತ್ತು ವರ್ಷ ಆದ್ದರಿಂದ ಯೀತನ ಪಟ್ಟಕ್ಕೆ ಕೂಡಾ ನೀಲಮ್ಮನು ಸಾಮಾಧಿಕರ ಯಿಟ್ಟುಕೊಂಡು ೨ ವರುಷ ದೊರೆತನ ಮಾಡೋದರೊಳಗೆ, ಯೀ ದೊಡ್ಡತಲೆ ರಾಮಪ್ಪನಾಯಕನ ತಂದೆ ಸಿದ್ಧಪ್ಪನಾಯಕ ಆತನ ತಮ್ಮ ಪ್ರಸನ್ನನಾಯಕ ಯೀ ಉಭಯರು ಯಿದ್ದರೆ ತನ್ನ ಅಧಿಕಾರ ಸಾಗದು ಎಂದು ತಿಳಿದು ಯೀ ಉಭಯರನು ಶಿರಚ್ಛೇದ ಮಾಡಿಸಿದಳೆಂದು"[೧೦೯] ತಿಳಿದುಬರುತ್ತದೆ.

'ಬಳ್ಳಾರಿ ಕೈಫಿಯತ್ತು' ಕೂಡಾ ಇದೇ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ. ದ್ಯಾವಪ್ಪ ನಾಯಕನ ನಂತರ ರಾಣಿ ನೀಲಮ್ಮಾಜಿಯು ತಮಗೆ ಪುತ್ರಸಂತಾನವಿಲ್ಲದ ಕಾರಣವಾಗಿ ಹಂದರ ಹಾಳಿಗೆ ಬಂದ ಸಿದ್ದಪ್ಪನಾಯಕನ ಮಗ ರಾಮಪ್ಪನಾಯಕ, ಹನುಮಪ್ಪನಾಯಕ ಈ ಇಬ್ಬರೂ ಮಕ್ಕಳನ್ನು ಬಳ್ಳಾರಿಗೆ ಕರೆದುಕೊಂಡು ಬಂದು ರಾಮಪ್ಪನಾಯಕನಿಗೆ ಪಟ್ಟಗಟ್ಟಿದಳು. ಈತ ಚಿಕ್ಕಾತನಾದ ಕಾರಣ ನೀಲಮ್ಮನೇ ಬಳ್ಳಾರಿ, ಕುರಗೋಡು, ಪಗರಣೆಗಳಲ್ಲಿ ವ್ಯವಹಾರ ಮಾಡಿದಳು. ನೀಲಮ್ಮನಿಗೂ, ರಾಮಪ್ಪನಾಯಕನಿಗೂ ಮನಸ್ತಾಪವಾದ ಕಾರಣ ಈತ ನೀಲಮ್ಮನನ್ನು ಕಡಿದುಹಾಕಿದನೆಂಬ ಮಾಹಿತಿಯನ್ನು ಒದಗಿಸುತ್ತದೆ.

**೨.೨.೩. ನಾಮೆಗಳು**

ನಾಮೆ ಎಂದರೆ ಕೀರ್ತಿ, ಪ್ರಸಿದ್ಧಿ ಎಂದರ್ಥ. ಆದರೆ ಇವು ಕೂಡಾ ಚಾರಿತ್ರಿಕ ಸಂಗತಿಯನ್ನು ಬಿಚ್ಚಿ ತೋರಿಸುವ ದಾಖಲೆಗಳು.

ಹೈದರನಾಮೆಯು ಕೆಳದಿ ರಾಣಿ ವೀರಮ್ಮಾಜಿಯ ಬಗ್ಗೆ ಪ್ರಮುಖ ಮಾಹಿತಿಯನ್ನು ಒದಗಿಸುತ್ತದೆ. ರಾಣಿಯು ದತ್ತುಪುತ್ರನಾದ ಚೆನ್ನಬಸವ ನಾಯಕನನ್ನು ಕೊಲೆ ಮಾಡಿಸಿದಳೆಂಬ ವಿಚಾರವನ್ನು ದಾಖಲಿಸುತ್ತದೆ. "ರಾಣಿಯ ಜಟಿ ಕೈಯ್ಯಿಂದ್ದಾಯಂಣಿ ಒತ್ತುವಾಗ ಕ್ರಿತ್ತಿಮದಿಂದ್ಧಾ ಚೆನ್ನಬಸಪ್ಪನಾಯ್ಕನು ಪುರಾಪ್ರಾಣ ಹೋಗಿರಲಿಲ್ಲ. ವುಸುರು ತಿರುಗಿ ಗುಣಿಯಿಂದಾಯದ್ದು ಬಂದು ಚಿತ್ರಕಲ್ಲಲ್ಲಿ ತನ್ನ ಬಳಿ ಯಿಧಾನೆ ಯಿವನಿಗೆ ಬಿದರೂರು ರಾಜ್ಯ ಕೊಡ್ಸಬೇಕೆಂದು ಮೆದಕೆರೆ ನಾಯ್ಕರು ಹೇಳಲಾಗಿ"[೧೧೦] ಎಂಬ ವಿಷಯವಿದೆ. ನಂತರದಲ್ಲಿ ರಾಣಿ ಎಳೆಯ ಮಗುವನ್ನು ದತ್ತು ತೆಗೆದುಕೊಂಡು ಅದಕ್ಕೆ ಸೋಮಶೇಖರನಾಯಕನೆಂದು ಹೆಸರಿಟ್ಟು ಆಳ್ವಿಕೆ ನಡೆಸಿದಳೆಂಬ ಮಾಹಿತಿಯನ್ನು ಹೈದರನಾಮೆಯು ತಿಳಿಸುತ್ತದೆ.

ಕೊಡಗಿನ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಚಾರಿತ್ರಿಕ ದಾಖಲೆಗಳಲ್ಲಿ ರಾಜೇಂದ್ರ ನಾಮೆಯು ಒಂದು. ಇದರಲ್ಲಿ ಕೊಡಗಿನ ಪಟ್ಟದ ಸ್ತ್ರೀ ದೇವಮ್ಮಾಜಿ ಹಾಗೂ ಇತರ ರಾಣಿಯರ ಬಗೆಗೆ ಮಾಹಿತಿಗಳು ದೊರೆಯುತ್ತವೆ. ಕೊಡಗಿನ ಇತಿಹಾಸವಲ್ಲದೆ, ಇಕ್ಕೇರಿ ಸಂಸ್ಥಾನದ ಮೇಲೆಯೂ ಬೆಳಕು ಚೆಲ್ಲುವ ಕೃತಿ ಇದಾಗಿದೆ.

"ಕೊಡಗಿನ ಮುದ್ದುರಾಜ ಒಡೆಯರ 'ಪಟ್ಟದ ಸ್ತ್ರೀ ಆದ ದೇವಮ್ಮಾಜಿಯರ ಗರ್ಭದಲ್ಲಿ ಶಿರಿಬಾಯಿ ದೊಡ್ಡವೀರಪ್ಪ ಒಡೆಯರು ಜನಿಸಿದರು. ಈತನಿಗೆ ಮುದ್ದಮ್ಮಾಜಿ, ದೇವಮ್ಮಾಜಿ ಎಂಬ ಇಬ್ಬರು ರಾಣಿಯರನ್ನು ವಿವಾಹ ಮಾಡಲಾಯ್ತು. ಅಪ್ಪಾಜಿರಾಜನಿಗೆ ರಾಜಮ್ಮಾಜಿಯನ್ನು,

ನಂದರಾಜನಿಗೆ ನಂಜಮ್ಮಣ್ಣಿಯನ್ನು ವಿವಾಹ ಮಾಡಿದರು. ಹಾಲೇರಿಯಲ್ಲಿದ್ದ ಅಪ್ಪಾಜಿರಾಜನಿಗೆ ೫ ಜನ ಕುಮಾರರು ಜನಿಸಿದರು. ಹಿರಿಯ ಮಗ ಮುದ್ದಯ್ಯನಿಗೆ ನಂಜಮ್ಮಣ್ಣಿಯನ್ನು, ಎರಡನೇ ಮಗ ಲಿಂಗರಾಜರಿಗೆ ದೇವಾಂಬಿಕೆಯಮ್ಮನವರನ್ನು ವಿವಾಹ ಮಾಡಲಾಯ್ತು" ಎಂಬ ವಿವರಣೆಗಳ ಜೊತೆ ಜೊತೆಗೆ "ಇಕ್ಕೇರಿ ಸಂಸ್ಥಾನದಲ್ಲಿ ದೊಡ್ಡ ಚೆನ್ನಮ್ಮಾಜಿಯವರು ಸೋಮಶೇಖರ ನಾಯಕನನ್ನು ಸಾಕಿಕೊಂಡು ದೊರೆತನ ಮಾಡುತ್ತಿದ್ದರೆಂಬ"[೧೧೨] ಅಂಶವನ್ನು ಅಲ್ಲದೆ ಇಕ್ಕೇರಿ ಬೂದಿಬಸಪ್ಪ ನಾಯಕನು ತೀರಿಹೋಗಿ ಅವರ ಕುಟುಂಬವಾದ ಈರಮ್ಮಾಜಿ ಎಂಬ ರಾಣಿ ದೊರೆತನ ಮಾಡಿದಳು. ಈಕೆ ನಂಬ್ಯಣ್ಣನೆಂಬ ಚಾಕರನ ಸಂಗಡ ವೇಭಿಚಾರ ಮಾಡಿಕೊಂಡು, ದೊರೆ ಮಗನನ್ನು ಜಟ್ಟಿಗಳ ಕೈಯಿಂದ ಕುತ್ತಿಗೆ ಮುರಿಸಿ ಕೊಂದುಹಾಕಿದಳು. ಹೈದರಲಿಯು ಈ ರಾಣಿಯನ್ನು ಬಂಧಿಸಿದನೆಂಬ" ವಿವರಗಳಿವೆ. ಸೋದೆ ಅರಸರಿಗೂ ಕೊಡಗಿನ ಹಾಲೇರಿ ಅರಸರಿಗೂ ವೈವಾಹಿಕ ಸಂಬಂಧಗಳು ಏರ್ಪಡುತ್ತಿದ್ದವೆಂಬ ಮಾಹಿತಿಯನ್ನು ನೀಡುತ್ತದೆ.

ಬಹುಮುಖ್ಯವಾದ ಕೊಡಗಿನ ಇತಿಹಾಸದ ಮೇಲೆ ಬೆಳಕು ಚೆಲ್ಲುವ ದೊಡ್ಡವೀರರಾಜನ 'ಮರಣ ಶಾಸನ'ವನ್ನು ಒಳಗೊಂಡ ರಾಜೇಂದ್ರನಾಮೆಯು ಕೊಡಗಿನ ಚಾರಿತ್ರಿಕ ಸಂಗತಿಗಳನ್ನು ಬಿಚ್ಚಿಡುತ್ತದೆ. ಗಂಡುಮಕ್ಕಳಿಲ್ಲದ ದೊಡ್ಡವೀರರಾಜನು ತನ್ನ ನಂತರ ಅಧಿಕಾರ ತನ್ನ ಪ್ರೀತಿಯ ಮಗಳಾದ ದೇವಮ್ಮಾಜಿಗೆ ಬರಬೇಕೆಂದು' ಮರಣ ಶಾಸನವನ್ನು ಬರೆಯಿಸಿ ಶ್ರೀರಂಗಪಟ್ಟಣದಲ್ಲಿ ಬ್ರಿಟಿಷ್ ಸರ್ಕಾರದ ಪ್ರತಿನಿಧಿಯಾಗಿದ್ದ ಕರ್ನಲ್ ಕೋಲ್ಸ್‌ಗೆ ಮರಣ ಶಾಸನದ ಪ್ರತಿಯನ್ನು ಕೊಡಿಸಿ, ಅದನ್ನು ನಡೆಸಿಕೊಂಡು ಹೋಗುವಂತೆ ಭರವಸೆ ಪಡೆದಿದ್ದನು. ಆದರೆ ಕೋಲನ ಉದಾಸೀನತೆ ಹಾಗೂ ನಿರ್ಲಕ್ಷ್ಯತನ, ಕರ್ತವ್ಯ ಹೀನತೆಗಳಿಂದ ದೊಡ್ಡವೀರ ರಾಜನ ಆಸೆ ಮಣ್ಣುಗೂಡಿತು. ರಾಣಿ ದೇವಮ್ಮಾಜಿಯು ೧೮೦೯ರಿಂದ ೧೮೧೧ರವರೆಗೆ ಕೊಡಗನ್ನು ಆಳಿದಳು. ಆದರೆ ಈಕೆಯ ಚಿಕ್ಕಪ್ಪನಾದ ಲಿಂಗರಾಜನು ದೇವಮ್ಮಾಜಿ ಚಿಕ್ಕವಳಾದ್ದರಿಂದ ತಾನೇ ಅವಳ ಪ್ರತಿನಿಧಿಯಾಗಿ ಆಳಿದನು. ಅಲ್ಲದೆ ಎರಡು ವರ್ಷಗಳಲ್ಲಿ ದೇವಮ್ಮಾಜಿಯನ್ನು ಸಿಂಹಾಸನದಿಂದ ತಳ್ಳಿ ತಾನೇ ಕೊಡಗಿನ ರಾಜನಾದನು"[೧೧೩] ಎಂಬ ಅಂಶ ತಿಳಿದುಬರುತ್ತದೆ.

ಕ್ರಿ.ಶ.೧೮೨೦–೧೮೩೪ರ ಕಾಲಾವಧಿಯಲ್ಲಿದ್ದ ಚಿಕ್ಕವೀರರಾಜೇಂದ್ರನು ಕಾಶಿಯಲ್ಲಿದ್ದನು. ತನ್ನ ಪ್ರೀತಿಯ ಮಗಳಾದ "ಗೌರಮ್ಮನನ್ನು ೧೮೫೨ರಲ್ಲಿ ಇಂಗ್ಲೆಂಡಿಗೆ ಕರೆದುಕೊಂಡು ಹೋದನು. ಅಲ್ಲಿ ವಿಕ್ಟೋರಿಯಾ ರಾಣಿಯ ಧರ್ಮಮಾತೃತ್ವದಲ್ಲಿ ಗೌರಮ್ಮನಿಗೆ ಕ್ರೈಸ್ತಮತ ದೀಕ್ಷೆ ಕೊಡಿಸಿದನು. ಈಕೆಗೆ ವಿಕ್ಟೋರಿಯಾ ಗೌರಮ್ಮನೆಂದು"[೧೧೪] ಹೆಸರಾಯಿತು.

ಲಿಂಗರಾಜನ ಹುಕುಂ ನಾಮೆಯು ಕೊಡಗು ಜಾತಿಯಲ್ಲಿ "ಹೆಣ್ಣು ತರಬೇಕಾದ್ರೆ, ಕೊಡಬೇಕಾದ್ರೆ ಕಂನೆ ಹೆಣ್ಣಾದ್ರೆ ಅವರ ಜಾತ್ತಿ ಕಟ್ಟಳೆ ಮೇರೆ ಮದುವೆ ಮಾಡಿಕೊಳ್ಳುವರು"[೧೧೫] ಎಂಬ ವಿವರವನ್ನು ಒದಗಿಸುತ್ತದೆ.

### ೨.೨.೪. ಪತ್ರಗಳು

ಸೋದೆ ಅರಸ ಬಸವಲಿಂಗರಾಜನ ತಂಗಿಯಾದ ಚೆನ್ನಮ್ಮಾಜಿಯವರು ಕೊಡಗಿನ ಮಹಾರಾಜರಿಗೆ ಬರೆದ ಕಾಗದ "ತಮಗೆ ಕುಮಾರ್ತಿ ಉಂಟು ಎಂತಾ ಕೇಳಿ ಇದ್ದೇನೆ. ಆ ಕುಮಾರತಿಯರನ್ನು ತಮ್ಮ ಅಣ್ಣಾಜಿಯವರಾದ ಬಸವಲಿಂಗರಾಜರವರಿಗೆ ವಿವಾಹ ಮಾಡಿಕೊಟ್ಟು, ಬಂಧುತ್ವ ಬಳಸುವಂಥಾ ಮಿತ್ರರ ಸಂಗಡ ಮಿತ್ರತ್ವವನ್ನು ಸಂಪಾದಿಸಿಕೊಟ್ಟು, ಇವರನ್ನು ಆರೈಕೆ ಮಾಡಬೇಕು ಎಂಬುದಾಗಿ ಬರೆದು ಕಳುಹಿಸಿದ್ದರು."[೧೧೬]

ಕಿತ್ತೂರಿನ ರಾಣಿ ಚೆನ್ನಮ್ಮಾಜಿ ಹಾಗೂ ಸೊಸೆ ಈರವ್ವ ಅವರು ಬ್ರಿಟಿಷ್ ಅಧಿಕಾರಿಗಳೊಂದಿಗೆ ಪತ್ರವ್ಯವಹಾರವನ್ನು ನಡೆಸಿರುವ ಉಲ್ಲೇಖಗಳು ಇವೆ. "ಚೆನ್ನಮ್ಮ ಹಾಗೂ ಈರಮ್ಮರು ಅಕ್ಟೋಬರ್ ೨೪ ಮತ್ತು ನವೆಂಬರ್ ೩೦ರ ನಡುವೆ ಕದನ ನಿಂತಾಗ ಸರ್ವಸಂಧಾನ ಪ್ರಯತ್ನಗಳು ವಿಫಲವಾದಾಗ, ಚಾಪ್ಲಿನ್‌ರು ಚೆನ್ನಮ್ಮನ ಬೇಡಿಕೆಯನ್ನು ತಿರಸ್ಕರಿಸಿದರು. ಆ ಸಮಯದಲ್ಲಿ ರಾಣಿಯು ರಕ್ತಪಾತವನ್ನು ತಪ್ಪಿಸಬೇಕೆಂದು ನವೆಂಬರ್ ೧೨ನೇ ದಿನಾಂಕದಂದು ಧಾರವಾಡದ ಅಧಿಕಾರಿ 'ಮನ್ರೋ'ಗೆ ಬರೆದ ಪತ್ರವು ರಾಣಿಯರ ಚಾರಿತ್ರಿಕ ಅಧ್ಯಯನಕ್ಕೆ ಪ್ರಮುಖ ದಾಖಲೆಯಾಗಿದೆ.[೧೧೭] ಈ ಪತ್ರದಲ್ಲಿಯ ಮನವಿಯು ಚಾಪ್ಲಿನ್‌ನಿಗೆ ಕೇಳಲಿಲ್ಲ.

ಹಾಗಾಗಿ ರಾಣಿಯು "ಮೊದಲಿನಿಂದಲೂ ನಾವು ಸ್ನೇಹಿತರಾಗೇ ಇದ್ದೇವೆ ಜನರಲ್ ವೆಲ್ಲಸ್ಲಿಗೆ ಸಹಾಯ ಮಾಡಿದ್ದೇವೆ. ಜನರಲ್ ಮನ್ರೋಗೆ ಮಿತ್ರರಾಗಿದ್ದೇವೆ. ನಮ್ಮ ಸಹಾಯವನ್ನು ಗಮನಿಸಿ ಮನ್ರೋ ಸನದನ್ನು ಕೊಟ್ಟು ಸಂಸ್ಥಾನದ ಸ್ವಾಯತ್ತತೆಯನ್ನು ಮನ್ನಿಸಿದನು. ಇಂದಿಗೂ ಈ ಸನದು ಜಾರಿಯಲ್ಲಿದೆ. ಹೀಗಿರುವಾಗ ಇತಿಹಾಸವನ್ನು ಮರೆತು, ಥ್ಯಾಕರೆ ಬಗ್ಗೆ ವಿಚಾರಿಸದೇ ಯುದ್ಧ ಸಾರಿದ್ದೀರಿ. ಹೇಳಿಕೇಳಿ ನಿಮ್ಮ ಸೈನ್ಯ ಪ್ರಬಲವಾದುದು. ನಮ್ಮ ಸಂಸ್ಥಾನ ಮುಂದುವರೆಸಿ ನಮ್ಮೊಡನಿರುವ ಸಾವಿರಾರು ಜನರ ಹಿತವನ್ನು ಕಾಪಾಡಿ ಕೀರ್ತಿಯನ್ನು ಪಡೆಯಿರಿ. ನಾವು ಯುದ್ಧವನ್ನು ಎಂದೂ ಬಯಸುವುದಿಲ್ಲ. ನಮ್ಮ ಈ ಸ್ನೇಹಭಾವನೆಗಳನ್ನು ಲಕ್ಷಿಸದೆ ನೀವು ವೈರ ಭಾವ ತಳೆದಿದ್ದೀರಿ. ನೀವು ಕೊಟ್ಟ ಎಚ್ಚರಿಕೆಯ ಅವಧಿ ಮುಗಿದೊಡನೆ ನಮಗೆ ಯಾವ ಮಾರ್ಗವಿದೆ. ನಿಮ್ಮ ಇಷ್ಟದಂತ ಆಗಲಿ ನಮ್ಮ ಸಂಸ್ಥಾನಕ್ಕೆ ಒಳ್ಳೆಯದನ್ನು ಮಾಡಿರಿ ಎಂಬುದೇ ನಮ್ಮ ಆಸೆ"[೧೧೮] ಎಂದು ಬರೆದ ಪತ್ರವು ಅತೀ ಮಹತ್ವದ ಪತ್ರವಾಗಿದೆ.

ಚಾಪ್ಲಿನ್ನನಿಗೆ ರಾಣಿ ಚೆನ್ನಮ್ಮ ಥ್ಯಾಕರೆಯ ನಡವಳಿಕೆಯನ್ನು ಕುರಿತು–ಸಂಸ್ಥಾನದ ಖಜಾನೆಗೆ ಬೀಗಮುದ್ರೆ ಹಾಕಿರುವುದನ್ನು, ಸಂಸ್ಥಾನಕ್ಕೆ ಚಿರಂಜೀವಿಯನ್ನು ದತ್ತು ಸ್ವೀಕರಿಸಿದ್ದರೂ, ಯಾವುದೇ ಅಧಿಕಾರ ಇಲ್ಲದಿರುವುದನ್ನು ಕುರಿತು ಬರೆದ ಪತ್ರವು ಮಹತ್ವದ್ದಾಗಿದೆ. "The Tyrany Exercised here becoming in supportable and feeling confident that you would relieve our pain and support our honour. we sent a vakeel to vepresent to Mr.Thackeray that he having taken charge of the treasury of samstan and prossessed himself of all the deeds and sunnuds and having appointed his mamlatdars. there was little advantage to us to remain in the samstan. that we had heard the promises of making arrangements for us but that is proceedings were of the nature described. that we begged there fore for permission to go to poona and Bombay for the attainment of our wishes and that failing in that quarter we proposed going to Banaras"[೧೧೯] ಎಂಬ ಪತ್ರವು ಎಲ್ಲ ತಪ್ಪು ಕಾರ್ಯಗಳಿಗೆ ಥ್ಯಾಕರೆಯೇ ಹೊಣೆ ಎಂಬುದಾಗಿ ತಿಳಿಸುತ್ತದೆ.

ಮನ್ರೋ ಒಪ್ಪಂದದಂತೆ ಕಿತ್ತೂರಿನವರು ಒಳ ಆಡಳಿತದಲ್ಲಿ ಸ್ವತಂತ್ರರೆಂಬ ವಾದ ರಾಣಿ ಚೆನ್ನಮ್ಮನದ್ದಾಗಿತ್ತು. ಆ ಪ್ರಕಾರ ಅನೇಕ ಪತ್ರಗಳನ್ನು ಬ್ರಿಟಿಷರಿಗೆ ಬರೆದಿದ್ದಾಳೆ. ಅವುಗಳಲ್ಲಿ ಕೆಲವು ಐತಿಹಾಸಿಕ ದೃಷ್ಟಿಯಿಂದ ಮಹತ್ವದ್ದಾಗಿವೆ. ಈ ಪತ್ರಗಳೆಲ್ಲ ಇಂದು ಇಂಗ್ಲೆಂಡಿನಲ್ಲಿ ಭಾರತದ ಅನೇಕ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಬಿದ್ದುಕೊಂಡಿವೆ. ಅದರಲ್ಲಿ ಸು.೭೦ ಪತ್ರಗಳು ವಿಶೇಷ ಮಹತ್ವದ್ದಾಗಿದೆ.

ಥ್ಯಾಕರೆಯ ಅಧೀನ ಸ್ಟೀವನ್‌ಸನ್‌ನು ಕಿತ್ತೂರಿನಿಂದ ೧೮೨೪ ಅಕ್ಟೋಬರ್ ೨೪ರಲ್ಲಿ ಬರೆದ ಪತ್ರವು ರಾಣಿ ಕಿತ್ತೂರಚೆನ್ನಮ್ಮನಿಂದ ತಮಗಾದ ನಷ್ಟವನ್ನು ವಿವರಿಸುತ್ತದೆ.

"For God's sake send a force immediatly without delay to kittur. The Artillary one out of to pieces- Mr.Thakaray supposed to be killed captain Black killed and cut to pieces. sewal expected to di-dighton killed and Thackaray's two assistants Blliot and stevenson not-heard of..."[೧೨೦] ಎಂದಿದೆ. ಹೀಗೆ ಅರಸರು ಹೊರಡಿಸಿದ ನಿರೂಪಗಳು ಪತ್ರವ್ಯವಹಾರಗಳು ಕೂಡ ಚಾರಿತ್ರಿಕ ಸಂಗತಿಗಳನ್ನು ಒಳಗೊಂಡ ಐತಿಹಾಸಿಕ ಮೌಲ್ಯಮಾಪನದಲ್ಲಿ ಸಹಕಾರಿಯಾಗಿವೆ.

**೨.೨.೫. ಬಖೈರುಗಳು**

ಇದು ಮೂಲತಃ ಮರಾಠಿಯಲ್ಲಿದ್ದರೂ ಕನ್ನಡದ ವೀರರ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. "ಬೆಳವಡಿಯ ದೇಸಾಯತಿ, 'ಲಾಲಬೀ' ಎಂದು ಚಿತ್ರಗುಪ್ತ ಬಖೈರು ಉಲ್ಲೇಖಿಸಿದೆ.

ರಾಣಿಯನ್ನು 'ಸೌಭಾಗ್ಯವತೀ ಸಾವಿತ್ರಿಯೆಂದು ಪಾಟೀಲತಿ' ಎಂದು ೯೧ ಕಲಮೀ ಬಖೈರನಲ್ಲಿ ಉಲ್ಲೇಖವಿದೆ. ಶೇಡಗಾಂವಕರ ಬಖೈರದಲ್ಲಿ 'ಮಲಪಾಈ' ಎಂದು ಕರೆದಿರುವರು. 'ಸಾವಿತ್ರಿ' ಎಂಬುದು ದುರುದ್ದೇಶದಿಂದ ಮಾಡಿದ ನಾಮಾಂಕಿತವಾಗಿರಬಹುದು. 'ಲಾಲಬೀ' ಎಂಬುದು ಕಿವಿ ತಪ್ಪಿನಿಂದ ಆಗಿರಬಹುದೆಂದು, ಪಾಟೀಲತಿ, ದೇಸಾಯತಿ ಎಂದು ಚಟ್ನೀಸ್ ಬಖೈರಿನಲ್ಲಿ ಉಲ್ಲೇಖವಿದೆ. ಎಂದು ಚೆನ್ನಕ್ಕ ಪಾವಟೆಯವರು ಹೇಳುತ್ತಾರೆ.

ಬೆಳವಡಿ ಮಲ್ಲಮ್ಮಾಜಿಯು ಶಿವಾಜಿಯೊಂದಿಗೆ ಯುದ್ಧ ಮಾಡಿದ ಬಗ್ಗೆಯೂ ಬಖೈರುಗಳು ಪ್ರಮುಖ ದಾಖಲೆಗಳೆನಿಸಿವೆ. "ಚಿತ್ರಗುಪ್ತ ಬಖೈರನಲ್ಲಿ ಯುದ್ಧವು ೨೭ ದಿನದವರೆಗೂ ೯೧ ಕಲಮೀ ಬಖೈರಲ್ಲಿ ಒಂದು ತಿಂಗಳು ನಡೆಯಿತೆಂದೂ, ಶಿವದಿಗ್ವಿಜಯ ಬಖೈರನಲ್ಲಿ ೨ವರೆ ತಿಂಗಳು ನಡೆಯಿತೆಂದೂ, ಚಟ್ನೀಸ್ ಬಖೈರು, ಶೇಡಗಾಂವಕರ ಬಖೈರುಗಳಲ್ಲಿ ೨೭ ದಿನದವರೆಗೆ ಯುದ್ಧ ನಡೆದ ಬಗ್ಗೆ ದಾಖಲೆಗಳು ದೊರೆಯುತ್ತವೆ."[೧೨೧]

**೨.೨.೬. ನಿರೂಪಗಳು**

ಗರಜಿನ ಚನ್ನವೀರಪ್ಪ ಒಡೆಯರಿಗೆ ಕ್ರಿಶ.೧೬೭೨-೯೭ರ ಅವಧಿಯಲ್ಲಿ ಚೆನ್ನಮ್ಮಾಜಿಯವರು ನೀಡಿದ ನಿರೂಪ–

"ದುಂದುಬಿ ಸಂವತ್ಸರದ ಶ್ರಾವಣ ಸು ೧೦ರಲ್ಲು ಶ್ರೀಮತ್ಕೆಳದಿ। ಚಂನಂಮಾಜಿಯವರು। ಗರಜಿನ ಚಂನ್ನವೀರಪ್ಪ ವಡೇರಿಗೆ ಶರಣು। ಅಪ್ಪಾಜಿ ಭಟರ ತಂಮ್ಮ ಲಿಂಗಂಣನ ಮೊಮ್ಮಗ ನರಸಂಣನು। ಹುಜೂರು ಬಂದು ಸಂತೆಬೆನ್ನೂರ ಸೀಮೆ ವಳಗಣ। ದೆವರಹಲಿ ರಂಗನಾಥ ದೇವರ್‍ರಿಗೆ। ಅಮರ ಮಾಗಣಿಯಾಗಿ। ನಡದು ಬರುತ್ತಾಯಿದ್ದ ದೇವರ ಹಳಿಮಾಗಣಿಯು। ಅರಮನೆ ಹವಾಲ್ಲು ಆಗಿ ಬರುತ್ತ ದೆ। ಯಿ ಸಿಮೆ ದಳಗನ। ದೇವರಮಾಗಣಿ"[೧೨೨] ಇತ್ಯಾದಿ ವಿವರಗಳಿವೆ.

**ಮುಂಭಾಗ**

ರಾಣಿ ಚೆನ್ನಮ್ಮಾಜಿಯು೧ "ಶ್ರೀಮತ್ಕೆಳದಿ ಚೆಂನಮಾಜಿಯವರೂ। ಚೆಂನವೀರವಡೆರ್‍ರಿಗೆ ಶರಣಾರ್ಥಿ ಸೀಮೊಗೆ ಭೀಮೇಶ್ವರದೇವರಲ್ಲಿ ನಿತ್ಯರುದ್ರಾಭಿಷೇಕದ ಉಪಾದಿಯನ್ನು ಶೆಶಾ

ಭಟ್ಟ ಮಾಡುತ್ತಿದಲ್ಲಿ ಕುಸ್ಕೂರ ವೆಂಕಟೇಶ ಆರಾಧ್ಯನು ಪೂರ್ವ ತನ್ನ ಉಪಾಧಿಯೆಂದು ಹುಜುರು ಬಂದು ಹೇಳಿ ಕೊಂಡ ಸಂಮಂದಾಯಿ

ಉಪಾಧಿಯನು ಆತನ ಮಗ ಶಂಕರನಾರಾಯಣಭಟ್ಟಗೆ ದುರ್ಮುಖಿ ಸಂವತ್ಸರದ ಅಧಿಕ ಪಾಲ್ಗುಣ ಬ ೯ ಯಲೂ ಕಟ್ಟ ಮಾಡಿಸಿ ಕಳಿಹಿಸಿಯಿದ್ದೆವೆ ಕಟ್ಟಲೆ

ಪ್ರಮಾಣಿ ಸಂಬಳವ ಕೊಡಿಸಿ ಉಪಾಧಿಯನೂ ಸಾಂಗವಾಗಿ ಮಾಡಿಸುತ್ತ ಬಾಹದಾಗಿ॥=॥

ದುರ್ಮುಖಿ ಸಂವತ್ಸರದ ಅಧಿಕ ಫಲ್ಗುಣ ಬ೯ಯಲ್ಲೂ ಶ್ರೀಮತ್ಕೇಳದಿ

ಚೆಂನಮಾಜಿಯವರು । ಸಬುನೀಸ್ ಕೃಷ್ಣಯ್ಯಗೆ ಬರೆಸಿ ಕಳುಹಿxxx(ತ್ರುಟಿತ)

ಕೊಡಲಿ ಬ್ರಂಮೆಶ್ವರ ದೇವರಲ್ಲಿ ಪವಮಾನಾಭೀಕ್ಷಿಕವಂನು ರಾಮಭಟ್ಟ ಮಾಡುತ್ತಿದ್ದಲ್ಲಿ

ಕುಸ್ಕೂರು ವೆಂಕಟೇಶ ಆರಾಧ್ಯನು ಪೂರ್ವ ತಂನ ಉಪಾಧಿxxx(ತ್ರುಟಿತ)

ಬೇಕೆಂದು ಹೂಜೂರು ಬಂದು ಕೆಳಿಕೊಂಡ ಸಂಮಂಧಾ ಆ ಉಪಾಧಿಯನು ಆತನ

ಅಂಣನ ಮಗ ತಿರುಮಲಭಟ್ಟಗೆ ಕಟ್ಟುಮಾxxx(ತ್ರುಟಿತ)

**ಹಿಂಭಾಗ**

xx(ತ್ರುಟಿತ)ಉಪಾಧಿಯಂನು ಯಿತನ ಕೈಯ್ಯ ಸಾಂಗವಾಗಿ ಮಾಡಿಸಿ ಕಟ್ಟಲೆ ಪ್ರಮಾಣಿ ಸಂಬಳವ ಕೊಡುತ್ತ ಬಾಹದು"[೧೨೩] ಎಂದು ನಿರೂಪ ಕಳಿಸಿದ ವಿವರಗಳಿವೆ.

ಅಲ್ಲದೆ "ರಾಣಿ ಚೆನ್ನಮ್ಮಾಜಿಯು ಹೊಂನಹಳಿ ಮಠದ ಸ್ವಾಮಿಗಳವರ ಪರವಾಗಿ ಬಂದು ಕರೂರು ಸೀಮೆಯಲ್ಲಿ ಮಠದ ಮಾದಾಲೆಯಾಗಿದ್ದ ಆಡಕಳಿನಾರ ಶಿಷ್ಯ ದೇವರಿಗೆ ಆ ಗ್ರಾಮದಿಂದ ಉತ್ತಾರವಾಗಿದ್ದ ಸ್ವಾಸ್ತಿಗೆ ಹೆಚ್ಚು ಹಣ ತೆಗೆದುಕೊಳ್ಳದಂತೆ ಬಸವಯ್ಯನಿಗೆ ನಿರೂಪ"[೧೨೪] ಕಳಿಸಿದಳೆಂದು, "ರಕ್ತಾಕ್ಷಿ ಸಂವತ್ಸರದ ಮಾರ್ಗಶಿರ ಶುದ್ಧ ರಲ್ಲು ಶ್ರೀಮತ್ ಕೆಳದಿ ಚಎನ್ನಮ್ಮಾಜಿಯವರು ಶಿದ್ದ ಬಸಪ್ಪಯ್ಯನಿಗೆ ಬರೆಸಿ ಕಳೂಹಿದ ಕಾರ್ಯ–ಕುಂದಾಪುರದಲ್ಲಿ ಚನ್ನಕೇಶವ ದೇವರಿಗೆ ದೇವಸ್ಥಾನವ ಕಟ್ಟಿಸಿ ಪ್ರತಿಷ್ಠೆ ಮಾಡಿದ್ದು ಅದಕ್ಕೆ ಸ್ವಾಸ್ತಿಯಿಲ್ಲದ ಕಾರಣ, ಮುಗುವಿನ ಸೀಮೆ ಮುಡಕುದರಿ ಕಂಮ್ಮರ ಕೊಡಲು ಕಂಚುಗೌಡ ವಾಂಣಲಾದಿ, ಕೋಡಿ ಗ್ರಾಮದಲ್ಲಿ ಪ್ರಾಕು ನಷ್ಟಕ್ಕೆ ಕಳೆದ ಭೂಮಿಯಿದ್ದು, ಆದ ಪಾಲಿಸಿಕೊಂಡು, ಆ ಭೂಮಿಯಲ್ಲಿ ತೆಂಗಿನ ಸಸಿ, ಬಾಳೆ ಹಾಕಿಸಿ, ಸಾಗು ಮಾಡಿಕೊಂಡು ದೇವತಾ ಸೇವೆ ಮಾಡಿಕೊಂಡು ಬರುವೆ ನೆಂದು ಸಾಗು ಮಾಡಿಕೊಂಡು ಆದ ಹುಟ್ಟುವಳಿ ಆದಾಯದಿಂದ ದೇವತಾ ಸೇವೆಯನ್ನು ಸಾಂಗವಾಗಿ ನಡೆಸಿಕೊಂಡು ಬರುವಮ್ತೆ ಅದನ್ನು ಚನ್ನಕೇಶವ ದೇವರಿಗೆ ಸ್ವಾಸ್ಥೆ ಬಿಡಲಾಗಿದೆ. ಇದನ್ನು ರೇಖೆ ಪ್ರಮಾಣ ಭೂಮಿಯನ್ನು ವಿಂಗಡಿಸಿಕೊಟ್ಟು, ಶಾನುಭೋಗನ ಕಡತಕ್ಕೆ ಬರೆಸಿ ಅದನ್ನು ರಾಯನಿಗೆ ಕೊಡುವುದು"[೧೨೫] ಎಂಬ ವಿವರಗಳಿವೆ.

ಕೆಳದಿ ವೀರಮ್ಮಾಜಿಯ ಕಾಲದ ನಿರೂಪವೊಂದು ಸು.೧೭೫೭-೧೭೬೩ರ ಕಾಲದ್ದಾಗಿದ್ದು, ವೀರಮ್ಮಾಜಿಯ ಜೊತೆಗೆ ಸೋಮಶೇಖರ ನಾಯಕನು ಆಡಳಿತ ನಡೆಸಿದ ಬಗ್ಗೆ ದಾಖಲಿಸುತ್ತದೆ. "ಶ್ರೀಮದಭಿನವ ಸಚ್ಚಿದಾನಂದ ಭಾರತಿ ಸ್ವಾಮಿಗಳವರಿಗೆ ಬಿದರೂರಿಗೆ ಬಂದಾಗ ನಂಮ

ಮಾತೃಗಳಾದ ವೀರಮ್ಮಾಜಿ ಅಮನವರು ಕೊಟ್ಟ ಸ್ಫಟಿಕದ ಚಂನವಿರರಾಜೇಶ್ವರ ದವಿವರು ರತ್ನಮಯ ವೇಣುಗೋಪಾಲಕೃಷ್ಣ ದೇವರಿಗೆ ಸಹ ಅಮ್ರುತಪಡಿ ನಂದಾದೀಪ್ತಿ ಮುಂತಾದವನ್ನು ಶೃಂಗೇರಿ ಮಠಕ್ಕೆ ದಾನವಾಗಿ ನೀಡಿದ"[೧೨೭] ಉಲ್ಲೇಖಗಳಿವೆ.

## ೨.೩. ಪ್ರವಾಸಿ ವರದಿಗಳು

ಪುರಾತನ ಕಾಲದಿಂದಲೂ ಭಾರತಕ್ಕೆ ಹಲವಾರು ವಿದೇಶಿಯರು ವಿವಿಧ ದೇಶಗಳಿಂದ ಬಂದು ತಾವು ಕೇಳಿ, ತಿಳಿದುಕೊಂಡ, ನೋಡಿದ ಸಂಗತಿಗಳೆಲ್ಲವನ್ನು ಒಂದೆಡೆಗೆ ಬರೆದಿಡುವ ರೀತಿಯೇ ದಾಖಲೆಗಳ ರೂಪದಲ್ಲಿ ಇಂದು ನಮಗೆ ಐತಿಹಾಸಿಕ, ಚಾರಿತ್ರಿಕತೆಯನ್ನು ತಿಳಿಯುವಲ್ಲಿ ಸಹಕಾರಿಯಾಗಿದೆ ಎನ್ನಬಹುದು. ವಿದೇಶಿಯರ ಅಭಿಪ್ರಾಯಗಳು ಕೇವಲ ನಾಡಿನ ಚರಿತ್ರೆಯನ್ನು ಕಟ್ಟುವುದಲ್ಲದೆ ನಮ್ಮ ನೆರೆಯ ರಾಜ್ಯದ ಧಾರ್ಮಿಕ ಚರಿತ್ರೆಯನ್ನು ಕಟ್ಟಲು ಸಹಕಾರಿಯಾಗಿದೆ. ಉದಾಹರಣೆಗೆ ಮಹಾರಾಷ್ಟ್ರದ ಧಾರ್ಮಿಕ ಚರಿತ್ರೆಯನ್ನು ಹೇಳುವ ಕೃತಿಗಳು, ಚಿಂತಾಮಣಿ ಢೇರೆಯವರ ದತ್ತ ಸಂಪ್ರದಾಯದ ಇತಿಹಾಸ, ಶಿವಾಜಿಯ ಮೂಲ ಕನ್ನಡ ನೆಲ ಇತ್ಯಾದಿ. ವಿದೇಶಿ ಪ್ರವಾಸಿಗರು ಕರ್ನಾಟಕವನ್ನು ಸುತ್ತಾಡಿ ನಮ್ಮ ನಾಡಿನ ಜನರ, ಜನಜೀವನದ ಬಗೆಗೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತಾರೆ. ಫ್ರೆಂಚ್ ಪ್ರವಾಸಿ ಫ್ರಾಂಕಾಯ್ ಪೈರಾರ್ಡ, ಇಂಗ್ಲಿಷ್ ಪ್ರವಾಸಿ ಜಾನ್ ಫ್ರಾಯರ್, ಅಲೆಕ್ಸಾಂಡರ್ ಹ್ಯಾಮಿಲ್ಟನ್, ಪೀಟರ್ ಮಂಡಿ, ಪೆಟ್ರಾಡೆಲ್ಲಾವೆಲ್ಲಿ, ಲುಡೊವಿಕೊ ವರ್ಥಮ ಬಾರ್ಬೊಸ್, ಪಿಂಕರ್ಟನ್, ಫ್ರಾನ್ಸಿಸ್ ಬುಕನನ, ನಿಕೊಲೊ ಮನೂಚಿ, ಜಾರ್ಜ್ ರೋಡ್ರಿಗ್ಸ್, ಫ್ರಾನ್ಸಿಸ್ ರಾಬ್ಬನ್, ಜಾಕೋಬ್ಸ್, ಕ್ಯಾಂಟರ್, ವಿಶಚರ್ ಇತ್ಯಾದಿ ಪ್ರವಾಸಿಗರ ವರದಿಗಳು ರಾಣಿಯರ ಇತಿಹಾಸ ನಿರ್ಮಿಸುವಲ್ಲಿ ಸಹಕಾರಿಯಾಗಿವೆ.

ಕರ್ನಾಟಕ ದೇಶದ ರಾಜಧಾನಿಯಾದ ಕೆಳದಿಯ ಪಶ್ಚಿಮ ಘಟ್ಟಗಳ ಸೌಂದರ್ಯವು 'ಇಟಲಿಯ ಅಪೆನ್ವಿನ್ ಪರ್ವತವನ್ನು ಹೋಲುತ್ತದೆಂದು'[೧೨೮] ಡೆಲ್ಲಾವೆಲ್ಲಿಯು ದಾಖಲಿಸಿದ್ದಾನೆ. ಕೆಳದಿ ರಾಜ್ಯ, ಕೆಳದಿ ಅರಸರು, ಶಿವಪ್ಪನಾಯಕನ ಶಿಸ್ತು ಹಾಗೂ ಕೆಳದಿ ರಾಣಿ ಚೆನ್ನಮ್ಮ ಆಡಳಿತ ನಿರ್ವಹಿಸಿದ ಬಗೆಯನ್ನು ದಾಖಲಿಸಿದೆ.[೧೨೯] "ಕನೋರದ ರಾಜನಾದ ಶಾಮ್ ಶಂಕರನಾಯಕನನ್ನು ಸರದಾರರು ಕೊಲೆ ಮಾಡಿದ ಮೇಲೆ ಆತನ ವಿಧವೆಯು ಚಿಕ್ಕ ವಯಸ್ಸಿನ ಮಗ ಬಸಪ್ಪನಾಯಕನ ಹೆಸರಿನಲ್ಲಿ ರಾಜ್ಯವಾಳುತ್ತಿದ್ದಾಳೆ. ಅವಳ ಬೆಂಬಲಕ್ಕೆ ತಿಮ್ಮನಾಯಕ ನೆಂಬುವವನು ಇದ್ದಾನೆ. ಬಿದನೂರಿನ ರಾಜ್ಯ ವಿಸ್ತಾರದ ಬಗ್ಗೆ ವಿವರವಿದೆ. ಹೊನ್ನವರದ ಕೋಟೆಯು ಸುಭದ್ರವಾದುದೆಂದೂ, ಮಿರ್ಜಾನದಲ್ಲಿ ಹಳೆಯದಾದರೂ ಸೊಗಸಾದ ೨ ಸುತ್ತಿನ ಕೋಟೆಯೂ, ಅಗಳು ಇವೆ. ಎತ್ತರವಾದ ಬುರುಜುಗಳಿವೆ. ಮೂರ್ ಗೌರ್ನರನ ಮೋಸದಿಂದಾಗಿ ಈ ಕೋಟೆಯು 'ಕರ್ನಾಟಕ ರಾಣಾ'(ಬಿದನೂರ ಶಿವಪ್ಪನಾಯಕ)ನ ಅಧೀನದಲ್ಲಿದೆ. ಊರಿನಲ್ಲಿ

ದೊಡ್ಡ ಬಜಾರ ಬೀದಿಯೂ ಇದೆ"[೧೩೦] ಎಂಬುದಾಗಿ ಕ್ರಿ.ಶ.೧೬೭೬ರಲ್ಲಿ ಪಶ್ಚಿಮ ಕರಾವಳಿಗೆ ಭೇಟಿ ನೀಡಿದ್ದ ಜಾನ್‌ಪ್ರೈರನು ದಾಖಲಿಸಿದ್ದಾನೆ. ಕೆಳದಿಯು ಅತಿಥಿ ಸತ್ಕಾರದಲ್ಲಿ ಮುಂಚೂಣಿಯಲ್ಲಿತ್ತು. ಪರದೇಶದಿಂದ ಬರುವ ವಿದೇಶಿಗರನ್ನು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಾಗಿಸಲು, ಅವರ ಸಾಮಾನುಗಳನ್ನು ಹೊತ್ತುಕೊಂಡು ಹೋಗಲು ರಾಜ್ಯದಲ್ಲಿ ಪಲ್ಲಕ್ಕಿಯ ವ್ಯವಸ್ಥೆ ಇತ್ತೆಂದು ಪಿಯಟ್ರೊಡೆಲ್ಲವೆಲ್ಲಿಯು ತಿಳಿಸುತ್ತಾನೆ. "ಬಿದನೂರಿಗೆ ಆಗಮಿಸಿದ ಪ್ರವಾಸಿಗರಲ್ಲಿ ಜೆಮೆಲ್ಲಿ ಕರೇರಿಯೂ ಒಬ್ಬನು. ಈತನು "ಸೊಂದೆ-ಕಿರಣಿ ಕರಾಜ(ಸೊಂದೆರಾಜ) ಎಂಬ ಸದಾಶಿವನಾಯಕನು ಆಳುವಾಗ ಸಿರಸಿ ತಾಲ್ಲೂಕಿನ ಸೋದೆಯನ್ನು ತಲುಪಿದನು. ಕರೇರಿಯೂ ಭಾರತೀಯ ಲಿಂಗಪೂಜೆಯನ್ನು "ಹಿಂದೂಗಳ ದೇವಸ್ಥಾನದಲ್ಲಿ ನಾನಾ ಬಗೆಯ ವಿಗ್ರಹಗಳಿವೆ. ನೋಡುವುದಕ್ಕೆ ಅಸಹ್ಯವಾದ, ದುಂಡಾದ ಕರಿಕಲ್ಲನ್ನು(ಲಿಂಗ) ಪೂಜಿಸುವ ಜನ ಇದ್ದಾರೆ"[೧೩೧] ಎನ್ನುತ್ತಾರೆ. "ಕರ್ನಾಟಕ ದೇಶವು ಕರಾವಳಿಯಲ್ಲಿರುವ ಗಂಗಾವಳಿಯಿಂದ ಮಲಬಾರಿನ ಜಾವೋರಿನ ದೇಶದವರೆಗೂ ರಾಜ್ಯ ವಿಸ್ತರಿಸಿಕೊಂಡಿತ್ತೆಂಬುದನ್ನು ಜಾನ್‌ಫ್ರೈಯರ್‌ನು ಹೇಳುತ್ತಾನೆ.

ಇಕ್ಕೇರಿಯ ವೆಂಕಟಪ್ಪ ನಾಯಕನ ಪತ್ನಿಯಾದ ಭದ್ರಮ್ಮಾಜಿಯ ಬಗ್ಗೆ ವಿವರವಿದೆ. ಭದ್ರ ಅಮಾ(Badr-Ama-Badramma) ಲಿಂಗವಂತ ಮನೆತನದ ಶ್ರೀಮಂತ ಮಗಳು. ಅಮಾ ಎಂದರೆ ರಾಣಿ, ಒಡತಿ ಎಂದರ್ಥ. "ವೆಂಕಟಪ್ಪ ನಾಯಕನು ಮೂರು ಅಂದರೆ ಮುಸಲ್ಮಾನ ಹೆಂಗಸೊಬ್ಬಳಲ್ಲಿ ಅನುರಕ್ತನಾದಾಗ, ರಾಣಿ ಭದ್ರಮ್ಮಾಜಿಯು ಹೆಂಡ ಕುಡಿದು ಖಂಡ ತಿನ್ನುವ ಮೂರ್ ಹೆಂಗಸಿನ ಸಹವಾಸ ಬೆಳೆಸಿ ತನ್ನ ಕುಲವನ್ನು ಕೆಡಿಸಿಕೊಂಡಿದ್ದು ತಪ್ಪೆಂದು ಬುದ್ಧಿಮಾತನ್ನು ಹೇಳಿದಳು. ಅಲ್ಲದೆ ತನಗೂ, ಪತಿಗೂ ಯಾವುದೇ ಸಂಬಂಧವಿಲ್ಲೆಂದು ಹೇಳಿದಳು. ಹಾಗೆ ಪಾಲಿಸಿದಳು"[೧೩೨] ಎಂಬುದಾಗಿ ಇಟಲಿಯ ಪ್ರವಾಸಿ ಪಿಯಟ್ರೊ ಡೆಲ್ಲವೆಲ್ಲಿಯು ದಾಖಲಿಸಿದ್ದಾನೆ. ಪೋರ್ಚುಗೀಸ್ ವೈಸರಾಯ್ ಮತ್ತು ಅಧಿಕಾರಿಗಳು ತಮ್ಮ ಸರ್ಕಾರಕ್ಕೆ ಕಳುಹಿಸಿದ ವರದಿಗಳು ಉಪಯುಕ್ತವಾಗಿವೆ. ಬೊಂಬಾಯಿ ಪತ್ರಾಗಾರದಲ್ಲಿರುವ ೧೨ನೇ ಪತ್ರವು ವೀರಮ್ಮಾಜಿಯು ದತ್ತು ಪುತ್ರನನ್ನು ಕೊಲ್ಲಿಸಿದಳೆಂಬ ಮಾಹಿತಿಯನ್ನು ನೀಡುತ್ತದೆ. ೧೩, ೧೪, ೧೫ನೇ ಪತ್ರವು ವೀರಮ್ಮಾಜಿ ಸರ್ಕಾರವು ಪ್ರಜೆಗಳಿಗೆ ವಿಧಿಸಿದ ಅಧಿಕ ತೆರಿಗೆ, ಆರ್ಥಿಕ ಮುಗ್ಗಟ್ಟಿನಿಂದ ದಿವಾಳಿಯಾದುದನ್ನು ತಿಳಿಸುತ್ತದೆ. ಇಟಲಿಯ ಪ್ರವಾಸಿಯಾದ ಪೀಟರ್ ಮಂಡಿಯು "Not improperly bee styled master of Roules, the records office is belivered to have been destroyd in 1763. when hyder Alikahan of Mysore attacked Ikkeri. The last Ruler queen Virammaji is alleged to have set fire to the palace before taking to flight"[೧೩೩] ಕಾರವಾರದಲ್ಲಿ ಕೋಟೆಗಳನ್ನು ಕಟ್ಟಿಕೊಳ್ಳಲು ರಾಣಿ ವೀರಮ್ಮಾಜಿಯು ಇಂಗ್ಲಿಷರಿಗೆ

ಅನುಮತಿ ನೀಡಿದ ಬಗ್ಗೆಯೂ ಉಲ್ಲೇಖವಿದೆ. "ಹೈದರನು ಪೀರ್ ಜಾವೇದ್ ಎಂಬುವನ ಮೂಲಕ ರಾಣಿಯನ್ನು ಮೋಸದಿಂದ ಸೆರೆ ಹಿಡಿದು ಮಧುಗಿರಿಯ ಕೋಟೆಯಲ್ಲಿಟ್ಟನು."[೧೩೪] ೧೮ನೇ ಶತಮಾನದಲ್ಲಿ ಸಣ್ಣ ಪುಟ್ಟ ಪಾಳೇಯಪಟ್ಟುಗಳು ತಲೆ ಎತ್ತಲಾರಂಭಿಸಿದವು. ಇಂಗ್ಲೀಷ ಗೌರ್ನರ್ ಜನರಲ್ ಮ್ಯಾಥ್ಯೂವ್ಸ್ ಮೈಸೂರಿನ ಉತ್ತರ ಭಾಗದಲ್ಲಿದ್ದ ಬಿದನೂರಿನ ಮೇಲೆ ದಾಳಿ ಮಾಡಲಾರಂಭಿಸಿದನು. ಆದರೆ ಆಗ ಬಿದನೂರು ೧೭೬೩ರಲ್ಲಿ ಹೈದರನ ವಶವಾಗಿತ್ತು. ಹೈದರನು ಬಿದನೂರನ್ನು ರಾಜಧಾನಿಯನ್ನಾಗಿಸಿಕೊಂಡು ಹೈದರನಗರವೆಂದು ಹೆಸರಿಟ್ಟನು."[೧೩೫]

"The queen and her adopted son someshekher nayak III were seized and transported as prisoners to Madhugiri in tumakur District"[೧೩೬] ಎಂದು ಕರ್ನಾಟಕ ರಾಜ್ಯ ಗೆಝೆಟಿಯರ್‌ನಲ್ಲಿ ಉಲ್ಲೇಖವಿದೆ.

ಫ್ರಾನ್ಸಿಸ್ ಬುಕಾನನ್ ವರದಿಯು ಕೂಡ ಸೋದೆ ಅರಸರ ಕಾಲದ ಐತಿಹಾಸಿಕ ವಿವರ ಗಳನ್ನು ಒದಗಿಸುತ್ತದೆ. ಈಗ ಸ್ವತಃ ಸೋದೆಯಲ್ಲಿ ಮಠಗಳನ್ನು ಸಂದರ್ಶಿಸುತ್ತಾನೆ. ಸುತ್ತಮುತ್ತಲಿನ ಪ್ರದೇಶಗಳ ಬಗ್ಗೆಯೂ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತಾನೆ. ಇವಲ್ಲದೆ ಮದರಾಸಿನ ರಾಜ್ಯಪಾಲನಾಗಿದ್ದ ಆನಂದರಂಗ ಪಿಳ್ಳೆಯು ದಿನಾಂಕ ೩೧-೮-೧೭೫೨ರಂದು ತಮಿಳು ದಿನಚರಿಯಲ್ಲಿ ಕೆಳದಿ ರಾಣಿಯ ಬಗೆಗೆ ವಿವರವನ್ನು ದಾಖಲಿಸಿದ್ದಾರೆ. "He the said that tomorrow some one must receine the Bidnur(KELADI) vakil, bring him in and arrange a loading for him. I observed that in was not fitting for me to go out to meet him, but that Madanananda pandit, or some one else might be set. He then told Madanananda pandit to go. He replied, "KELADI is a large state and should be treated with as much respect as the Raja of Mysore" so he told me to receive and being him in. being un willing to oppose him, I agreed and come home."[೧೩೭]

ಕೊಡಗಿನ ಚಿಕ್ಕವೀರರಾಜೇಂದ್ರ, ದೊಡ್ಡವೀರರಾಜೇಂದ್ರ, ರಾಣಿ ಮಹದೇವಮ್ಮಾಜಿ, ನೀಲಮ್ಮಾಜಿ, ರಾಜಮ್ಮಾಜಿ, ಲಿಂಗರಾಜೇಂದ್ರ, ದೇವಮ್ಮಾಜಿ, ಗೌರಮ್ಮ ರಾಣಿಯರ ಬಗೆಗೆ ಐತಿಹಾಸಿಕ ವಿವರಗಳನ್ನು ದಾಖಲಿಸಿದೆ. "ಕ್ರಿ.ಶ.೧೮೦೯ರ ಜೂನ್ ೮ಕ್ಕೆ ದೊಡ್ಡವೀರರಾಜೇಂದ್ರನು ತನ್ನ ೯-೧೦ವರ್ಷದ ರಾಜಕುಮಾರಿ ದೇವಮ್ಮಾಜಿಗೆ ರಾಜಮುದ್ರೆಯನ್ನು ಒಪ್ಪಿಸಿ ಶಿವಾಧೀನನಾದನೆಂದು"[೧೩೮] ಉಲ್ಲೇಖವಿದೆ. ಕ್ರಿ.ಶ.೧೮೦೯ರಿಂದ ದೊಡ್ಡವೀರ ರಾಜೇಂದ್ರನ ಸ್ವಭಾವದಲ್ಲಿ ಬದಲಾವಣೆಗಳಾದವು. ತನ್ನ ಪ್ರೀತಿಯ ಪತ್ನಿ "ಮಹದೇವಮ್ಮಾಜಿಯು ಸತ್ತಿದ್ದು, ಯಾರೋ ಮಾಡಿದ ಮಾಟ ಮಂತ್ರದಿಂದಲೇ ಎಂದೂ, ತನ್ನ ಸುತ್ತಲೂ ಗುಪ್ತ ಶತ್ರುಗಳಿದ್ದು,

ತನ್ನನ್ನು ಕೊಲ್ಲಲು ಪ್ರಯತ್ನಿಸುತ್ತಿದ್ದಾರೆಂಬ ಸಂಶಯ ಭಾವನೆಯು ದೊಡ್ಡ ವೀರರಾಜೇಂದ್ರನಲ್ಲಿ ಮನೆ ಮಾಡಿತ್ತು"[೧೩೬] ಎಂಬುದಾಗಿ ಮೊಗ್ಲಿಂಗ್ ದಾಖಲಿಸಿದ್ದಾನೆ.

### ೨.೪. ಸ್ಮಾರಕಗಳು

ಒಂದು ನಾಡಿನ ಕಲಾಸ್ಮಾರಕಗಳಾದ ದೇವಾಲಯಗಳು, ಕೋಟೆ–ಕೊತ್ತಲುಗಳು, ಮಠಗಳು, ಅಗ್ರಹಾರಗಳು, ಕೆರೆ–ಕಟ್ಟೆಗಳು, ಸಮಾಧಿಗಳು ಸಾಮಾಜಿಕ, ಧಾರ್ಮಿಕ ಜೀವನದ ಕೈಗನ್ನಡಿಗಳಾಗಿವೆ. ಕರ್ನಾಟಕದಲ್ಲಿ ಸ್ಮಾರಕ ಶಿಲೆಗಳ ಶಿಲ್ಪವನ್ನು ಅದರ ಮಹತ್ವವನ್ನು ಕುರಿತು ವಿಶ್ಲೇಷಣೆ ಮಾಡಿದವರು ಎಚ್.ಕಜಿನ್ಸ್ 'chalukyan Architecture' ಎಂಬ ಕೃತಿಯನ್ನು ಇವರು ರಚಿಸಿದರು. ಶಾಸನಶಿಲ್ಪ ಹಾಗೂ ವೀರಗಲ್ಲುಗಳ ಬಗ್ಗೆ ವಿವೇಚನೆ ಮಾಡಿದರು. ಸ್ಮಾರಕಗಳು "ಮಾನವನ ಜೀವನದ ಕಥೆಯಾಗಿದೆ. ಅದರ ಆದಿಯು ಇತಿಹಾಸದ ಬೆಳಕಿನಿಂದಾಚೆಗಿನ ಅಜ್ಞಾನದ ಕತ್ತಲಲ್ಲಿ ಅವಿತುಕೊಂಡಿದೆ. ಅದಕ್ಕೆ ಕೊನೆಯಿರುವುದೋ ಇಲ್ಲವೊ ಹೇಳುವುದು ಸಾಧ್ಯವಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಗತಕಾಲದ ಅರಿವು ವರ್ತಮಾನಕ್ಕೆ ದಾರಿದೀವಿಗೆಯಂತೆ; ಆ ಅರಿವು ಇದ್ದರೆ ಮಾತ್ರ ನಾವು ಮುಂದಿನ ಪೀಳಿಗೆಗೆ ಮಾರ್ಗ ತೋರಿಸಬಲ್ಲೇವು" ಎಂಬುದಾಗಿ ಡಾ.ಆರ್.ಶೇಷಶಾಸ್ತ್ರಿ ಅಭಿಪ್ರಾಯಪಡುತ್ತಾರೆ. ಇದು ಸತ್ಯವೂ ಕೂಡ.

"ಗತಿಸಿ ಹೋದ ಮಾನವನನ್ನು ಸಮಾಧಿ ಮಾಡಿದ ನಿರ್ಧಿಷ್ಟ ಸ್ಥಳದ ಗುರುತಿಗಾಗಿಯೋ, ಮಡಿದವನ ಸ್ಮರಣ ಬರುವಂತೆಯೋ, ಕೆಲವರು ಸಂಕೇತಗಳನ್ನು, ಗುರುತುಗಳನ್ನು ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ದೇಶಗಳಲ್ಲಿ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಠೆಯನ್ನನುಸರಿಸಿಯೇ ಬೆಳೆದಿದೆ. ಬೃಹದಾಕಾರದ ಪಿರಮಿಡ್ಡುಗಳಿಂದ ಹಿಡಿದು ಸಣ್ಣ ಪುಟ್ಟ ಕಲ್ಲುಗಳವರೆಗೂ ಇವುಗಳ ವ್ಯಾಪ್ತಿಯನ್ನು ಗುರುತಿಸಬಹುದು. ಹಾಗೆಯೇ ಪ್ರಾಗೈತಿಹಾಸಿಕ ಕಾಲದ ಕಲ್ಲಿನ ಮನೆಗಳಿಂದ ಹಿಡಿದು ಅಮೃತ ಶಿಲೆಗಳಿಂದ ನಿರ್ಮಿಸಿದ ಉನ್ನತ ನಾಗರಿಕತೆಯ ಶ್ರೇಷ್ಠ ವಾಸ್ತುವಿನವರೆಗೂ ಇದರ ವೈಭವವನ್ನು ಗುರುತಿಸಬಹುದು. ಈ ಕಾರಣದಿಂದಾಗಿ ಸ್ಮಾರಕ ಶಿಲೆಗಳು ಮಾನವ ಜೀವನ ವಿಧಾನ, ಅಂದಿನ ನಾಗರಿಕತೆ ಮತ್ತು ಸಂಸ್ಕೃತಿಯ ಪ್ರತೀಕಗಳಾಗಿವೆ.

ನಮ್ಮ ಭಾರತೀಯ ಶಿಲ್ಪಕಲಾ ಸ್ಮಾರಕಗಳು ಬಹುಪಾಲು ಕಲ್ಲುಗಳೇ ಆಗಿವೆ. ಭಾರತದಲ್ಲಿ ಶಿಲೆಗಳ ಆರಾಧನೆಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಅಲ್ಲದೆ ಶಿಲೆಗಳು ನಮ್ಮ ಸುತ್ತಮುತ್ತಲ ಪರಿಸರದಲ್ಲಿ ಸಹಜವಾಗಿ ದೊರೆಯುವ ಹಾಗೂ ತಮ್ಮ ಸಹಜ ಆಕೃತಿಗಳಿಂದ ಜನರಲ್ಲಿ ಒಂದು ಬಗೆಯ ಪೂಜ್ಯನೀಯ ಭಾವನೆ ಮೂಡಿಸುವಂಥವುಗಳು. ಸ್ಮಾರಕಗಳು ಹೇಗಿರಬೇಕು? ಅವುಗಳ ಗಾತ್ರ ಎಷ್ಟಿರಬೇಕು? ಯಾವ ಪ್ರಕಾರದಲ್ಲಿರಬೇಕು? ಎಂಬ ಇತ್ಯಾದಿ ನಿಯಮಗಳೇನು

ಇಲ್ಲ. ಇದು ಆಯಾ ಜನಾಂಗದ, ಆಯಾ ವ್ಯಕ್ತಿಗಳ ಸಂಸ್ಕೃತಿಯನ್ನು ಅವಲಂಬಿಸಿದೆ. ನಮ್ಮ ಹಳ್ಳಿಗರ ಮುಗ್ಧ ಧಾರ್ಮಿಕ ಭಾವನೆಗೆ ಬೀದಿಯಲ್ಲಿ ಬಿದ್ದ ಕಲ್ಲು ಪೂಜೆಗೆ ಒಳಗಾಗಿ ದೇವರ ಸ್ವರೂಪವನ್ನು ಪಡೆದಿರುವುದನ್ನು ಕಾಣುತ್ತವೆ. ಹೀಗೆ ಸತ್ತ ವ್ಯಕ್ತಿಯನ್ನು ಪ್ರತಿನಿಧಿಸಲು ಅವನ ಹೆಸರಿನಲ್ಲಿ ನಿಲ್ಲಿಸಿದ ಸ್ಮಾರಕ ಮಾತ್ರ ಸ್ಮಾರಕವಲ್ಲ. ಅವರು ನಡೆದಾಡಿದ ಸ್ಥಳಗಳು, ಜಾಗ, ಅವು ಉಪಯೋಗಿಸುತ್ತಿದ್ದ ಆಯುಧಗಳು, ಅವನು ನಿರ್ಮಿಸಿದ ಕೆರೆ-ಕಟ್ಟೆ, ದೇವಾಲಯ, ಕೋಟೆ, ಕೊತ್ತಲಗಳೆಲ್ಲವು ಸ್ಮಾರಕಗಳಾಗುತ್ತವೆ.

ಮಹಿಳೆಯ ಪಾತಿವ್ರತ್ಯ ಗುಣ ಇತಿಹಾಸದುದ್ದಕ್ಕೂ ಮೆಚ್ಚಿಕೊಂಡು ಬಂದ ಮೌಲ್ಯವಾಗಿದೆ. ಮಹಿಳೆಯ ಪಾತಿವ್ರತ್ಯದ ಪ್ರತೀಕವಾಗಿ 'ವೀರಮಾಸ್ತಿ' ಕಲ್ಲುಗಳು ನೆಲೆನಿಂತವು. ಹಾಗೆಯೇ ಗಂಡಸಿನ ಏಕಪತ್ನಿವ್ರತವನ್ನು ಮೆಚ್ಚಿಕೊಂಡು ಬಂದ ಅನೇಕ ಶಾಸನಗಳು "ಪುರುಷರನ್ನು 'ಪರನಾರೀ ಸೋದರ' ಎಂದು ಹೊಗಳಿರುವುದನ್ನು ಕಾಣುತ್ತೇವೆ. ಕುಮಾರರಾಮ ವೀರವ್ರತವನ್ನು ತೊಟ್ಟು, ತನ್ನ ನಾಶವಾದರೂ ಅಂಜದೆ, ಅಳುಕದೆ, ತನ್ನ ಆದರ್ಶವನ್ನು ಎತ್ತಿಹಿಡಿದ 'ಪರನಾರೀ ಸೋದರನೆ' ಆಗಿದ್ದಾನೆಂಬುದನ್ನು ಮರೆಯುವಂತಿಲ್ಲ.

'ಯುದ್ಧದಲ್ಲಿ ಗೆದ್ದರೆ ರಾಜ್ಯ, ಸತ್ತರೆ ಸ್ವರ್ಗ' ಎಂಬ ಆದರ್ಶವನ್ನು ತಮ್ಮ ಜೀವನದ ಉಸಿರಾಗಿಸಿಕೊಂಡ ವೀರಯೋಧರು ಬಂದರೆ ಕ್ಷತ್ರಿಯ(ವೀರ) ಸಾವು ಬರಲಿ, ಹೇಡಿಗಳ ಸಾವು ಬೇಡವೆಂದು ಬಯಸುತ್ತಿದ್ದರು. ವೀರತ್ವೆಂಬುದು ಯಾವುದೇ ಒಂದು ಜಾತಿ, ಶ್ರೀಮಂತರಿಗೆ ಸಂಬಂಧಿಸಿದುದಲ್ಲ. ಸ್ವಾಭಿಮಾನವನ್ನು ಮೈಗೂಡಿಸಿಕೊಂಡು ಬೆಳೆದ ರಾಜ, ರಾಣಿ, ಮಂತ್ರಿ, ದಳವಾಯಿ, ಸೇನಾಪತಿ, ಅಷ್ಟೇ ಏಕೆ ಒಬ್ಬ ಸಾಮಾನ್ಯ ಪ್ರಜೆಯೂ ಕೂಡ ವೀರ ಸಾವನ್ನು ಬಯಸುತ್ತಿದ್ದ ಕಾಲವೊಂದಿತ್ತು.

'ಗೆಲಲಾರ್ಪೊಡಿರಿದು ಗೆಲ್ವುದು
ಗೆಲಲಾರದೊಡಣ್ಮಿ ಸಾವುದಾಳ್ಗಿನಿತೆ ಗುಣಂ
ಗೆಲಲುಂ ಸಾಯಲುಮಾರದೆ
ತೊಲಗಿದೊಡೆ ನೆಗಳ್ತೆ ತೊಲಗದಿರ್ಕುಮೆ ಮೆಯ್ಯಂ'

ಎಂಬ ದುರ್ಯೋಧನನ ಮಾತು ಗೆಲ್ಲಲು ಸಾಧ್ಯವಾದರೆ ಇರಿದು ಕೊಂದು, ಗೆಲ್ಲುವುದು. ಗೆಲ್ಲಲಾಗದಿದ್ದರೆ, ರಣರಂಗದಲ್ಲಿ ವೀರಮರಣವನ್ನು ಹೊಂದುವುದು ಹೆಮ್ಮೆಯ ಸಂಗತಿ. ಸಾಯುವುದು ಹೇಡಿತನದಿಂದಾಗಲಿ, ಅಪಕೀರ್ತಿಯಿಂದಾಗಲಿ ಸಾಯುವುದು ಹೇಡಿಗಳ ಲಕ್ಷಣ. ಯುದ್ಧ ರಂಗದಲ್ಲಿ ವೀರ ಮರಣವನ್ನು ಕಾಣುವುದರಲ್ಲಿ ಸಾರ್ಥಕತೆ ಇದೆ. ನಮ್ಮ ಕವಿರಾಜಮಾರ್ಗಕಾರ ಕರ್ನಾಟಕ ವರ್ಣನೆಯನ್ನು ಮಾಡುವ ಸಂದರ್ಭದಲ್ಲಿ ನಮ್ಮ ನಾಡಿನ ಜನತೆ ಎಂಥ ಕೆಚ್ಚೆದೆಯ

ಕಲಿಗಳು ಎಂಬುದನ್ನು ಆ ನಾಡವರ ಸುಭಟರೂ, ಗುಣವಂತರೂ, ಕಲಾರಸಿಕರೂ, ವಿವೇಕಿಗಳೂ, ಮೇಲಾಗಿ ಅಷ್ಟೇ ಸ್ವಾಭಿಮಾನಿಗಳು ಆಗಿದ್ದರೆಂಬ ವಿಚಾರವನ್ನು ದಾಖಲಿಸಿದ್ದಾರೆ. ಹೀಗೆ ಸ್ವಾಭಿಮಾನದಿಂದ, ವೀರತ್ವದಿಂದ ಮರಣಹೊಂದಿದ ವ್ಯಕ್ತಿಗಳ ಕೀರ್ತಿ ಶಾಶ್ವತವಾಗಿ ನಿಲ್ಲಲಿ, ಅವರ ಆದರ್ಶ ಜೀವನದ ತತ್ವಗಳು ಮುಂದಿನ ತಲೆಮಾರಿಗೆ ದಾರಿದೀಪವಾಗಲಿ ಎಂಬ ಉದ್ದೇಶದಿಂದಲೇ ಸ್ಮಾರಕಗಳು ನಿರ್ಮಾಣಗೊಂಡವು.

ಹೋರಾಟದಲ್ಲಿ ಮಡಿದ ವೀರನಿಗೆ ವೀರಗಲ್ಲುಗಳನ್ನು ಹಾಕಿಸುತ್ತಿದ್ದಂತೆ, ಹೋರಾಟದಲ್ಲಿ ಮಡಿದ ಮಹಿಳೆಯರಿಗೂ ವೀರಗಲ್ಲುಗಳನ್ನು ಹಾಕುತ್ತಿದ್ದರೆಂಬುದಕ್ಕೆ ಎರಡು ನಿದರ್ಶನಗಳನ್ನು ಆರ್.ಶೇಷಶಾಸ್ತ್ರಿ ನೀಡುತ್ತಾರೆ. ಕ್ರಿ.ಶ.ಸು.೧೦ನೇ ಶತಮಾನಕ್ಕೆ ಸೇರಿದ ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲಿರುವ ಬಾಹುಬಲಿಯ ಬಸದಿಯ ಬಳಿಯ ವೀರಗಲ್ಲಿದ್ದು, "ಸಾವಿಯಬ್ಬೆ ಎಂಬುವಳು ಬಿಗಿಯೂರಿನಲ್ಲಿ ಸತ್ತಳ್"[೧೮] ಎಂದಿದ್ದು ಆಕೆ ಯಾವ ಹೋರಾಟದಲ್ಲಿ ಸತ್ತಳೆಂಬ ವಿವರಗಳಿಲ್ಲ. ಈ ಶಿಲ್ಪದ ಮೇಲೆ ಕುದುರೆಯನ್ನೇರಿದ ಸಾವಿಯಬ್ಬೆಯು ತನ್ನೆದುರಿನ ಆನೆಯ ಮೇಲೆ ಕುಳಿತ ವೀರನೊಂದಿಗೆ ಹೋರಾಡುವ ಚಿತ್ರ ಬಿಡಿಸಲಾಗಿದೆ.

ಮತ್ತೊಂದು ವೀರಗಲ್ಲು ಶಿವಮೊಗ್ಗ ಜಿಲ್ಲೆ ಶಿಕಾರಿಪುರದಲ್ಲಿ ದೊರೆತಿದ್ದು, ಈ ಶಾಸನ ಕಾಲ ೧೧೪೬. ತನ್ನ ತಂದೆಯೊಡನೆ ಹೋರಾಡಿ ಆತನನ್ನು ಕೊಂದವರೊಡನೆ ಹೋರಾಡಿ ಮಡಿದ ಹರಿಯಕ್ಕನ ವೀರಗಲ್ಲು ಆಕರ್ಷಕವಾಗಿದೆ. ಆಕ್ರೋಶದಿಂದ ಹರಿಯಕ್ಕ ತನ್ನ ಹಗೆಗಳ, ಎದುರಾಳಿಯ ಜುಟ್ಟು ಆಕೆ ಕೈಯಲ್ಲಿ ಸಿಕ್ಕು ಒದ್ದಾಡುತ್ತಿರುವ ವ್ಯಕ್ತಿಯ ಚಿತ್ರಣ ತುಂಬಾ ಪರಿಣಾಮಕಾರಿಯಾಗಿದೆ. ಡಾ.ಎಂ.ಎಂ.ಕಲಬುರ್ಗಿಯವರು ಇವಲ್ಲದೆ ಹೇರೂರು, ಅರಸಿಬೀದಿ ಗೂಡೂರುಗಳಲ್ಲೂ ಸ್ತ್ರೀಯ ಹೋರಾಟ ಮತ್ತು ವೀರಮರಣದ ಶಿಲ್ಪಗಳಿವೆ ಎನ್ನುತ್ತಾರೆ. ಒಟ್ಟಾರೆಯಾಗಿ ಸ್ಮಾರಕಗಳು ನಾಡಿನ ಕಲಾಪರಂಪರೆ ಮತ್ತು ಸಂಸ್ಕೃತಿಯ ತಿರುಳನ್ನು ಪ್ರತಿಬಿಂಬಿಸುವವು. ಸ್ಮಾರಕಗಳಲ್ಲಿ ಚಿತ್ರಿತವಾಗಿರುವ ಒಂದೊಂದು ಚಿತ್ರವು ಬದುಕಿನ ಒಂದೊಂದೇ ಮಜಲುಗಳನ್ನು ಬಿತ್ತರಿಸುವವು. ಸ್ಮಾರಕಗಳನ್ನು ನಿರ್ಮಿಸುವ ಸಂದರ್ಭದಲ್ಲಿ ಸ್ಮಾರಕ ನಿರ್ಮಾತೃಗಳು ಬಳಸಿದ ದೇಶೀಯ ತಂತ್ರಜ್ಞಾನ, ಬಳಸಿದ ವಸ್ತು, ಉಡುಗೆ-ತೊಡುಗೆ, ನೃತ್ಯದ ವಿವಿಧ ಭಂಗಿಗಳು, ಸಂಗೀತದ ಹಲವು ವಾದ್ಯಗಳು, ಯುದ್ಧವೀರರ ಚಿತ್ರಗಳು, ಅವರು ಬಳಸುತ್ತಿದ್ದ ಕೋಟೆ-ಕೊತ್ತಲುಗಳು, ಇತ್ಯಾದಿಗಳನ್ನು ತಿಳಿಯಲು ಸ್ಮಾರಕಗಳು ಅವಶ್ಯವಾಗಿವೆ. ಇವು ಅಂದಿನ ಸಮಾಜದ ಗತಿಬಿಂಬಗಳಾಗಿವೆ.

"ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕ ಕವಲೇದುರ್ಗದ ಕೆರೆಯ ಅಂಚಿನಲ್ಲಿ ಹಲವಾರು ಸಮಾಧಿಗಳು ಇದ್ದು, ಸಮಾಧಿಗಳ ಮುಂದೆ ನಿಲ್ಲಿಸಿರುವ ವೀರಗಲ್ಲುಗಳಲ್ಲಿ ವೀರ ಮತ್ತು

ಆತನೊಡನೆ ಸಹಗಮನ ಮಾಡಿದ ಸತಿಯನ್ನು ಬಿಡಿಸಿದ್ದಾರೆ. ಇದು ಕೆಳದಿ ನಾಯಕರು, ವೀರರು ಹೋರಾಟದಲ್ಲಿ ಸತ್ತಾಗ, ಅವರನ್ನು ತಂದು ಇಲ್ಲಿ ಸಮಾಧಿ ಮಾಡಲಾಯ್ತೆಂದು"[೧೪೦] ಡಾ.ಆರ್.ಶೇಷಶಾಸ್ತ್ರಿಯವರು ಸ್ಥಳೀಯರ ಅಭಿಪ್ರಾಯವನ್ನು ಸಂಗ್ರಹಿಸಿದ್ದಾರೆ. ಅವರೇ ಮುಂದುವರೆದು ವೀರಗಲ್ಲಿನ ಶಿಲ್ಪವೊಂದರಲ್ಲಿ ಮಡಿದ ವೀರನೊಂದಿಗೆ ಆತನ ಹೆಂಡತಿಯೂ ಸಮಾಧಿಯಲ್ಲಿ ಮಲಗಿರುವಂತೆ ಚಿತ್ರ ಬಿಡಿಸಲಾಗಿದೆ. ಮಹಿಳೆಯರು ಯುದ್ಧದಲ್ಲಿ ಮಡಿದ ವೀರನೊಂದಿಗೆ ಆತನ ಹೆಂಡತಿಯೂ ಹುಗಿಸಿಕೊಳ್ಳುವುದರ ಮೂಲಕ ಸಹಗಮನ ಮಾಡಿರಬೇಕೆಂದು ಹೇಳುತ್ತಾರೆ. ಈ ಸಮಾಧಿಗಳನ್ನು ಅವರ ವಂಶದವರು ವರ್ಷಕ್ಕೆ ಒಮ್ಮೆ ಬಂದು ಪೂಜಿಸುತ್ತಾರೆಂಬ ಉಪಯುಕ್ತ ಮಾಹಿತಿಯನ್ನು ದಾಖಲಿಸಿದ್ದಾರೆ. "ಶಿವಮೊಗ್ಗ ಕೋಟೆ ಪೋಲೀಸ್ ಸ್ಟೇಷನ್ ಹತ್ತಿರವಿರುವ ಕೋಟೆ ಕಾಳಗದ ಶಿಲ್ಪ ಆಕರ್ಷಕವಾಗಿದ್ದು, ಕೋಟೆಯೊಳಗೆ ವೀರರು, ನಿಂತಿರುವಂತೆಯೂ, ಸುತ್ತಲೂ ವೀರರು ಹೋರಾಡುತ್ತಿರುವಂತೆ ಬಿಡಿಸಿರುವ ಚಿತ್ರಗಳನ್ನು ಗಮನಿಸಬಹುದು. ಈ "ವೀರಗಲ್ಲಿನಿಂದ ವೀರನು ರಾಕ್ಷಸ ಮುಖದ ಗುರಾಣಿಯೊಂದನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಯುದ್ಧರಂಗದಲ್ಲಿ ಹೋರಾಡುತ್ತಿರುವ ವೀರನಿಗೆ ಬಾಣಗಳನ್ನು ಹೊತ್ತು ತಂದು ನೀಡುತ್ತಿರುವ ಶಿಲ್ಪಗಳು ಶಿವಮೊಗ್ಗ ಮ್ಯೂಸಿಯಂನಲ್ಲಿವೆ."

ಕೆಳದಿಯು ಹಲವಾರು ಸ್ಮಾರಕಗಳನ್ನು ಹೊಂದಿದ್ದು, ಇದು ರಾಣಿಯರ ರಾಜಕೀಯ, ಸಾಮಾಜಿಕ, ಧಾರ್ಮಿಕ ಬದುಕಿನ ಕಥೆಯನ್ನು ಬಿಂಬಿಸುತ್ತದೆ. ರಾಣಿ ಕೊಲ್ಲೂರಮ್ಮಾಜಿಯು ಕ್ರಿ.ಶ.೧೬೨೯ ರಿಂದ ೧೬೪೫ರವರೆಗೆ ಕೆಳದಿಯನ್ನಾಳಿದ ವೀರಭದ್ರನಾಯಕ ಪತ್ನಿ ವೀರಭದ್ರನಾಯಕ ಕ್ರಿ.ಶ.೧೬೪೬ರಲ್ಲಿ ಕಂಡಲೂರಲ್ಲಿ ಮರಣ ಹೊಂದಿದನು. ಆ ಸಮಯದಲ್ಲಿ ರಾಣಿಯು ಸಹಗಮನ ಮಾಡಿದ್ದರಿಂದ ರಾಜ ವೀರಭದ್ರನಾಯಕನ ಜೊತೆಗೆ ಕೊಲ್ಲೂರಮ್ಮಾಜಿಯ ಸಮಾಧಿಯನ್ನು ಕಂಡಲೂರಲ್ಲಿ ಮಾಡಲಾಯ್ತು. ಅಲ್ಲದೆ ಕೆಳದಿ ರಾಣಿ ವೀರಮ್ಮಾಜಿಯ ಸಮಾಧಿಯು ಕೂಡ್ಲಿಗಿ ತಾಲ್ಲೂಕಿನ ಉಜ್ಜಿನಿಯಲ್ಲಿದೆ.

ಕೆಳದಿಯ ದೊಡ್ಡ ಸಂಕಣ್ಣನಾಯಕನಿಂದ ನಿರ್ಮಾಣ ಕಾರ್ಯ ಪ್ರಾರಂಭಗೊಂಡ ವೀರಭದ್ರದೇವಾಲಯವು ಭವ್ಯವಾದ ಕಟ್ಟಡವಾಗಿದೆ. ಈ ದೇವಾಲಯದ ಎದುರಿನಲ್ಲಿ ರಾಣಿಯಿಂದ ನಿರ್ಮಾಣಗೊಂಡ ಧ್ವಜಸ್ತಂಭವು ಆಕರ್ಷಕವಾಗಿದ್ದು, ೨೫ ಅಡಿ ಎತ್ತರವಿದೆ. ಇದರಲ್ಲಿ ಗಣೇಶ, ಶಿವ, ನಂದಿ, ಪಾರ್ವತಿ, ಭೈರವನ ಶಿಲ್ಪವಿದೆ. ಈ ಸ್ತಂಭದ ಒಂದು ವಿಶೇಷವೆಂದರೆ ಗಣೇಶನ ಕೆಳಭಾಗದಲ್ಲಿ ಚೆನ್ನಮ್ಮಾಜಿ ಶಿವಾಜಿಯ ಮಗ ರಾಮರಾಯನ ಶಿಲ್ಪಗಳಿವೆ.

ಬಿದನೂರು ಕೋಟೆಯ ಸಮೀಪದಲ್ಲಿರುವ ಕಲ್ಮಠವು ಒಂದು ಐತಿಹಾಸಿಕ ಕಟ್ಟಡ. ಚೆನ್ನಮ್ಮಾಜಿಯು ಔರಂಗಜೇಬನ ಸೈನ್ಯವನ್ನು ಸೋಲಿಸಿದ ಸ್ಮರಣೆಗಾಗಿ ಮುಸ್ಲಿಂ ಶೈಲಿಯಲ್ಲಿ

ಕಟ್ಟಡವನ್ನು ನಿರ್ಮಿಸಲಾಗಿದೆ. ಇದರಲ್ಲಿ ರಾಜಾರಾಮ ಹಾಗೂ ರಾಣಿ ಚೆನ್ನಮ್ಮಾಜಿ ಅಲ್ಲದೇ ಸೇನಾಪತಿಯ ಚಿತ್ರಗಳಿದ್ದು, ಒಂದು ರೀತಿ ದೇವಾಲಯದಂತಿದೆ. ಇದರ ನವರಂಗದಲ್ಲಿ ಸುಂದರವಾದ ರಂಗೋಲಿಯ ಚಿತ್ರಗಳಿವೆ.

ಬಿದನೂರು ಕೊಪ್ಪಲು ಮಠದಲ್ಲಿ ಕೆಳದಿ ರಾಣಿ ಚೆನ್ನಮ್ಮಾಜಿಯ ಸಮಾಧಿಗಳನ್ನು ಪತ್ತೆ ಮಾಡಿದ್ದಾರೆಂದು ದಾಖಲಿಸಿದ್ದಾರೆ. ಇದರಿಂದ ಈ ಸ್ಥಳದಲ್ಲಿ ಕೆಳದಿ ಅರಸ-ಅರಸಿಯರ ಸಮಾಧಿಗಳು, ಸಚಿವರು ಮತ್ತು ಸೇನಾಪತಿಗಳ ಸಮಾಧಿ ಕಟ್ಟಡಗಳು ಇದ್ದವೆಂಬ ಅಂಶ ತಿಳಿದುಬರುತ್ತದೆ."[೧೪೧] ಎಲ್ಲ ಕಟ್ಟಡದ ಮುಂದೆ ಶಿಲಾಮಂಟಪವನ್ನು ಕಟ್ಟಲಾಗಿದ್ದು, ಈಗ ಒಂದು ಮಾತ್ರ ಉಳಿದಿದೆ.

ಬಿದನೂರು ನಗರದ ಸಮೀಪದ ದೇವಗಂಗೆಯ ರಚನೆ ಹಾಗೂ ಕಟ್ಟದ ವಿನ್ಯಾಸ ಅದ್ಭುತವಾಗಿದೆ. ಇಲ್ಲಿರುವ ವಿಶಾಲವಾದ ಸರೋವರವನ್ನು ರಾಣಿ ಚೆನ್ನಮ್ಮಾಜಿ ನಿರ್ಮಿಸಿದಳೆಂದು ತಿಳಿದುಬರುತ್ತದೆ. ಸರೋವರಕ್ಕೆ ಮೇಲುಭಾಗದ ಕೆರೆಯಿಂದ ನೀರು ಹರಿದು ಬರುವಂತೆ ಕಲ್ಲಿನ ಕೊಳಾಯಿಗಳನ್ನು ನಿರ್ಮಿಸಲಾಗಿದೆ. ಸರೋವರದ ಮಧ್ಯಭಾಗದಲ್ಲಿ ಕಲ್ಲಿನ ಮಂಟಪವಿದ್ದು, ಮಂಟಪವನ್ನು ತಲುಪಲು ಕಲ್ಲಿನ ಮೆಟ್ಟಲುಗಳಿವೆ. ಸರೋವರದಲ್ಲಿ ಕಲ್ಲಿನ ಕಾರಂಜಿಯಿಂದ ನೀರು ಚಿಮ್ಮುವ ವ್ಯವಸ್ಥೆಯಿದ್ದು, ಇದು ದೇಶಿಯ ತಂತ್ರಜ್ಞಾನಿಗಳ ತಾಂತ್ರಿಕತೆಗೆ ಸಾಕ್ಷಿಯಾಗಿದೆ.

ಹೀಗೆ ಕೆಳದಿ ಅರಸರ ಕಾಲದ ಕಲಾಸ್ಮಾರಕಗಳಾದ ದೇವಾಲಯ, ಕೋಟೆ, ಕೊತ್ತಲಗಳು, ಮಠಗಳು, ಅಗ್ರಹಾರಗಳು, ಕೆರೆ, ಕಟ್ಟೆಗಳು ಕೆಳದಿ ರಾಣಿಯರ ಕಾಲದಲ್ಲಿ ಕಟ್ಟಲ್ಪಟ್ಟ ಈ ಸ್ಮಾರಕಗಳು ಅಂದಿನ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಬದುಕನ್ನು ಅನಾವರಣಗೊಳಿಸುತ್ತದೆ.

ಸ್ವಾದಿಯ ಶಿಲ್ಪಕಲೆ ಶಾತವಾಹನ-ಕದಂಬರ ಕಾಲದಷ್ಟು ಪುರಾತನವಾದುದೆಂದು ರಘುನಾಥ ಭಟ್ಟರು ಗುರುತಿಸಿದರು. ಸ್ವಾದಿ ಪ್ರದೇಶದಲ್ಲಿ ಸುಲಭವಾಗಿ ದೊರೆಯುವ ಪದರುಶಿಲೆ ಹೆಚ್ಚಿರುವುದರಿಂದ ಮಧ್ಯಮ, ಚಿಕ್ಕ, ಉಬ್ಬುಶಿಲ್ಪ, ಚಪ್ಪಟೆ ಶಿಲ್ಪಗಳು ಸ್ವಾದಿಯಲ್ಲಿವೆ. ಅಲ್ಲದೆ ಕ್ರಿ.ಶ.೧೬೮೮ರ ಸೋದೆ ಸದಾಶಿವರಾಯನ ಶಾಸನೋಲ್ಲೇಖ ಸ್ವಾರಸ್ಯಕರವಾಗಿದೆ. ಇಲ್ಲಿಯ ಲಿಂಗಗಳು ವ್ಯಕ್ತಿನಾಮ ವಿಶೇಷಗಳನ್ನೊಳಗೊಂಡ ಲಿಂಗ-ನಂದಿಗಳಂಥ ಭವ್ಯ ಸ್ಮಾರಕಗಳನ್ನು ಹೊಂದಿವೆ. ಸ್ವಾದಿ ಶಾಸನೋಕ್ತ ಹಾಗೂ ಸದಾಶಿವ ಸಾಹಿತ್ಯೋಲ್ಲೇಖಿತ 'ಕಲ್ಲುಮಂಟಪ ಅಥವಾ ಕಲ್ಮಂಚು'-ಸ್ವಾದಿ ಶೈಲಿಯ ವಾಸ್ತು ಮತ್ತು ಶಿಲ್ಪಕಲಾ ದೃಷ್ಟಿಯಿಂದ ವಿಶೇಷವಾದುದಾಗಿದ್ದು, ಇವುಗಳಲ್ಲಿ ರಾಣಿಯರ, ಉಲ್ಲೇಖಗಳು ಕಂಡುಬರುವುದಿಲ್ಲ.

ಬೆಳವಡಿಯ ಚಾರಿತ್ರಿಕ ಪರಿಸರಗಳಲ್ಲಿ 'ಯಾದವಾಡದ ಶಿಲ್ಪವು' ಮಹತ್ವದ ಆಕರವಾಗಿದೆ. ಧಾರವಾಡದ ಉತ್ತರ ದಿಕ್ಕಿನಲ್ಲಿ ಎಂಟು ಕಿ.ಮೀ.ಅಂತರದಲ್ಲಿರುವ ಯಾದವಾಡದಲ್ಲಿ ಶಿಲ್ಪವೊಂದಿದ್ದು,

ಇದರ ಎತ್ತರ ಮೂರು ಅಡಿ, ಏಳುವರೆ ಅಡಿ ಅಗಲ. ಈ ಶಿಲ್ಪದ ಮೇಲ್ಭಾಗ ವರ್ತುಲಾಕಾರವಾಗಿದ್ದು, ಶಿಲ್ಪದಲ್ಲಿ ಅಡ್ಡವಾಗಿ ಎರಡು ಭಾಗಗಳನ್ನು ಮಾಡಲಾಗಿದೆ. ಮೇಲಿನ ಭಾಗದ ಮಧ್ಯದಲ್ಲಿ ಎಡಗಡೆ ಮುಖಮಾಡಿದ ಕುದುರೆಯ ಮೇಲೆ ಒಬ್ಬ ಎಡಕ್ಕೆ ಮುಖಮಾಡಿ ಕುಳಿತ ಪುರುಷನಿದ್ದಾನೆ. ಆತನ ಮೇಲೆ ಛತ್ರಿ ಹಿಡಿಯಲಾಗಿದೆ. ಆ ವೀರನ ಬಲಬದಿಯ ಕಾಲಿನ ಹತ್ತಿರ ಒಬ್ಬ ಸಿಪಾಯಿಯು ಎಡಬದಿಗೆ ಮುಖಮಾಡಿ ಒಬ್ಬ ಸಿಪಾಯಿ ನಿಂತಿದ್ದಾನೆ. ಅವನ ಮುಂದೆ ಎಡಬದಿಗೆ ಮುಖಮಾಡಿ ಓಡುತ್ತಿರುವ ಒಂದು ನಾಯಿಯನ್ನು ಶಿಲ್ಪದಲ್ಲಿ ಕೆತ್ತಲಾಗಿದೆ. ಶಿಲ್ಪದ ಕೆಳಗಿನ ಅರ್ಧಭಾಗದಲ್ಲಿ. ಉದ್ದವಾಗಿ ಮತ್ತೆ ಮೂರು ಭಾಗಗಳನ್ನು ಮಾಡಲಾಗಿದೆ. ನಡುವಿನ ಭಾಗದಲ್ಲಿ ಡೊಳ್ಳಾರಿಯ ಮೇಲೆ ಒಬ್ಬ ಪುರುಷನು ಸುಖಾಸೀನನಾಗಿದ್ದು, ಎಡ ತೊಡೆಯ ಮೇಲೆ ಚಿಕ್ಕ ಮಗುವಿದೆ. ಪುರುಷನ ಶರೀರದ ಮೇಲೆ ಉತ್ತರೀಯ ಹಾಗೂ ಬಲಗೈಯಲ್ಲಿ ಬಟ್ಟಲಿದ್ದು, ಈ ಪುರುಷನಿಗೆ ಸ್ವಲ್ಪ ಗಡ್ಡವಿದೆ. ಈ ಪುರುಷನ ಎಡಬಲಗಳಲ್ಲಿ ಅನುಕ್ರಮವಾಗಿ ಬಲಗಡೆ ತಿರುಗಿದ್ದ, ಎಡಗಡೆಗೆ ಮುಖಮಾಡಿದ ಸ್ತ್ರೀಯರಿದ್ದು, ಇಬ್ಬರು ಸ್ತ್ರೀಯರ ಕೈಯಲ್ಲಿ ಗುರುತಿಸಲು ಆಗದ ವಸ್ತು ಮತ್ತು ಹೂಜಿಗಳಿವೆ. ಸ್ತ್ರೀಯರು ತಮ್ಮ ಎಡ-ಬಲ ಕೈಗಳನ್ನು ಮುಖ್ಯ ಪುರುಷನ ಮುಖದ ಕಡೆಗೆ ಒಯ್ದಿದ್ದಾರೆ. ಮುಖ್ಯ ಪುರುಷನ ಬಲಗಡೆಯ ಭಾಗದಲ್ಲಿ ಧೋತರವುಟ್ಟು ಕೂದಲು ಗಂಟು ಹಾಕಿದ, ಎಡಬದಿಗೆ ಮುಖ ಮಾಡಿದ ಬಿಲ್ಲುಗಾರನಿದ್ದು, ಎಡಗಡೆಯ ಭಾಗದಲ್ಲಿ ಸೊಂಡೆಯನ್ನು ಹೊಂದಿದ ಹೂಜಿಯನ್ನು ಹಿಡಿದುಕೊಂಡಿರುವ, ನಿಲುವಂಗಿ ಹಾಕಿದ, ರೂಮಾಲು ಸುತ್ತಿದ, ಬಲಗಡೆಗೆ ಮುಖ ಮಾಡಿದ ಪುರುಷನಿರುವನು. ಈ ಶಿಲ್ಪವು ಬೆಳವಡಿ ಮಲ್ಲಮ್ಮ ಹಾಗೂ ಶಿವಾಜಿಯ ಯುದ್ಧದ ನಂತರದ ಮೈತ್ರಿಯನ್ನು ಸೂಚಿಸುವ ಸ್ಮಾರಕ ಶಿಲ್ಪವಾಗಿದೆ.

ಕ್ರಿ.ಶ.೧೬೫೧ರಲ್ಲಿ ಮುಮ್ಮಡಿ ಘಂಟೇಂದ್ರನ ರಾಣಿ ಜೆಟ್ಟಮ್ಮನು ಸಿದ್ಧಾಪುರದಲ್ಲಿ ಮನೋಹರವಾದ ವಿಘ್ನೇಶ ಮಂದಿರ ನಿರ್ಮಿಸಿದಳು. ಬಿಳಗಿ ಪರಿಸರದಲ್ಲಿ ಶಿಸ್ಟೋಸ್ ಕಲ್ಲು(ಪದರು ಶಿಲೆ) ಹೆಚ್ಚು ಸಿಗುವುದರಿಂದ ಇಲ್ಲಿನ ಶಿಲ್ಪಗಳು ಹೆಚ್ಚು ಉಬ್ಬುಶಿಲ್ಪಗಳಾಗಿವೆ.

ಕಿತ್ತೂರು ಸಂಸ್ಥಾನಿಕರ ನಾಡಿನಲ್ಲಿ ಕದಂಬ ಕಾಲದ ಶಿಲ್ಪಗಳು ಹೆಚ್ಚಿನ ಪ್ರಮಾಣದಲ್ಲಿವೆ. ಹಲಸಿ, ದೇಗಾವಿ, ದೇವರ ಸೀಗಿಹಳ್ಳಿ, ಕಾದ್ರೊಳ್ಳಿ ಮುಂತಾದೆಡೆ ಈ ಮಾದರಿಯ ಶಿಲ್ಪಗಳು ದೊರೆಯುತ್ತವೆ. ಕಾಗತಿಯ ಸಿದ್ದೇಶ್ವರ ಗುಡಿಯ ಸಮೀಪದಲ್ಲಿ ಕೆಲವು ಸಮಾಧಿಗಳಿದ್ದು, ಇವು ಕಿತ್ತೂರ ರಾಣಿ ಚೆನ್ನಮ್ಮನ ಪೂರ್ವಜರ ಸಮಾದಿಗಳೆಂದು ಗುರುತಿಸಲಾಗಿಗೆ ಕಿತ್ತೂರು ಕೋಟೆ ತನ್ನ ಕಾಲಕ್ಕೆ ಅತ್ಯಂತ ಸುಭದ್ರವಾದ ಕೋಟೆಯಾಗಿತ್ತು. ಇಂಡೋ ಸಾರ್ಸೆನಿಕ್ ಶೈಲಿಯಲ್ಲಿ ರಚಿತವಾಗಿದ್ದ ಈ ಅರಮನೆಯನ್ನು ಸ್ಥಳೀಯವಾಗಿ ಸಿಗುವ ಕಬ್ಬಿಣದ ಬೆಣಚುಕಲ್ಲಿನ ಚಪ್ಪಡಿಗಳನ್ನು

ಜಾಣ್ಮೆಯಿಂದ ಇಟ್ಟಿಗೆಗಳಂತೆ ಉಪಯೋಗಿಸಿ ಗಚ್ಚನ್ನು ಬಂಧಕವನ್ನಾಗಿ ಉಪಯೋಗಿಸಿ ಕಟ್ಟಲಾಗಿದೆ. ಬಾವಿ, ಕಾರಂಜಿ ಸುಂದರ ಕಲಾಕುಸುರಿಯನ್ನು ಹೊಂದಿವೆ. ಅರಮನೆಯ ಬಾಗಿಲು, ಕಿಟಕಿಗಳು ನಿವಾಸದಲ್ಲಿ ಇಂದು ಬಳಸಲಾಗಿರುವ ಕಿಟಕಿಗಳು ಕಿತ್ತೂರಿನವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅದರಂತೆ ಮೂರು ಸಾವಿರ ಮಠದ ದರ್ಬಾರ್ ಹಾಲ್‌ನ ಕಂಬಗಳು, ಕಿಟಕಿಗಳು, ಕಿತ್ತೂರು, ಅರಮನೆಯಿಂದ ತಂದ ಕಲಾಕೃತಿಗಳು.

ಕಿತ್ತೂರ ಅರಸರ ಆರು ಸಮಾಧಿಗಳು ಕಿತ್ತೂರಿನ ಕಲ್ಮಠದ ಆವರಣದಲ್ಲಿವೆ. ಇವು ಸಾಧಾರಣ ಕಟ್ಟಡಗಳು. ಕಿತ್ತೂರ ಮಲ್ಲಸರ್ಜನ ಸಮಾಧಿಯು ಇಲ್ಲೇ ಇದೆ. ಅಲ್ಲದೆ ಫಕೀರ ರುದ್ರಸರ್ಜ ಮತ್ತು ಅವನ ಎರಡನೇ ಹೆಂಡತಿ ನಿರಂಜನಿಯ ಸಮಾಧಿಗಳು ಕಲ್ಮಠದ ಹೆಬ್ಬಾಗಿಲಿನ ಬದಿಗೆ ಇವೆ. ಕಿತ್ತೂರ ರಾಣಿ ಚೆನ್ನಮ್ಮಾಜಿಯ ಸಮಾಧಿಯು ಬೈಲಹೊಂಗಲದಲ್ಲಿದೆ. ಸಮಾಧಿಯ ಮೇಲೆ ಲಿಂಗಪೂಜೆಯಲ್ಲಿ ನಿರತಳಾದ ಚೆನ್ನಮ್ಮನ ಪ್ರತಿಮೆ ಇದೆ. ಕಿತ್ತೂರಿನ ಕೋಟೆ ಒಂದು ಕಾಲಕ್ಕೆ ಸುಭದ್ರವಾದ ಕೋಟೆಯಾಗಿದ್ದು, ಇಂದು ಹಲವಾರು ಕಡೆ ಬಿದ್ದು ಹಾಳಾಗಿದೆ. ಕೋಟೆಯೊಳಗಿನ ಅರಮನೆಯು ಹಾಳು ಗೋಡೆಯಂತೆ ನಿಂತಿದ್ದರೂ ವೈಭವದ ಕುರುಹುಗಳು ಕಾಣಸಿಗುತ್ತವೆ. ಈ ಅರಮನೆಯನ್ನು ಸ್ಥಳೀಯವಾಗಿ ಸಿಗುವ ಕಬ್ಬಿನದ ಬೆಣಚುಕಲ್ಲಿನ ಚಪ್ಪಡಿಗಳನ್ನು ಜಾಣ್ಮೆಯಿಂದ ಇಟ್ಟಿಗೆಗಳಂತೆ ಉಪಯೋಗಿಸಿ ಗಚ್ಚನ್ನು ಬಂಧಕವನ್ನಾಗಿ ಉಪಯೋಗಿಸಿ ಕಟ್ಟಲಾಗಿದೆ. ಕಿತ್ತೂರ ರಾಣಿಯರಿಗೆ ಸಂಬಂಧಿಸಿದ ಹಲವು ಸಾಮಗ್ರಿಗಳು, ಕಲಾಕೃತಿಗಳು ಕೋಟೆಯೊಳಗಿರುವ ಮ್ಯೂಸಿಯಂನಲ್ಲಿವೆ.

ನಿರಂಜನಿ ಮಹಲ್ ಕೂಡ ಕಿತ್ತೂರಿನ ಕಥೆ ಹೇಳುವ ಸ್ಮಾರಕ ಬೈಲಹೊಂಗಲದಿಂದ ಸು.೧೫–೨೦ ಕಿ.ಮೀ. ದೂರದಲ್ಲಿರುವ ದೇಸನೂರಿನಲ್ಲಿರುವ 'ನಿರಂಜನಿ ಮಹಲ್' ಕಿತ್ತೂರಿನ ಪ್ರೇಮಗಾಥೆಯ ಕುರುಹಾಗಿದ್ದು ಆ ಗ್ರಾಮದ ಶೇಷಮಹಲ್ ಅನ್ನು ನೆನಪಿಸುತ್ತವೆ. ಧಾರವಾಡ–ನವಲಗುಂದ ರಸ್ತೆಯ ಬಳಿ, ನಗರದ ಪಶ್ಚಿಮ ಭಾಗದಲ್ಲಿ ಒಂದು ಅತ್ಯಂತ ಮಹತ್ವದ ಸ್ಥಳವಾಗಿದ್ದು ಕಿತ್ತೂರಿನ ಮೊದಲ ಯುದ್ಧದಲ್ಲಿ ಮರಣ ಹೊಂದಿದ ಥ್ಯಾಕರೆ, ಕ್ಯಾಪ್ಟನ್ ಬ್ಲಾಕ್, ಟಿ.ಸಿವೆತ್, ಡೇಟನ್ ಸಮಾಧಿಗಳಿವೆ. ಕಾಗತಿಯಲ್ಲಿ ಚೆನ್ನಮ್ಮನ ಜನ್ಮಸ್ಥಳವಾದ 'ವಾಡೆ' ಇದ್ದು ಅದು ಕಿತ್ತೂರಿನ ಐತಿಹಾಸಿಕ ಬದುಕಿನ ಕುರುಹಾಗಿದೆ.

ಕಿತ್ತೂರಿನ ವೀರರಾಣಿ ಚೆನ್ನಮ್ಮನ ಸೊಸೆ ಈರಮ್ಮನು ಅತ್ತೆಯಂತೆ ನಾಡಿನ ಸ್ವಾತಂತ್ರ್ಯದ ಕನಸು ಕಾಣುತ್ತಲೇ ಬಂಗಿಖಾನೆಯಲ್ಲಿದ್ದು, ರಾಯಣ್ಣನಿಗೆ ಸಹಾಯ, ಧನ ನೀಡಿ, ಕಿತ್ತೂರನ್ನು ಪುನಃ ಗೆಲ್ಲುವ ಪ್ರಯತ್ನ ಮಾಡಿದಳು. ಬೈಲಹೊಂಗಲದ ಸೆರೆಮನೆಯಲ್ಲಿ ಬಂಧಿಯಾದ ರಾಣಿ ಈರಮ್ಮನನ್ನು ಕುಸುಗಲ್ಲಿಗೂ, ನಂತರ ಕುಸುಗಲ್ಲಿನಿಂದ ಧಾರವಾಡಕ್ಕೂ ಸ್ಥಳಾಂತರಿಸಲಾಯ್ತು.

ಈ ಹಿನ್ನೆಲೆಯಲ್ಲಿ "ನವಲ್ಗುಂದ ತಾಲೂಕಿನ ಹಾಳ ಕುಸುಗಲ್ಲಿನ ಕೋಟೆಯ ಒಳಭಾಗದಲ್ಲಿರುವ ಉಪ್ಪಾರ ಗೌಡರ ಮನೆಗೆ ಕಿಟಕಿಗಳಿಲ್ಲದೆ ಸು.೧೦೦ ಅಡಿ ಉದ್ದದ ಗೋಡೆ ಇದೆ. ಇದೇ ಈರಮ್ಮನನ್ನು ಬಂಧಿಸಿದ ಬಂದಿಖಾನೆ" ಎಂದು ಸಂಶೋಧಕರಾದ ಡಾ.ಎಚ್.ಚಂದ್ರಶೇಖರರು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿಂದ ಈಕೆಯನ್ನು ಸ್ಥಳಾಂತರಿಸಿದ ಕೆಲಕಾಲದ ನಂತರ ಈರಮ್ಮ ಸಾವನ್ನಪ್ಪುವಳು ಎಂಬ ಅಂಶ ತಿಳಿದುಬರುವುದರಿಂದ ಈರಮ್ಮನ ತವರುಮನೆ ಹಾಗೂ ಸಾವನ್ನಪ್ಪಿದ ಸ್ಥಳವನ್ನು ಕೂಡ ಇವರು ದಾಖಲಿಸಿದ್ದಾರೆ. ಧಾರವಾಡದ ರವಿವಾರ ಪೇಟೆಯ ಕೊಂಡವಾಡ ಶೆಟ್ಟರ ಮನೆಯ ಬಲಬದಿಯಲ್ಲಿ ಹಸಿರು ಬಣ್ಣವನ್ನು ಬಳಿಯಲ್ಪಟ್ಟ ಒಂದು ಕಟ್ಟೆ ಇದ್ದು, ಆ ಕಟ್ಟೆಗೆ 'ಕರಿಯಮ್ಮನ ಕಟ್ಟೆ' ಎನ್ನುವರು. ಇದು ಸಮಾಧಿಯ ಎಲ್ಲಾ ಲಕ್ಷಣಗಳನ್ನು ಹೊಂದಿರುವುದರಿಂದ ಇದೇ 'ಈರಮ್ಮನ ಸಮಾಧಿ' ಎಂದು ಡಾ.ಎಚ್.ಚಂದ್ರಶೇಖರರು ಉಲ್ಲೇಖಿಸಿದ್ದಾರೆ. ಈ ಹಿನ್ನೆಲೆಯಲ್ಲಿ ನಾನು ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಕೊಂಡವಾಡ ಶೆಟ್ಟರ ಮನೆಯ ಸೊಸೆ ಎಂದು ಹೇಳಿಕೊಂಡ 'ನೀಲಮ್ಮ' ಎಂಬುವರು ಮೊದಲು ಕರಿಯಮ್ಮನ ಕಟ್ಟೆ ಅಂದರೆ ಸಮಾಧಿಯು ಬಾವಿಯ ಪಕ್ಕದಲ್ಲಿದ್ದಿತು. ಸಮಾಧಿ ಇರುವ ಜಾಗವನ್ನು ಮಾರಿರುವ ಕಾರಣವಾಗಿ ಅಲ್ಲಿರುವ ಕಲ್ಲು, ಮಣ್ಣು ಇತ್ಯಾದಿಗಳಿಂದಲೇ ಮತ್ತೆ ಕಟ್ಟೆಯನ್ನು ಪುನಃ ಕಟ್ಟಲಾಯ್ತೆಂಬ ಅಂಶವನ್ನು ತಿಳಿಸುತ್ತಾರೆ. ಇಂದಿಗೂ 'ಕರಿಯಮ್ಮನ ಕಟ್ಟೆ' ರೂಪದಲ್ಲಿ ವೀರಮ್ಮ ಜನಮನದಲ್ಲಿ ಉಳಿಯುವಂತಾಗಿದೆ.

ಹೀಗೆ ಸ್ಮಾರಕಗಳು ಸಾಮಾಜಿಕ ಮೌಲ್ಯದ ಸಂಕೇತವಾಗಿದ್ದವು. ವೀರರಿಗೆ ಸಮಾಜ ಕೃತಜ್ಞಾಪೂರ್ವಕವಾಗಿ ಸಲ್ಲಿಸುತ್ತಿದ್ದ ಗೌರವ ಇವಾಗಿದ್ದವು.

ಹಾಗಲವಾಡಿಯಲ್ಲಿ ಮಠಾಧಿಪತಿಗಳ ಗದ್ದುಗೆಗಳ ಜೊತೆಗೆ ಮಹಾರಾಣಿ ಶರಣೆ ಕಲ್ಲಮ್ಮ ತಾಯಿ ಗದ್ದುಗೆ ಇರುವುದು ವಿಶೇಷವಾಗಿದೆ. ವಿಜಯನಗರೋತ್ತರ ಕಾಲದ ಚಿಕ್ಕ ಪುಟ್ಟ ದೊರೆಗಳ ಕಾಲದಲ್ಲಿ ಗದ್ದುಗೆಗಳು ಹೆಚ್ಚು ನಿರ್ಮಾಣಗೊಂಡಿವೆ. ಅಲ್ಲದೆ ಹಾಗಲವಾಡಿಯ ಗುರುಪಾದಸ್ವಾಮಿ ಮಠದಲ್ಲಿರುವ ಕಂಬದಲ್ಲಿ ರಾಜದಂಪತಿಗಳಿರುವ ಉಬ್ಬುಶಿಲ್ಪವಿದ್ದು, ಆಕರ್ಷಕವಾಗಿದೆ. ಬಾಗಿನ ಕೇಶಾಲಂಕಾರದಿಂದ ಕೂಡಿದ ರಾಜ ಎದೆಯ ಮೇಲೆ ಕರಡಿಗೆ ಧರಿಸಿ, ಕೊರಳಲ್ಲಿ ರುದ್ರಾಕ್ಷಿಸರ ಧರಿಸಿದ್ದಾನೆ. ಕರ್ಣಕುಂಡಲ ಹಾಗೂ ಕೈಗಳಿಗೆ ರುದ್ರಾಕ್ಷಿ ಕಟ್ಟಿಕೊಂಡಿದ್ದಾನೆ. ಸೊಂಟದಲ್ಲಿ ಕತ್ತಿಯಿದೆ. ಇಲ್ಲಿ ಬಿಂಬಿತವಾದ ರಾಣಿಯ ಕೂದಲು ನೀಳವಾಗಿದ್ದು, ಆಭರಣಭೂಷಿತಳಾಗಿದ್ದಾಳೆ. ರಾಜದಂಪತಿಗಳು ಭಕ್ತಿಭಾವದಿಂದ ನಿಂತಿದ್ದಾರೆ. ಇದೇ ರೀತಿಯ ನಾಯಕ ದಂಪತಿಯ ಶಿಲ್ಪಗಳು ಹಾಗಲವಾಡಿಯ ಲಿಂಗಪ್ಪನ ಮಠದಲ್ಲಿದ್ದು, ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಸಮಕಾಲೀನ ರಾಣಿಯರ ಸಮಾಜೋಧಾರ್ಮಿಕ ಪ್ರವೃತ್ತಿಯ ಮೇಲೆ ಬೆಳಕು ಬೀರಬಹುದು.

ಬಿಜ್ಜಾವರ ಪ್ರಭುಗಳಲ್ಲಿ ರಾಣಿಯರು ಧರ್ಮಸ್ಥರಾಗಿದ್ದು ಕಂಡುಬರುತ್ತದೆ. ಮುಮ್ಮಡಿ ಚಿಕ್ಕಪ್ಪಗೌಡನ ಪತ್ನಿಯಾದ ರಾಣಿ ಅಂಜಮ್ಮನವರು ಅನೇಕ ದಾನಧರ್ಮಾದಿಗಳನ್ನು ಮಾಡಿದರು. ಅಲ್ಲದೇ ಶ್ರೀ ಮಲ್ಲೇಶ್ವರನ ಪಕ್ಕದಲ್ಲಿ ಪಾರ್ವತಿ ವಿಗ್ರಹವನ್ನು ಪ್ರತಿಷ್ಠಾಪಿಸಿದ ಈಕೆಯ ಕೀರ್ತಿ ಹಿರಿಯದಾದುದು. ಪಾರ್ವತಿ ವಿಗ್ರಹದ ಪೀಠದಲ್ಲಿ 'ಅಂಜಮ್ಮನವರು' ಎಂಬ ಲಿಪಿಯಿದ್ದು ಈಕೆಯೇ ಪಾರ್ವತಿ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಳೆಂದು ತಿಳಿದುಬರುತ್ತದೆ. ಈ ವಿವರಗಳೆಲ್ಲವೂ ಬೆಟ್ಟದ ಬುಡದಲ್ಲಿರುವ ಪಟ್ಟಾಲಮ್ಮನ ಗವಿಯಲ್ಲಿರುವ ಶಾಸನದಿಂದ ತಿಳಿದುಬರುತ್ತದೆ. ಅಲ್ಲದೆ ಗುಂಡ್ಲಹಳ್ಳಿಯ ಊರ ಹೊರಗಿನ ಗೋಪಾಲಕೃಷ್ಣ ದೇವಾಲಯದ ಬಳಿ ಜಿರಲೆ ಮಲ್ಲಮ್ಮನ ಶಿಲ್ಪವೊಂದು ಪತ್ತೆಯಾಗಿದೆ. ಈ ಶಿಲ್ಪವು ಉಬ್ಬುಶಿಲ್ಪವಾಗಿದ್ದು, ದೇವಾಲಯದ ಮುಂದಿರುವ ಕಲ್ಯಾಣಿಯ ಬಾಗಿಲ ಕಲ್ಲಿನಲ್ಲಿದೆ. ಭಕ್ತಿಭಾವನೆಯಿಂದ ಕೈಮುಗಿದು ನಿಂತಿರುವ ಭಂಗಿಯಲ್ಲಿರುವ ಈ ಶಿಲ್ಪವು ಆಕರ್ಷಕವಾಗಿದೆ. ಇಲ್ಲಿರುವ ಶಾಸನ ಪಾಠದಲ್ಲಿ 'ಈ ಮಾರ್ಗದಲ್ಲಿ ಓಡಾಡುವ ಭಕ್ತರು ನನ್ನ ತಲೆಯ ಮೇಲೆ ಒಂದು ಬೊಗಸೆ ನೀರು ಹಾಕಬೇಕು. ನನ್ನ ವಂಶಸ್ಥರ ಮನೆಯಲ್ಲಿ ಹಸು ಅಥವಾ ಎಮ್ಮೆ ಕರು ಹಾಕಿದರೆ ಅದರ ಬೆಣ್ಣೆಯನ್ನು ನನ್ನ ತಲೆಗೂ ಬಾಯಿಗೂ ಹಾಕಿ ಪೂಜೆ ಮಾಡಬೇಕೆಂದು' ಜಿರಲೆ ಮಲ್ಲಮ್ಮನೇ ನೇರವಾಗಿ ಭಕ್ತರನ್ನು ನಿವೇದಿಸಿಕೊಂಡಿದ್ದಾಳೆ. ಈಗಲೂ ಈ ಶಿಲ್ಪ ನಿತ್ಯ ಪೂಜೆಗೊಳ್ಳುತ್ತಿದೆ. ಬಿಜ್ಜಾವರದ ಈಶ್ವರ ದೇವಾಲಯದಲ್ಲಿ ಶಿವಲಿಂಗ ಮತ್ತು ನಂದಿಗಳು ಪೂರ್ಣಶಿಲ್ಪಗಳಾಗಿದ್ದು, ಆ ನಂದಿ ವಿಗ್ರಹವು ದಪ್ಪ ತಲೆಯ ಸದೃಢ ದೇಹವನ್ನು ಹೊಂದಿದ್ದು, ಕೊರಳನ್ನು ಗಂಟೆಸರಗಳಿಂದ ಅಲಂಕರಿಸಲಾಗಿದೆ. ಇದರ ವಿಶೇಷವೆಂದರೆ ನಂದಿ ಪಾದದ ಬಳಿ ಒಬ್ಬ ವ್ಯಕ್ತಿ ಕೈಮುಗಿದು ಕುಳಿತ ಉಬ್ಬುಕೆತ್ತನೆ ಇದೆ. ಈ ಶಿಲ್ಪ ದೇವಾಲಯದ ಸ್ಥಾಪಕ ಹಿರೇಚಿಕ್ಕಪ್ಪಗೌಡರದಾಗಿರಬಹುದು. ಈ ರೀತಿಯ ಇನ್ನೊಂದು ವಿಗ್ರಹ ಬಿಜ್ಜಾವರದ ಕೆರೆಯಲ್ಲಿದ್ದು, ಇದು ಆತನ ಹೆಂಡತಿ ಹಿರಿಯಮ್ಮನ ಶಿಲ್ಪವಿರಬಹುದು. ಇವಲ್ಲದೆ ಬಿಜ್ಜಾವರದಲ್ಲಿ ಚಪ್ಪಟೆಯಾದ ಮೇಲ್ಮೈಯಿಂದ ಮುಂದಕ್ಕೆ ಉಬ್ಬಿದಂತೆ ಕಾಣುವ ಶಿಲ್ಪರಚನೆ, ವೀರಗಲ್ಲುಗಳ ಶಿಲ್ಪಗಳು, ಸತಿಶಿಲ್ಪಗಳು, ಲತಾಂಗಿಯರ ಶಿಲ್ಪಗಳು ಇವೆ.

ಕಳಲೆ ಮನೆತನದ ಬಯಲಿನಲ್ಲಿ ಹಿಂದೆ ಇದ್ದ ಅರಮನೆಗೆ ಪಟ್ಟದ ಚಾವಡಿ ಎಂದು ಕರೆಯುತ್ತಿದ್ದರು. ಈ ಅರಮನೆಯಲ್ಲಿ ಅರಸರಿಗೆ ಪಟ್ಟಗಟ್ಟುತ್ತಿರಬೇಕು. ಇದರ ಮುಂದೆ ಇರುವ ಇಟ್ಟಿಗೆ ಮಾಳಮ್ಮನ ಆಲಯವು ಸುಂದರವಾಗಿದ್ದು, ಇಟ್ಟಿಗೆ, ಗಾರೆಗಳಿಂದ ನಿರ್ಮಾಣಗೊಂಡ ಚಿಕ್ಕ ಕಟ್ಟಡವಿದ್ದು, ಈ ಕಟ್ಟಡವು ಕಳಲೆಯ ಪ್ರಭು ಲಕ್ಷ್ಮೀಕಾಂತ ಒಡೆಯರ ಪತ್ನಿ ರಾಣಿ ಲಿಂಗಾಜಮ್ಮಣ್ಣಿಯವರ ಸ್ಮರಣಾರ್ಥವಾಗಿ ನಿರ್ಮಿಸಲಾಗಿದೆ. ಅಲ್ಲದೆ ಮರದ ಬಾಗಿಲುಗಳ ಮೇಲೆ ಪತಿಯನ್ನು ಆಲಂಗಿಸಿಕೊಂಡು ಮುದ್ದಿಸುತ್ತಿರುವ ಮೂರು ಅಡಿಗಳ ಎತ್ತರದ ಶಿಲ್ಪಗಳು ಮರದ ಬಾಗಿಲುಗಳ ಮೇಲಿವೆ. ಕಳಲೆ ಲಕ್ಷ್ಮೀಕಾಂತ ದೇವಾಲಯದಲ್ಲಿರುವ ಬೆಳ್ಳಿಯ ಪಾತ್ರೆಗಳ

ಮೇಲಿನ ಶಾಸನವು ಇವುಗಳನ್ನು ನಂಜರಾಜ, ಲಕ್ಷ್ಮಮ್ಮಣ್ಣಿ, ಚೆಲುವೆ ಅರಸು, ಟಿಪ್ಪು ಸುಲ್ತಾನರು ದಾನ ನೀಡಿರುವುದನ್ನು ಸೂಚಿಸಿದರೆ, ಒಂದು ಗಂಟೆಯ ಮೇಲಿನ ಬರಹದ ಪ್ರಕಾರ ಚಾಮರಾಜ ಒಡೆಯರ ಪಟ್ಟದ ಅರಸಿ ಲಕ್ಷ್ಮಮ್ಮಣ್ಣಿಯವರು ನೀಡಿದ ದಾನವೆಂದು ಗೊತ್ತಾಗುತ್ತದೆ.

ಹಾಲೇರಿಯಲ್ಲಿದ್ದ ಅರಮನೆ, ಮಡಿಕೇರಿಯ ರಾಜರ ಗದ್ದುಗೆಗಳಲ್ಲಿ ಅವರ ರಾಣಿಯರ ಸಮಾಧಿಗಳು ಇವೆ.

ಕ್ರಿ.ಶ.ಸು.೧೫೦೦ರಲ್ಲಿ ಸುಗಟೂರನ್ನು ಆಳಿದ ಚಿಕ್ಕತಮ್ಮಗೌಡನ ಅಕ್ಕನಾದ ಹಲಸರಾ ಎಂಬುವಳು ಆವನಿ ಬೆಟ್ಟದ ಧನುಷ್ಕೋಟಿ ತೀರ್ಥದ ಉತ್ತರ ಕಡೆಯ ಬಂಡೆಯ ಮೇಲಿರುವ ಶಾಸನದ ಬಳಿಯಲ್ಲಿ ೧೬ ದೇವತೆಗಳ ಏಕಪಾದಗಳ ರೇಖಾಶಿಲ್ಪಗಳನ್ನು ಬಿಡಿಸಿ, ಅವುಗಳ ಕೆಳಗೆ ವಿಷ್ಣು, ರುದ್ರ, ರಾಮ, ಸೀತೆ, ಕಾರ್ತಿಕೇಯ, ಕಾಮದೇವ ದಕ್ಷಿಣಾಗ್ನಿ, ಅಹವಾನಿಯ, ಗಾರ್ಹಸ್ಪತ್ಯ ಮತ್ತು ವಾಲ್ಮೀಕಿ ಎಂದು ದೇವತೆಗಳ ಮತ್ತು ಋಷಿಗಳ ಹೆಸರುಗಳನ್ನು ಕೆತ್ತಿಸಿ, ಪಿತೃಗಳಿಗೆ ಪಿಂಡದಾನ ಪ್ರವಾಸ ಮಾಡಿರುವ ವಿಷಯವು ಶಾಸನದಿಂದ ತಿಳಿದುಬರುತ್ತದೆ.

ಜವಳಗೆರೆ ರಾಣಿ ಉಮನಾಬಾಯಿಯ ಸಮಾಧಿಯು ಉಪ್ಪಳದಲ್ಲಿದೆ ಎಂದು ಪ್ರೊ.ಶಾಶ್ವತಸ್ವಾಮಿ ಮುಕ್ಕುಂದಿಮಠರು ದಾಖಲಿಸಿದ ಹಿನ್ನೆಲೆಯಲ್ಲಿ ನಾನು ಉಪ್ಪಳಕ್ಕೆ ಕ್ಷೇತ್ರಕಾರ್ಯ ಕೈಗೊಂಡೆನು. ರಾಯಚೂರ ಜಿಲ್ಲೆಯ ಸಿಂಧನೂರಿನಿಂದ ಬಳ್ಳಾರಿಗೆ ಹೋಗುವ ಮಾರ್ಗಮಧ್ಯದಲ್ಲಿ ಬರುವ ದಡೇಸುಗೂರನಿಂದ ಆರು ಕಿ.ಮೀ. ಅಂತರದಲ್ಲಿರುವ ಉಪ್ಪಳವು ಒಂದು ಪುಟ್ಟ ಗ್ರಾಮವಾಗಿದೆ. ಜವಳಗೆರೆ ರಾಣಿ ಉಮನಾಬಾಯಿಯು ತನ್ನ ಬೇಸಿಗೆಯ ದಿನಗಳನ್ನು ಕಳೆಯುತ್ತಿದ್ದಳೆನ್ನಲಾದ ಕಟ್ಟಿಗೆಯ ಅರಮನೆಯು ಇನ್ನಿಲ್ಲದಂತೆ ನೆಲಸಮವಾಗಿರುವುದು ವಿಷಾದನೀಯ ಸಂಗತಿ. ರಾಣಿಯ ಅರಮನೆ ಕಟ್ಟಿಗೆಗಳು ಯಾರ ಮನೆಯ ಕಿಟಕಿ, ಬಾಗಿಲು, ತೊಲೆಗಳಾಗಿವೆಯೋ ತಿಳಿಯದು. ಅಲ್ಲಿಯ ಕಲ್ಲುಗಳು ಯಾರ ಮನೆಯ ಅಡಿಪಾಯಗಳಾಗಿವೆಯೋ ತಿಳಿಯದು. ತುಂಗಭದ್ರಾ ನದಿಯ ಪ್ರವಾಹ ಬಂದುದರಿಂದ ಅವೆಲ್ಲ ಹಾಳಾಗಿವೆ ಎಂದು ಸ್ಥಳೀಯರು ಹೇಳುತ್ತಾರೆ. ಈಗಿರುವ ಕರಿಲಿಂಗೇಶ್ವರ ಮಠದ ಹತ್ತಿರದ ಗದ್ದೆಯಲ್ಲಿ ಹುಣಸೆ ಮರದ ಕೆಳಗೆ ರಾಣಿಯ ಸಮಾಧಿ ಇತ್ತೆಂದು ಈಗ ಅದನ್ನು ನೆಲಸಮಗೊಳಿಸಿ, ಹುಣಸೆ ಮರವನ್ನು ಕಡಿದು, ಐತಿಹಾಸಿಕ ಪ್ರತೀಕವಾದ ಸಮಾಧಿ, ಅರಮನೆಗಳ ಸುಳಿವೇ ಇಲ್ಲದಂತಾಗಿರುವುದು ನಮ್ಮ ದುರದೃಷ್ಟವೇ ಎನ್ನಬಹುದು.

ಗೆಜ್ಜಲಗಟ್ಟೆಯ ರಾಣಿ ಲಕ್ಷ್ಮೀದೇವಿಯ ವಂಶಜರು ಗೆಜ್ಜಲಗಟ್ಟೆ, ಲಿಂಗಸೂಗು, ಬಳ್ಳಾರಿ ಭಾಗಗಳಲ್ಲಿ ವಾಸವಾಗಿದ್ದಾರೆ. ಈ ಮನೆತನದ ಅಮೂಲ್ಯ ವಸ್ತುಗಳು ಈಗಲೂ ಇದ್ದು, ವಿಶೇಷವಾಗಿ ರಾಣಿ ಲಕ್ಷ್ಮೀದೇವಿಯನ್ನು ಹಾಗೂ ಇತರ ರಾಣಿಯನ್ನು ಹೊತ್ತು ಒಯ್ಯುವ

'ಮೇನೆಗಳು' ಇಂದಿಗೂ ಸುರಕ್ಷಿತವಾಗಿವೆ. ರಾಣಿ ಲಕ್ಷ್ಮಿದೇವಿಯು ಕ್ರಿ.ಶ.೧೯೧೬ರಲ್ಲಿ ಇಹಲೋಕ ಮಣಿಹವನ್ನು ಮುಗಿಸಿದಳು. ಈ ರಾಣಿಯ ಸಮಾಧಿಯನ್ನು ಅವಳ ಗುರು ಕೋಡಿಹಾಳ ಮಠದ ಬಸವಲಿಂಗ ಸ್ವಾಮಿಗಳ ಗದ್ದುಗೆಯ ಪಕ್ಕದಲ್ಲಿದೆ ಎಂಬುದಾಗಿ ಡಾ.ಶಾಶ್ವತಸ್ವಾಮಿ ಮುಕ್ಕುಂದಿಮಠರು ದಾಖಲಿಸಿದ್ದಾರೆ. ಆದರೆ ನಾನು ಕ್ಷೇತ್ರಕಾರ್ಯ ಕೈಗೊಂಡಾಗ ಲಿಂಗಸೂರಿನಿಂದ ೩೦ ಕಿ.ಮೀ. ಅಂತರದಲ್ಲಿರುವ ಗೆಜ್ಜಲಗಟ್ಟೆ ರಾಣಿಯ ಮನೆತನದವರು ಇಲ್ಲಿ ಇರುವುದು ತಿಳಿದುಬಂದಿದೆ. ರಾಣಿಯು ೩೦ ಎಕರೆ ಜಮೀನನ್ನು ಕೋಡಿಹಾಳ ಮಠದ ಸ್ವಾಮಿಗಳಿಗೆ ನೀಡಿ ಅವರನ್ನು ನಿತ್ಯ ಪೂಜೆಗಾಗಿ ಗೆಜ್ಜಲಗಟ್ಟೆಯಲ್ಲಿ ಇರುವಂತೆ ಮಾಡಿದಳೆಂದು ಅಲ್ಲಿನ ಸ್ಥಳೀಯರ ಅಭಿಮತ.

ಕೋಡಿಹಾಳ ಮಠವು ಒಂದು ಚಿಕ್ಕ ಸಂಸಾರಿ ಮಠವಾಗಿದ್ದು, ಅಲ್ಲಿ ಗುರು ಕೋಡಿಹಾಳ ಮಠದ ಬಸವಲಿಂಗ ಸ್ವಾಮಿಗಳ ಗದ್ದುಗೆಯು ಎತ್ತರವಾಗಿದ್ದು, ಈ ಗುದ್ದುಗೆಯ ಎದುರಿನಲ್ಲಿ ನೆಲಸಮವಾದ ಗದ್ದುಗೆಯೊಂದು ಇದೆ. ಇದೇ ರಾಣಿ ಲಕ್ಷ್ಮೀದೇವಿಯ ಗದ್ದುಗೆ ಎಂಬುದಾಗಿ ತಿಳಿದುಬರುತ್ತದೆ. ಇದು ನೆಲಸಮವಾಗಿರಲು ಕಾರಣ 'ಗುರುವಿಗೆ ತಾನು ಎಂದಿಗೂ ಶರಣು' ಎಂಬುದರ ದ್ಯೋತಕವಾಗಿರಬಹುದು. ಇದು ವಿಶೇಷ ಗದ್ದುಗೆಯಾಗಿದೆ. ಹೀಗೆ ಕರ್ನಾಟಕದಲ್ಲಿ ಲಿಂಗಾಯತರಾಣಿಯರ ಚರಿತ್ರೆಯನ್ನು ನಿರೂಪಿಸುವ ಕಾವ್ಯಕೃತಿಗಳು ಶಾಸನಕೃತಿಗಳು, ವಿದೇಶಿ ವರದಿಗಳು ಹಾಗೂ ಸ್ಮಾರಕಗಳು ಆಕರಗಳಾಗಿ ದೊರೆಯುತ್ತದೆ. ಇವುಗಳ ಸಹಾಯದಿಂದ ರಾಣಿಯರ ಚರಿತ್ರೆಯನ್ನು ದಾಖಲಿಸಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ಹಳಕಟ್ಟಿ ಫ.ಗು., **ಹರಿಹರನ ರಗಳೆಗಳು,** ೧೯೬೮, ಪು.೩೩೨

೨. ಅದೇ, ಪು.೩೩೬

೩. ವಿರೂಪಾಕ್ಷ ಪಂಡಿತ, **ಚನ್ನಬಸವಪುರಾಣ,** ೧೯೩೪, ಪು.೬೫೭

೪. ಹಿರೇಮಠ ಆರ್.ಸಿ., ಸುಂಕಾಪುರ ಎಂ.ಎಸ್., **ಶಾಂತಲಿಂಗ ದೇಶಿಕ ಕೃತ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ,** ಭಾಗ-೧, ೧೯೬೪, ಪು.೩೮೩

೫. ಅದೇ, ಪು.೩೮೭

೬. ವಿದ್ಯಾ ಮತ್ತು ಪಂಡಿತ, **ಲಕ್ಕಣ ದಂಡೇಶ ವಿರಚಿತ ಶಿವತತ್ವ ಚಿಂತಾಮಣಿ,** ೧೯೬೦, ಪು.೩೫೬

೭. ಶಾಮಾಶಾಸ್ತ್ರಿ ಆರ್., **ಲಿಂಗಣ್ಣ ಕವಿ ವಿರಚಿತ ಕೆಳದಿ ನೃಪವಿಜಯ,** ೧೯೭೩, ಪು.೧೦

೮. ಅದೇ, ಪು.೧೧೬

೯. ಅದೇ, ಪು.೧೮೯

೧೦. ಮಲ್ಲೇಪುರಂ ಜಿ.ವೆಂಕಟೇಶ, **ಶಿವತತ್ವ ರತ್ನಾಕರ**, ೧೯೯೯, ಪು.೮೬೯

೧೧. ಕೆಳದಿ ವೆಂಕಟೇಶ ಜೋಯಿಸ, ಕೆಳದಿ ಲಿಂಗಣ್ಣ ಕವಿಯ **ಪಾರ್ವತಿ ಪರಿಣಯ**, ಪ್ರಸ್ತಾವನೆ.

೧೨. ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., **ಕೆಳದಿ ಸಂಸ್ಥಾನದ ಸಮಗ್ರ ಅಧ್ಯಯನ**, ೧೯೯೪, ಪು.೩೯೦

೧೩. ಹಿರೇಮಠ ಬಿ.ಆರ್., **ಸೋದೆ ಸದಾಶಿವರಾಯನ ಕೃತಿಗಳು** ೧೯೯೫, ಪು.೯

೧೪. ಬಸವರಾಜು ಎಲ್., **ಮಹದೇವನ ಲಿಂಗೇಂದ್ರ ವಿಜಯ**, ೧೯೭೧, ಪು.೩೨೮

೧೫. ವೀರರಾಣಿ ಮಲ್ಲಮ್ಮ ಬೆಳವಡಿ, **೩ನೇ ಶತಮಾನೋತ್ಸವ ಸ್ಮರಣ ಸಂಚಿಕೆ**, ೧೯೭೯.

೧೬. **ಮೈಸೂರು ಸಂಸ್ಥಾನದ ಪ್ರಭುಗಳು ಶ್ರೀಮನ್ಮಹಾರಾಜರ ವಂಶಾವಳಿ, ಭಾಗ-೧**, ೧೯೧೬, ಪು.೧೫೫

೧೭. ಸಣ್ಣಯ್ಯ ಬಿ.ಎಸ್., **ದೇವಚಂದ್ರನ ರಾಜಾವಳಿ ಕಥಾಸಾರ**, ಹೊಸಗನ್ನಡ ಅನುವಾದ, ೨೦೦೦, ಪು.೩೧೯

೧೮. ಅದೇ, ಪು.೩೪೬

೧೯. ಅದೇ, ಪು.೩೪೮

೨೦. ಮಂಜಪ್ಪಶೆಟ್ಟಿ ಎಂ.ಪಿ., **ಚೆಲುವಾಂಬೆಯ ಕೃತಿಗಳು**, ೧೯೮೪, ಪು.೧೦

೨೧. ಅದೇ, ಪು.೧೦

೨೨. ನಾಗರಾಜಯ್ಯ ಹಂ.ಪ., ಭೋಯಿ ಮ.ಬಾ., **ತಿರುಮಲಾರ್ಯ ವಿರಚಿತ ಚಿಕ್ಕದೇವರಾಯ ವಂಶಾವಳಿ**, ೧೯೮೧, ಪು.೯೪

೨೩. ಹನುಮಾಕ್ಷಿ ಗೋಗಿ, **ಅನುಶಾಸನ**, ೨೦೦೨, ಪು.೩೧೦

೨೪. ಅದೇ, ಪು.೩೧೧

೨೫. ವೀರಣ್ಣ ರಾಜೂರ, **ಹಾನಗಲವಾಡಿ ಮದ್ವೀರಸ್ವಾಮಿ ಸ್ವರವಚನಗಳು**, ೧೯೮೭, ಪು.VI

೨೬. ಮಲ್ಲಿಕಾರ್ಜುನ, **ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ**, ೧೯೯೭, ಪು.VII

೨೭. ಪಾಟೀಲ ಎಸ್.ಪಿ., ಬುಕ್ಕರಾಯ ಚರಿತೆ, ೨೦೦೨, ಪು.೬೮

೨೮. ಅದೇ, ಪು.೭೧

೨೯. ಗುರಜಾಡ ಅಪ್ಪರಾವು, ಹಂಡೆ ಅನಂತಪುರ ಸ್ಥಾನಿಕ ಚರಿತ್ರ, ೨೦೦೩, ಪು.೭೫

೩೦. ಕರ್ನಾಟಕ ಗಡಿಗೆರೆಗಳು, ೧೯೪೯, ಪು.೩೭

೩೧. ಕೃಷ್ಣರಾವ್ ಎಂ.ವಿ., ಹಾಲಪ್ಪ ಗ.ಸ., ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಭಾಗ-೧, ೧೯೬೨, ಪು.೧೪೬

೩೨. ಕನ್ನಡ ನಿಘಂಟು, ೧ನೇ ಸಂಪುಟ, ಅ-ಔ, ೧೯೭೦, ಪು.೧೧೭೬

೩೩. ಕಿಟಲ್ ಎಫ್., ಕನ್ನಡ ಇಂಗ್ಲಿಷ್ ಡಿಕ್ಷನರಿ, ೨೦೦೭, ಪು.೨೯೫

೩೪. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯ ಕೋಶ, ೨೦೦೬, ಪು.೪೮೧

೩೫. ಬಾಳಣ್ಣ ಸೀಗಿಹಳ್ಳಿ, ಫ.ಗು.ಹಳಕಟ್ಟಿ ಸಮಗ್ರ ಸಾಹಿತ್ಯ, ಸಂ.೧೩, ೨೦೦೯, ಪು.೮೫೧

೩೬. ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., ಕೆಳದಿ ಸಂಸ್ಥಾನದ ಸಮಗ್ರ ಅಧ್ಯಯನ, ೧೯೯೪, ಪು.೪೩

೩೭. ಅದೇ, ಪು.೪೩

೩೮. ಕರಿಬಸಪ್ಪ ಕೆ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು.

೩೯. ಮರುಳಯ್ಯ ಸಾ.ಶಿ., ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಪು.೫೨

೪೦. ಅದೇ, ಪು.೫೩

೪೧. ಶಿವಣ್ಣ ಕೆ.ಎಸ್., ಕಳಲೆ ಮನೆತನದ ವೀರಶೈವ ದಳವಾಯಿಗಳು, ಪು.೧೭೪

೪೨. ಕೃಷ್ಣಮೂರ್ತಿ ಪಿ.ವಿ., ಸುಗಟೂರು ವೀರಶೈವ ಅರಸು ಮನೆತನ, ಪು.೧೦

೪೩. ಅದೇ, ಪು.೧೧

೪೪. ಶಿವಣ್ಣ ಕೆ.ಎಸ್., ಕಳಲೆ ವೀರಶೈವ ದಳವಾಯಿಗಳು, ಪು.೩೦

೪೫. ಅದೇ, ಪು.೩೭

೪೬. ಶ್ರೀನಿವಾಸ ಎಂ.ಡಿ., ಮಧುಗಿರಿ ಇತಿಹಾಸ, ೧೯೮೭, ಪು.೪೫

೪೭ ಮುಳಗುಂದ ಚ.ವಿ., ಮಾತೋಶ್ರೀ, ೧೯೮೬, ಪು.೦೬

೪೮. ಪಂಡಿತೆ ಸೀತಮ್ಮ ಚೇಲಿ, ಕೆಳದಿ ರಾಣಿ ಚೆನ್ನಮ್ಮಾಜಿ, ೧೯೬೩, ಪು.೭೫

೪೯. ಮೂಗಿ ದೊಡ್ಡಭಾವೆಪ್ಪ, ಕಿತ್ತೂರ ಕಾಳಗ, ೧೯೫೯, ಪು.೮

೫೦. ಅದೇ, ಪು.೧೮

೫೧. ಅದೇ, ಪು.೧೮

೫೨. ಅದೇ, ಪು.೨೩

೫೩. ಅದೇ, ಪು.೨೩

೫೪. ಕೊಂಗವಾಡ ಜಿ.ವ್ಹಿ., ಕಿತ್ತೂರ ಇತಿಹಾಸ, ೧೯೯೮, ಪು.೭೦

೫೫. ಅದೇ, ಪು.೭೪

೫೬. ಅದೇ, ಪು.೫

೫೭. ಚೆನ್ನಕ್ಕ ಪಾವಟೆ, ರಾಣಿ ಬೆಳವಡಿಮಲ್ಲಮ್ಮ, ೨೦೧೦, ಪು.೪೭

೫೮. ಹನುಮಾಕ್ಷಿ ಗೋಗಿ, ಸುರಪುರ ತಾಲೂಕಿನ ಶಾಸನಗಳು, ೧೯೯೫, ಪು.೧೫

೫೯. ಅದೇ, ಪು.೨೧೯

೬೦. ಮುನಿಸ್ವಾಮಿ ಆರ್., ಭಾರತದ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ, ಬಿಜಾಪುರ ಜಿಲ್ಲೆ, ೧೯೯೯, ಪು.೯೪

೬೧. ಮುಳಗುಂದ ಚಿ.ವಿ., ಮಾತೋಶ್ರೀ, ೧೯೮೬, ಪು.೧೫೬

೬೨. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು, ಪು.೩೮

೬೩. ಯತೀಶ್ವರ ಸಿ.ಚಿ., ಸುಗ್ಗಲೆ, ೨೦೧೦, ಪು.೫

೬೪. ಎ.ಕ., ೧೩, ತೀರ್ಥಹಳ್ಳಿ, ೨೦೦೬, ಪು.೨೪೪

೬೫. ಅದೇ, ಪು.೨೭೭

೬೬. ಕೆಳದಿ ವೆಂಕಟೇಶ ಜೋಯಿಸ, ಕೆಳದಿ ಅರಸರ ಶಾಸನ ಸಂಪುಟ, ೧೯೯೧, ಪು.೨೮೩

೬೭. ಅದೇ, ಪು.೨೯೭

೬೮. ಎ.ಕ.೧೩, ಶಿವಮೊಗ್ಗ ಜಿಲ್ಲೆ, ೨೦೦೬, ಪು.೨೪೫

೬೯. ಕೆಳದಿ ವೆಂಕಟೇಶ ಜೋಯಿಸ, ಕೆಳದಿ ಅರಸರ ಶಾಸನ ಸಂಪುಟ, ೧೯೯೧, ಪು.೩೨೮

೭೦. ಎ.ಕ.೧೩, ಶಿವಮೊಗ್ಗ ಜಿಲ್ಲೆ ೨೦೦೭, ಪು.೨೭೦

೭೧. ಅದೇ, ಪು.೨೭೧

೭೨. ಅದೇ, ಪು.೨೮೬

೭೩. ಎ.ಕ.೧೩, ಪು.೨೮೯

೭೪. ಅದೇ, ಪು.೨೯೦

೭೫. ಅದೇ, ಪು.೩೩೧

೭೬. ಕೆಳದಿ ವೆಂಕಟೇಶ ಜೋಯಿಸ, ಕೆಳದಿ ಅರಸರ ಶಾಸನ ಸಂಪುಟ, ೧೯೯೧, ಪು.೩೦೮

೭೭. ಎ.ಕ.ಸಂ.೮, ಸೊರಬ, ೧೯೮೪, ಪು.೪೪೭

೭೮. ಮುಳಗುಂದ ಚ.ವಿ., ಮಾತೋಶ್ರೀ, ೧೯೮೬, ಪು.೨೨೧

೭೯. ಎ.ಕ.೧, ಕೊಡಗು ಜಿಲ್ಲೆ, ಪು.೨೨

೮೦. ಅದೇ, ಪು.XXXVII

೮೧. ಶಿವಾನಂದ ವಿ., ಉತ್ತರ ಭಾರತದ ಹಸ್ತಪ್ರತಿ ಸೂಚಿ ಹಾಗೂ ಇತರ ದಾಖಲೆಗಳು, ೧೯೯೨, ಪು.೭೪

೮೨. ಸೂರ್ಯನಾಥ ಕಾಮತ್, ಕೊಡಗಿನ ಇತಿಹಾಸ ವಿಚಾರ ಸಂಕಿರಣ, ೧೯೮೦, ಪು.೬೭

೮೩. ಶಿವಣ್ಣ ಕೆ.ಎಸ್., ಕಳಲೆ ಮನೆತನದ ವೀರಶೈವ ದಳವಾಯಿಗಳು, ೧೯೯೪, ಪು.೨೨೧

೮೪. ಎ.ಕ.IV ಎಳಂದೂರು, ಮಲ್ಹಾರಪಾಳ್ಯ, ೧೮೭೫, ಪು.೩೭೨

೮೫. ಕಲಬುರ್ಗಿ ಎಂ.ಎಂ., ಸಾರಂಗಶ್ರೀ, ೧೯೯೪, ಪು.೨೮೨

೮೬. ಶಿವಣ್ಣ ಕೆ.ಎಸ್., ಕಳಲೆ ಮನೆತನದ ವೀರಶೈವ ದಳವಾಯಿಗಳು, ೧೯೯೪, ಪು.೨೩೫

೮೭. ಅದೇ, ಪು.೨೨೧

೮೮. ದೇಸಾಯಿ ಪಿ.ಬಿ., ಕರ್ನಾಟಕ ಇನ್ಸ್ಕ್ರಿಪ್ಷನ್ಸ್ ಸೀರೀಸ್, ಭಾಗ-೪, ಪು.೨೭೩

೮೯. ಅದೇ, ಪು.೨೭೪

೯೦. ಎ.ಕ.೧೩, ಶಿವಮೊಗ್ಗ ಜಿಲ್ಲೆ, ೨೦೦೭, ಪು.೨೯೬

೯೧. ಅದೇ, ಪು.೨೪೧

೯೨. ಪಂಜೆರಾಮರಾಯರು, **ಪಂಜೆಯವರ ಕೃತಿಗಳು, ಉಪನ್ಯಾಸಗಳು ಮತ್ತು ಸಂಶೋಧನೆಗಳು,** ೧೯೭೩, ಪು.೭೪

೯೩. ಕಲಬುರ್ಗಿ ಎಂ.ಎಂ., **ಸಾರಂಗಶ್ರೀ,** ೧೯೯೪, ಪು.೪೬

೯೪. ಚೆನ್ನಬಸಪ್ಪ ಎನ್.ಪಾಟೀಲ, ಪಾಟೀಲ ವಿನೋದಾ, **'ಬಳ್ಳಾರಿ ಜಿಲ್ಲೆಯ ಶಾಸನಗಳು',** ೧೯೯೭, ಪು.೨೧

೯೫. ಚೆನ್ನಬಸವಯ್ಯ ಹಿರೇಮಠ, **ಕುರಗೋಡು ಸಿಂಧರು: ಒಂದು ಅಧ್ಯಯನ,** ೧೯೯೫, ಪು.೩೬

೯೬. ಶ್ರೀನಿವಾಸ ಎಂ.ಡಿ., **ಮಧುಗಿರಿ ಇತಿಹಾಸ,** ೧೯೮೭, ಪು.೧೪೨

೯೭. ಎ.ಕ.೧೦, ಹಾಸನ ಜಿಲ್ಲೆ, ೧೯೯೭

೯೮. ಎ.ಕ.೧೭, **ಸುಗಟೂರು ವೀರಶೈವ ಅರಸು ಮನೆತನ,** ಪು.೧೩೮

೯೯. ಕೃಷ್ಣಮೂರ್ತಿ ಪಿ.ವಿ., **ಸುಗಟೂರು, ವೀರಶೈವ ಅರಸುಮನೆತನ,** ೧೯೯೪, ಪು.೧೩೮

೧೦೦. ಅದೇ, ಪು.೧೪೪

೧೦೧. ಅದೇ, ಪು೧೫೦

೧೦೨. ಕಲಬುರ್ಗಿ ಎಂ.ಎಂ., **ಕರ್ನಾಟಕ ಕೈಫಿಯತ್ತುಗಳು,** ೧೯೯೪, ಪು.೧೪೦

೧೦೩. ಅದೇ, ಪು.೧೪೧

೧೦೪. ಅದೇ, ಪು.೧೪೧

೧೦೫. ಅದೇ, ಪು.೧೫೧

೧೦೬. ಅದೇ, ಪು.೧೯೯

೧೦೭. ಅದೇ, ಪು.೨೦೫

೧೦೮. ಪುಟ್ಟಸ್ವಾಮಿ ಬಿ.ಎಸ್., **ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು,** ೨೦೧೨, ಪು.೧೮೬

೧೦೯. ಕಲಬುರ್ಗಿ ಎಂ.ಎಂ., **ಕರ್ನಾಟಕ ಕೈಫಿಯತ್ತುಗಳು,** ೧೯೯೪, ಪು.೪೫೮

೧೧೦. ಮುಳಗುಂದ ಚ.ವಿ., **ಮಾತೋಶ್ರೀ,** ೧೯೮೬, ಪು.೧೯೧

೧೧೧. **ಕೊಡಗು ಸಂಸ್ಥಾನದ ರಾಜೇಂದ್ರನಾಮೆ,** ೧೯೫೭, ಪು.೨

೧೧೨. ಅದೇ, ಪು.೧೬

೧೧೩. ಅದೇ, ಪು.೨೯೬

೧೧೪. ಅದೇ, ಪು.೩೦೪

೧೧೫. ಪುರುಷೋತ್ತಮ ಬಿಳಿಮಲೆ, ಲಿಂಗರಾಜನ ಹುಕುಂನಾಮೆ, ೧೯೮೫, ಪು.೩೬

೧೧೬. ಕೊಡಗು ಸಂಸ್ಥಾನದ ರಾಜೇಂದ್ರನಾಮೆ, ೧೯೫೭, ೨೦೯

೧೧೭. ಹಾಲಪ್ಪ ಗ.ಸ., ಭಾರತ ಸ್ವತಂತ್ರ ಬೆಳ್ಳಿ ಚುಕ್ಕಿ, ೧೯೬೬, ಪು.೭೬

೧೧೮. ಅದೇ, ಪು.೭೯

೧೧೯. ಕೃಷ್ಣರಾವ್ ಎಂ.ವಿ., ಹಾಲಪ್ಪ ಗ.ಸ., ಹಿ.ಆ.ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಭಾಗ ೧, ೧೯೬೨, ಪು.೧೩೦

೧೨೦. ಮುಳಗುಂದ ಚ.ವಿ., ಮಾತೋಶ್ರೀ, ೧೯೮೬, ಪು.೨೨೭

೧೨೧. ಚಟ್ನಿಸ್ ಎನ್.ಕೆ., ಶೇಷೋಶ್ರೀನಿವಾಸ, ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ, ೧೯೯೯, ಪು.೨೨

೧೨೨. ಕೆಳದಿ ಗುಂಡಾ ಜೋಯಿಸ್, ಕೆಳದಿ ಕಾಲದ ಐತಿಹಾಸಿಕ ದಾಖಲೆಗಳು, ೨೦೦೪, ಪು.೨೦

೧೨೩. ಲಕ್ಷ್ಮಣ ತೆಲಗಾವಿ, ಹರತಿಸಿರಿ, ಪು.೨೨೧

೧೨೪. ಕೆಳದಿ ಗುಂಡಾ ಜೋಯಿಸ್, ಕೆಳದಿ ಕಾಲದ ಐತಿಹಾಸಿಕ ದಾಖಲೆಗಳು, ೨೦೦೪, ಪು.೨೧

೧೨೫. ಅದೇ, ಪು.೫೫

೧೨೬. ಅದೇ, ಪು.೩೨

೧೨೭. ನಾಗೇಗೌಡ ಎಚ್.ಎಲ್., ಪ್ರವಾಸಿ ಕಂಡ ಇಂಡಿಯಾ, ಸಂ.೭, ಪು.೨೧೪

೧೨೮. ಕರ್ನಾಟಕ ಕೈಪಿಡಿ, ೧೯೯೬, ಪು.೪೮

೧೨೯. ನಾಗೇಗೌಡ ಎಚ್.ಎಲ್., ಪ್ರವಾಸಿಕಂಡ ಇಂಡಿಯಾ, ಸಂ.೭, ಪು.೨೦೬

೧೩೦. ಅದೇ, ಪು.೧೩೦

೧೩೧. ಅದೇ, ಪು.೨೪೧

೧೩೨. ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., **ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ,** ೧೯೯೪, ಪು.೯೪

೧೩೩. ಕಲಬುರ್ಗಿ ಎಂ.ಎಂ., **ಕರ್ನಾಟಕ ಕೈಫಿಯತ್ತುಗಳು,** ೧೯೯೪, ಪು.೧೪೧

೧೩೪. ನಾಗೇಗೌಡ ಎಚ್.ಎಲ್., **ಪ್ರವಾಸಿ ಕಂಡ ಇಂಡಿಯಾ,** ಸಂ.೮, ೧೯೯೮, ಪು.೧೦೭

೧೩೫. **ಕರ್ನಾಟಕ ರಾಜ್ಯ ಗ್ಯಾಝೆಟಿಯರ್,** ೧೯೮೫, ಪು.೬೨

೧೩೬. ಲಕ್ಷ್ಮಣ್ ತೆಲಗಾವಿ, **ಕರ್ನಾಟಕ ಪಾಳೇಗಾರರ ನ್ಯಾಯಾಡಳಿತ,** ಪು.೨೦೦

೧೩೭. **ಭಾರತದ ಗೆಝೆಟಿಯರ್,** ೧೯೯೨, ಪು.೯೮

೧೩೮. ಅದೇ, ಪು.೯೭

೧೩೯. ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., **ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ,** ಪು.೪೫೪

೧೪೦. ಶೇಷಶಾಸ್ತ್ರಿ ಆರ್., ಕರ್ನಾಟಕ ವೀರಗಲ್ಲುಗಳು, ೧೯೮೨, ಪು.೧೧೪

೧೪೧. ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ, ಪು.೪೫೪.

# ಅಧ್ಯಾಯ ಮೂರು

# ರಾಣಿಯರು: ಅಧ್ಯಯನದ ಸೈದ್ಧಾಂತಿಕತೆ ಮತ್ತು ಸಾಂಸ್ಕೃತಿಕ ನಿರ್ವಚನ

## ಅಧ್ಯಾಯ ಮೂರು

# ರಾಣಿಯರು: ಅಧ್ಯಯನದ ಸೈದ್ಧಾಂತಿಕತೆ ಮತ್ತು ಸಾಂಸ್ಕೃತಿಕ ನಿರ್ವಚನ

ರಾಣಿಯರ ಕುರಿತು ಅಧ್ಯಯನ ಮಾಡುವಾಗ ಅಧ್ಯಯನದ ಸೈದ್ಧಾಂತಿಕತೆ ಮತ್ತು ಸಾಂಸ್ಕೃತಿಕ ನಿರ್ವಚನ ಕುರಿತು ಚರ್ಚಿಸುವುದು ಅಗತ್ಯವೆನಿಸಿದೆ. ಏಕೆಂದರೆ ಅರಸುಮನೆತನಗಳಲ್ಲಿ ಚಕ್ರವರ್ತಿಗಳು, ಸಾಮಂತರು, ಮಾಂಡಲಿಕರು, ಸಂಸ್ಥಾನಿಕರು, ಪಾಳೇಗಾರರು ಮತ್ತು ನಾಡಪ್ರಭುಗಳು ಹೆಸರಿನ ಪ್ರಭೇದಗಳಿವೆ. ಈ ಎಲ್ಲ ಪ್ರಭೇದಗಳನ್ನು ಅರಸುಮನೆತನಗಳು ಎಂಬ ಹೆಸರಿನಲ್ಲಿ ಸಮೀಕರಿಸಿಕೊಂಡು, ಆ ಅರಸುಮನೆತನಗಳ ಆಳ್ವಿಕೆಯನ್ನು ನೋಡಿಕೊಳ್ಳುವವರನ್ನು ಅರಸರು ಅಥವಾ ರಾಜರು ಎಂದೂ ಪರಿಭಾವಿಸಿಕೊಂಡು ಅಂಥ ರಾಜರ ಸಹಧರ್ಮೀಯರನ್ನು 'ರಾಣಿಯರು' ಎಂದು ನಿರ್ವಚಿಸಲಾಗಿದೆ.

ರಾಣಿಯರ ಸಾಂಸ್ಕೃತಿಕ ನಿರ್ವಚನದಲ್ಲಿ ರಾಣಿ ಪದದ ಅರ್ಥವ್ಯಾಪ್ತಿ, ಅವರ ಚಾರಿತ್ರಿಕ ಹಿನ್ನೆಲೆ ಮತ್ತು ಸ್ತ್ರೀವಾದಿ ಸಂಕಥನದ ದೃಷ್ಟಿಯಿಂದ ಅಧ್ಯಯನ ಸೈದ್ಧಾಂತಿಕತೆಯನ್ನು ನಿರ್ವಚಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಹೀಗೆ ಚಾರಿತ್ರಿಕ ನಿರೂಪಣೆಯ ಸಂದರ್ಭದಲ್ಲಿ ಸ್ತ್ರೀಯನ್ನು ಬದಿಗಿಟ್ಟು, ಪುರುಷ ಪ್ರಧಾನ ಇತಿಹಾಸಕ್ಕೆ ಮಣೆ ಹಾಕಿದ ಅದೆಷ್ಟೋ ಉದಾಹರಣೆಗಳು ಇವೆ. ಅಂದರೆ ಒಂದರ್ಥದಲ್ಲಿ ಭಾರತೀಯ ಸಮಾಜದ ಸ್ತ್ರೀಯರ ಸ್ಥಾನಮಾನಗಳಲ್ಲಿ ವಿರೋಧಾಭಾಸಗಳು ತೋರಿಬಂದರೂ ಮಹಿಳೆಯರ ಶಕ್ತಿ, ಆಸಕ್ತಿಯನ್ನು ದಾಖಲಿಸುವ ಕೆಲಸ ಅಲ್ಲಲ್ಲಿ ನಡೆದಿದೆ. ಈ ಹಿನ್ನೆಲೆಯಲ್ಲಿ ಮಹಿಳೆ ಕುಶಲಮತಿಯಾಗಿ, ಆದರ್ಶ ಮಹಿಳೆಯಾಗಿ ಬೌದ್ಧಿಕ ಬೆಳವಣಿಗೆಗೆ ತನ್ನದೇ ಆದ ಜ್ಞಾನಸಂಪತ್ತನ್ನು ಪಡೆಯುವುದರ ಮೂಲಕ ಸಾಮಾಜಿಕ ಸ್ಥಾನಮಾನವನ್ನು ಹೊಂದಲು ಪ್ರಯತ್ನಿಸಿದ್ದಾಳೆ. ಅಂದರೆ ಮಹಿಳಾ ಬದುಕಿನ ಆದರ್ಶ, ಅವಳ ಅತಂತ್ರ ಬದುಕಿನ ಸ್ಥಿತಿ,

ಅದರಲ್ಲೂ ದೇವದಾಸಿ ಪದ್ಧತಿ, ವಿಧವಾ ಜೀವನಪದ್ಧತಿ, ಕಾನೂನು ಅವಕಾಶಗಳ ವಂಚನೆ ಈ ಎಲ್ಲವುಗಳನ್ನು ಸ್ತ್ರೀಶೋಷಣೆಯ ಹಿನ್ನೆಲೆಯಲ್ಲಿ ಕಾರಣಸತ್ಯವನ್ನು ಕಂಡುಕೊಳ್ಳುವ ಉದ್ದೇಶ ಈ ಅಧ್ಯಯನದಲ್ಲಿ ಸಾಧ್ಯವಾಗಿಸುವ ಪ್ರಯತ್ನವನ್ನು ಮಾಡಲಾಗಿದೆ.

## ೩.೧. ರಾಣಿಯರು: ಅಧ್ಯಯನದ ಸೈದ್ಧಾಂತಿಕತೆ

ಸ್ತ್ರೀವಾದವೆಂಬುದು ಸ್ತ್ರೀಯರ ಸ್ವಾತಂತ್ರ್ಯ ಮಾನವನ ಮರ್ಯಾದೆ ಮತ್ತು ಪುರುಷನ ಸಮಾನ ಹಕ್ಕುಗಳಿಗೆ ನಡೆಸುವ ಹೋರಾಟವೇ ಆಗಿದೆ. ಸಮಾಜದಲ್ಲಿ ಅಮುಖ್ಯಳಾದ ಸ್ತ್ರೀಯ ಹೂತುಹೋದ ಸಂಸ್ಕೃತಿಯನ್ನು ಬೆಳಕಿಗೆ ತರುವುದೇ ಸ್ತ್ರೀವಾದದ ಮುಖ್ಯ ಉದ್ದೇಶ. ಕ್ರಿ.ಶ.೧೮೭೧ರಲ್ಲಿ ಫ್ರೆಂಚ್ ವೈದ್ಯಕೀಯ ಗ್ರಂಥದಲ್ಲಿ ಮೊದಲ ಬಾರಿಗೆ ಸ್ತ್ರೀವಾದವೆಂಬ ಪದವನ್ನು ಬಳಸಲಾಯ್ತು. ಪುರುಷರ ಲೈಂಗಿಕ ಅಂಗಗಳ ಬೆಳವಣಿಗೆ ಕುಂಠಿತವಾದಾಗ ಕಾಣಿಸಿಕೊಳ್ಳುವ ಲಕ್ಷಣವನ್ನು ಗುರುತಿಸಿ ಅದರಿಂದಾಗಿ ಅವರ ದೇಹ 'ಸ್ತ್ರೀ'ತ್ವದಿಂದ ನರಳುತ್ತಿದೆ ಎಂದು ವಿವರಿಸಲು 'ಫೆಮಿನಿಸಂ' ಎಂಬ ಪದ ಬಳಸಲಾಯ್ತು. ನಂತರ ಕ್ರಿ.ಶ.೧೮೭೨ರಲ್ಲಿ ಫ್ರೆಂಚ್ ಲೇಖಕ ಅಲೆಗ್ಸಾಂಡರ ಡೋಮಸ್ ಫೆಮಿನಿಸಂ ಎಂಬ ಪದವನ್ನು ವ್ಯಭಿಚಾರ ಎನ್ನುವ ಪದಕ್ಕೆ ಸಮಾನಾಂತರವಾಗಿ ಬಳಸಿದ. ಕ್ರಿ.ಶ.೧೯೬೦ರ ಅಂತ್ಯದಲ್ಲಿ ಮತ್ತು ೧೯೭೦ರ ಆರಂಭದಲ್ಲಿ ಹೋರಾಟ ನಡೆಸುತ್ತಿದ್ದ ಅನೇಕ ಮಹಿಳಾ ಸಂಘಟನೆಗಳೂ ತಮ್ಮನ್ನು ಸ್ತ್ರೀವಾದಿಗಳೆಂದು ಕರೆದುಕೊಂಡಿರಲಿಲ್ಲ. ಇತ್ತೀಚೆಗಷ್ಟೇ ಮಹಿಳಾ ಹಕ್ಕುಗಳಿಗಾಗಿ ಹೋರಾಟ ನಡೆಸುವ ಎಲ್ಲಾ ಸಂಘಟನೆಗಳನ್ನು ಸ್ತ್ರೀವಾದಿ ಎಂದು ಕರೆಯಲಾಗುತ್ತದೆ. ಸ್ತ್ರೀವಾದದ ಹುಟ್ಟಿಗೆ ಪ್ರೇರಣೆಯಾದದ್ದು ಒಂದು ತುರ್ತುಪರಿಸ್ಥಿತಿ. ಇನ್ನೊಂದು ೧೯೭೫ನೇ ವರ್ಷವನ್ನು ಮಹಿಳಾ ವರ್ಷವೆಂದು ಘೋಷಿಸಿದ್ದು. ಆ ನಂತರ ೧೯೭೫ರಿಂದ ೧೯೮೫ರವರೆಗೆ ಮಹಿಳಾ ದಶಕವೆಂದು ಘೋಷಿಸಿದ್ದು. ಇವೆಲ್ಲವುಗಳ ಕಾರಣವಾಗಿ ಮೂರ್ತರೂಪ ಪಡೆದ ಸ್ತ್ರೀವಾದಿಗಳು ಸ್ತ್ರೀವಾದವನ್ನು ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಮಹಿಳೆಯ ಬದುಕನ್ನು ಗುರುತಿಸುವ ಒಂದು ತಾತ್ವಿಕತೆಯಾಗಿ ಕಾಣುತ್ತಾರೆ. ಸ್ತ್ರೀಯ ಸ್ವಭಾವ, ವರ್ತನೆ ಬದುಕಿನ ರೀತಿ ಎಲ್ಲವೂ ಪೂರ್ವನಿರ್ಣಯಕ್ಕೆ ಒಳಪಟ್ಟಿವೆ. ಒಂದು ಸಮಾಜದ ಸಂರಚನೆಯಲ್ಲಿ ಒಂದು ಸಂಸ್ಕೃತಿಯನ್ನು ಕಟ್ಟುವಲ್ಲಿ ಸ್ತ್ರೀ ಪುರುಷರಿಗೆ ಸಮಾನ ಸಹಭಾಗಿತ್ವ ಇದೆ. ಇದು ಪರಸ್ಪರ ಪೂರಕ ಕ್ರಿಯೆಯಾದರೂ ನಮ್ಮ ಸಂಸ್ಕೃತಿಯೊಳಗೆ ಮಾನವಕೇಂದ್ರಿತ ಸೃಜನಶೀಲತೆಯು ಏಕಜೀವಿ ಕೇಂದ್ರಿತವಾಗಿಯೇ ನಿರ್ವಚನಗೊಂಡಿದೆ. ಹೀಗೆ ನಿರ್ವಚನಗೊಂಡ ಚರಿತೆ, ಅಪೂರ್ಣವಾದದ್ದು. ಹೀಗಾಗಿ ಅಲ್ಲಿ ನಿರ್ವಚನಗೊಳ್ಳುವ ಸೃಜನಶೀಲತೆಯು ದ್ವಿಜೀವಿ(ದ್ವಿಲಿಂಗ) ಕೇಂದ್ರಿತವಾಗಿ ನಿರ್ವಚನಗೊಂಡಾಗ ಈಗಾಗಲೇ ದಾಖಲಾದ ಅರ್ಧ ಚರಿತ್ರೆ ಪೂರ್ಣಗೊಳ್ಳುವುದು.

ಸ್ತ್ರೀವಾದ ಒಂದು ಗಂಭೀರ ಚಿಂತನೆಯಾಗಿದ್ದು, ಸ್ತ್ರೀಯರ ಪರವಾದ ಆಲೋಚನೆಗಳು ಒಂದು ರಾಜಕೀಯ ಹೋರಾಟದಲ್ಲಿ ಮಂಡಿಸುವ ಆಲೋಚನಾ ಕ್ರಮ ಇದಾಗಿದೆ. ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆಗಳಿವೆ ಎಂಬ ಅರಿವಿನೊಂದಿಗೆ ತನ್ನ ಚಿಂತನೆಯನ್ನು ಪ್ರಾರಂಭಿಸುತ್ತದೆ. ಸ್ತ್ರೀಯರ ಸ್ಥಿತಿಗತಿಗಳ ವಿವರಣೆ, ವಿಶ್ಲೇಷಣೆ, ಚಿಂತನೆ, ಮರುಚಿಂತನೆಗಳಲ್ಲಿ ಹೊಸ ಸೈದ್ಧಾಂತಿಕತೆಯನ್ನು ಕಟ್ಟುವ ಅಗತ್ಯವಿದೆ. ಗಂಡಿನ ಯಜಮಾನತ್ವದ ಹಿನ್ನೆಲೆಯಲ್ಲಿ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಹೀಗೆ ಎಲ್ಲ ನೆಲೆಗಳಲ್ಲೂ ಹೆಣ್ಣಿನ ಮೇಲೆ ಆಗುವ ಗಂಡಿನ ದಬ್ಬಾಳಿಕೆಯ ಪ್ರತಿಭಟನೆ ಮಾಡುವುದು. ಬದುಕಿನ ಪ್ರತಿಯೊಂದು ತಿರುವಿನಲ್ಲಿ ನಿರ್ಧಾರಗಳನ್ನು ತೆಗೆದುಕೊಳ್ಳುವವನು. ಅಧಿಕಾರ ಚಲಾಯಿಸುವವನು ಪುರುಷನೇ. ಪುರುಷನನ್ನು ಪ್ರಧಾನಸಂಸ್ಕೃತಿಗೆ ಸೇರಿದವನೆಂದು ಹೆಣ್ಣು ಅಧೀನಸಂಸ್ಕೃತಿಗೆ ಸೇರಿದವಳು, ಒಂದರ್ಥದಲ್ಲಿ ಅವಳು ಪುರುಷ ಪ್ರಧಾನ ಸಂಸ್ಕೃತಿಯೊಳಗೆ ಕರಗಿ ಹೋಗಿ ಬಿಡುವ, ತನ್ನ ಅಸ್ತಿತ್ವವೇ ಇಲ್ಲದಂತಾಗುವ ಭೀತಿ ಇದೆ.

ಸಾಮಾಜಿಕ ರಚನೆಯಲ್ಲಿ ಗಂಡು ಹೆಣ್ಣುಗಳು ಪಡೆಯುವ ಲಿಂಗತ್ವ(ಜಂಡರ್)ವು ಸಾಮಾಜಿಕ ಚಹರೆಯ ಹೆಂಗಸರು ಹಾಗೂ ಗಂಡಸರನ್ನು ಒಟ್ಟಿಗೆ ಸುಳ್ಳುಗಳಲ್ಲಿ, ಭ್ರಮೆಗಳಲ್ಲಿ ಉಳಿಸಿರುತ್ತವೆ. ಈ ಭ್ರಮೆಯಲ್ಲಿ ಸಿಲುಕಿದ ಗಂಡಸರು ಎಲ್ಲ ಹೆಂಗಸರೂ ತಮ್ಮ ಅಧೀನರೆಂದೇ ನಂಬುತ್ತಾರೆ. ಹೆಂಗಸರನ್ನು, ಹೆಣ್ಣು ಬದುಕನ್ನು ನೋಡುವ ಅವರ ನೋಟದಲ್ಲಿ ಯಜಮಾನಿಕೆಯೇ ಆವರಿಸುತ್ತದೆ. ಸ್ತ್ರೀಯರನ್ನು ಸಿದ್ಧಮಾದರಿಯಲ್ಲೇ ಕಾಣಲು ಬಯಸುತ್ತಾನೆ.

### ೩.೧.೧. ಸಿದ್ಧಮಾದರಿಯ ಆರೋಪಿತ ಮೌಲ್ಯಗಳು

ಸಾಮಾಜಿಕವಾಗಿ ಹಕ್ಕು ಬಾಧ್ಯತೆಗಳನ್ನು ಸ್ತ್ರೀ-ಪುರುಷರಿಬ್ಬರಿಗೂ ಸಮಾನವಾಗಿ ಹಂಚಲಾಗಿದೆ ಎಂದು ನಂಬಿಸಲಾಗುತ್ತದೆ. ಶ್ರಮ ವಿಭಜನೆಯಲ್ಲಿ ಉತ್ಪಾದನೆಯ ನೆಲೆ ಗಂಡಸಿಗೂ, ಸೇವೆಯ ನೆಲೆಯನ್ನು ಹೆಂಗಸಿಗೂ ಸ್ಥಿರಮಾದರಿಗಳಾಗಿ ಹಂಚಿದೆ. ಸಾಮಾಜಿಕ ಮೌಲ್ಯಗಳು ಎಂಬ ಸ್ಥಾಪಿತ ನಿಲುವುಗಳು ಸ್ತ್ರೀಗೆ ಆರೋಪಿತವಾದವು. ಇವು ಯಜಮಾನ ನೆಲೆಯ ರಚನೆಗಳೇ ಆಗಿವೆ. ತಾಯಿ, ಹೆಂಡತಿ, ಮಗಳು ಎಂಬ ಪಾತ್ರಗಳಲ್ಲಿ ಹೆಣ್ಣು ಅಧೀನ ನೆಲೆಗೆ ತಲುಪಿದ್ದಾಳೆ. ಪುರುಷ ಅಧೀನತೆಯನ್ನು ಸ್ತ್ರೀ ತನಗರಿವಿಲ್ಲದಂತೆಯೇ ಒಪ್ಪಿಕೊಂಡಿದ್ದಾಳೆ. ಹಾಗಾಗಿಯೇ ಪಂಪಭಾರತದಲ್ಲಿ ಶಂತನು ಮಹಾರಾಜ ಗಂಗೆಯ ಕೈಹಿಡಿದು ಬಾ ಪೋಪೆಮೆಂದಂಗೆ ಮೆಲ್ಲಗೆ ಕನ್ನತ್ವಕ್ಕೆ ನಾಣ್ಚಿ ಬೇಡುವೊಡೆ ನಿವೆಮ್ಮಯ್ಯನಂ ಬೇಡಿ' ಎನ್ನುತ್ತಾಳೆ. ಅಂದರೆ ಸ್ತ್ರೀಗೆ ತನ್ನ ಸಂಗಾತಿಯ ಆಯ್ಕೆಯು ತನ್ನದಲ್ಲ. ಅದು ತಂದೆಯದು. ಇದು ಪುರುಷ ಯಜಮಾನಿಕೆಯ, ಒಡೆನತದ ಸ್ವರೂಪವೇ ಆಗಿದೆ. ಸಿದ್ಧಮಾದರಿಯ ಇಂಥ ಧೋರಣೆಗಳನ್ನು ಒಡೆದು ಮನರಚಿಸು

ವುದು ಸುಲಭದ ಮಾತಲ್ಲ. ಸಾಮಾಜಿಕ ಮೌಲ್ಯಗಳೆಲ್ಲವೂ ಪುರುಷ ಪಕ್ಷಪಾತದವುಗಳೇ. ಹೀಗಾಗಿಯೇ ಕನ್ಯತ್ವ ಪಾತಿವ್ರತ್ಯ, ಮಾತೃತ್ವದಂಥ ಮೌಲ್ಯಗಳು ಸ್ತ್ರೀಯರಿಗೆ ಸೀಮಿತವಾದವು. ಸ್ತ್ರೀಗೆ ತನ್ನದೇ ಆದ ಗತವಿಲ್ಲ. ವರ್ತಮಾನವಿಲ್ಲ. ಭವಿಷ್ಯವಾಗಲಿ ಇಲ್ಲ. ಆಕೆಗೆ ಸ್ವಂತ ವ್ಯಕ್ತಿತ್ವವೇ ಇಲ್ಲವಾಗಿದೆ.

**೨.೧.೨. ತಾಯ್ತನ ಅಥವಾ ಮಾತೃತ್ವ**

ಪ್ರತಿಯೊಬ್ಬ ಸ್ತ್ರೀಯರ ಬದುಕು ಪರಿಪೂರ್ಣವಾಗಬೇಕಾದರೆ ಆಕೆ ತಾಯಿಯಾಗಲೇ ಬೇಕು. ಹೆಣ್ಣು ಜೀವಂತಿಕೆ ಹಾಗೂ ಸೃಷ್ಟಿಶೀಲತೆಯ ಪ್ರತಿರೂಪ. ಹೆಣ್ಣಿನ ಈ ಜೀವಂತಿಕೆ ಹಾಗೂ ಹೆಣ್ಣಿನ ಸೃಷ್ಟಿಶೀಲತೆಯ ಮೇಲೆ ಪುರುಷ ತನ್ನ ಅಧಿಕಾರವನ್ನು ಸ್ಥಾಪಿಸಿಕೊಂಡಿದ್ದಾನೆ. ಮನುಷ್ಯ ಬದುಕಿನ ಚರಿತ್ರೆಯನ್ನು ಪುನರಾವರ್ತಿಸಲು ಅವಳ ತಾಯ್ತನ ಸಹಾಯಕವಾಗುತ್ತದೆ. ಸಮಾಜ ಹೆಣ್ಣಿನ ತಾಯ್ತನಕ್ಕೆ ನೀಡಿರುವ ಅತಿಯಾದ ಭಾವುಕ ಪ್ರಾಧಾನ್ಯತೆಯೇ ಅವಳ ಬಂಧನದ ಪ್ರಮುಖ ಕಾರಣವಾಗಿದೆ ಎಂಬುದಾಗಿ ಶೂಲಮಿಥ್ ಫೈರ್‌ಸ್ಟೋನ್ ತಾಯ್ತನ ಅಥವಾ ಮಾತೃತ್ವದ ಬಗ್ಗೆ ಹೊಸ ವ್ಯಾಖ್ಯಾನ ಮಾಡಿದ್ದಾಳೆ. ತಾಯ್ತನವನ್ನು ಒತ್ತಿ ಹೇಳುವ ಸಮಾಜ 'ತಂದೆತನ'ದ ಬಗ್ಗೆ ಚಕಾರವೆತ್ತುವುದಿಲ್ಲ. ಮಾತೃತ್ವದಿಂದಲೇ ಒಬ್ಬ ಹೆಣ್ಣಿಗೆ ಸದ್ಗತಿ ಪ್ರಾಪ್ತಿ ಎಂಬ ಆರೋಪಿತ ಮೌಲ್ಯಕ್ಕೆ ತಳ್ಳಲಾಗಿದೆ. ಪ್ರಕೃತಿ ನೀಡಿದ 'ಹೆರುವ ವರವನ್ನೆ ಶಾಪವೆಂಬಂತೆ ಆಕೆ ಅನುಭವಿಸುತ್ತಿದ್ದಾಳೆ. ಅದೇ ಅವಳ ಆನಂದದಾಯಕ ಕಾಯಕವೆಂದು ತೃಪ್ತಿ ಪಟ್ಟಿದ್ದಾಳೆ. ಆರೋಪಿತ ಮೌಲ್ಯವನ್ನು ಗಟ್ಟಿಯಾಗಿ ನಂಬಿದ ಆಕೆ ಮಕ್ಕಳಿಲ್ಲದ ಜನ್ಮವೇ ವ್ಯರ್ಥವೆನ್ನುತ್ತಾಳೆ.

"ಬಾಲಕರಿಲ್ಲದ ಬಾಲದ್ಯಾತರ ಜನ್ಮ
ಬಾಡಿಗೆ ಎತ್ತು ದುಡಿದಂಗ
ಬಾಳಲೆಯ ಹಾಸ್ಯುಂಡು ಬೀಸಿ ಒಗದಂಗ"

ಎಂಬ ಧೋರಣೆಗೆ ತಲುಪಿದ ಆಕೆ ತನ್ನ ಬಹುಮುಖ್ಯ ಕರ್ತವ್ಯ ಗಂಡು ಮಗುವಿಗೆ ಜನ್ಮ ನೀಡುವುದೇ ಎಂಬ ಸಿದ್ಧಾಂತಕ್ಕೆ ಬಂದಿದ್ದಾಳೆ.

ಬಂಜೆ ಬಾಗಿಲ ಮುಂದೆ ಅಂಜೂರ ಗಿಡ ಹುಟ್ಟಿ
ಟೊಂಗಿ ಟೊಂಗೆಲ್ಲ ಗಿಣಿ ಕೂತು ಹೇಳ್ಯಾವ
ಬಂಜೆ ನಿನ ಬದುಕು ಹೆಗನಗಿಗೆ

ಎಂಬ ಜನಪದದ ಹಾಡು ಸಮಾಜದಲ್ಲಿ ಬಂಜೆಯಾದವರಿಗೆ ದೊರೆಯುವ ನೋವು, ಸಂಕಟ, ಅಪಮಾನಗಳನ್ನು ಗಿಣಿಯಂಥ ಸಮಾಜದಲ್ಲಿರುವ ಪ್ರತಿಯೊಬ್ಬರ ಅಪಮಾನದ

ಮಾತುಗಳಿಗೆ ಆಕೆ ಹೊಣೆಯಾಗುವ ಸಂದರ್ಭವನ್ನು ಹಾಗೂ ಬಂಜೆಯ ಬದುಕು ವ್ಯರ್ಥ ಎಂಬ ಆದರ್ಶಗಳನ್ನು ಹಾಡಿನ ರೂಪದಲ್ಲಿ ಕಟ್ಟಿದ್ದಾರೆ. ಹೆಣ್ಣು ಕೆಲವೊಮ್ಮೆ ಪುರುಷ ಯಜಮಾನಿಕೆ ಯಿಂದ ಬೇಸತ್ತು ಈ ಹೆಣ್ಣು ಜನ್ಮವೇ ಬೇಡವೆಂದು ಆಕ್ರೋಶಗೊಂಡಿರುವುದು ಉಂಟು.

ಹೆಣ್ಣು ಆಗೋದಕ್ಕಿಂತ ಮಣ್ಣು ಆಗೋದು ಲೇಸು
ಮಣ್ಣಿನ ಮ್ಯಾಲೆ ಮರವಾಗಿ
ಇದ್ದರ ಬಂದವರಿಗೆಲ್ಲ ನೆರಳಾಗಿ

ಎನ್ನುತ್ತಾ ತಾನು ಸೇವಾಪರಳಾಗಿಯೇ ಇರಬಯಸುವಳು. ಈ ಹೆಣ್ಣು ಜನ್ಮ ಬೇಡವೆನ್ನುವ ಆಕೆ ಎಷ್ಟೊಂದು ನೋವಿನಲ್ಲಿ ಬೆಂದಿರಬಹುದೆಂದು ನಾವು ಊಹಿಸಬಹುದು. ರಾಣಿ ಎಷ್ಟೇ ಸಬಲಳಾಗಿದ್ದರೂ ಆಕೆಗೆ ಮಕ್ಕಳಿಲ್ಲವೆಂಬ ಕಾರಣಕ್ಕಾಗಿಯೇ ಸಾಂಸ್ಕೃತಿಕ ಒಡೆತನದಿಂದ ವಂಚಿತಳಾಗಿರುವಳು. ಇತಿಹಾಸದಲ್ಲಿ ಉಲ್ಲೇಖಿತಗೊಂಡ ರಾಣಿಯರೆಲ್ಲರೂ ತಾಯ್ತನ ಹಾಗೂ ಮಾತೃತ್ವದ ಮೌಲ್ಯಕ್ಕಾಗಿಯೇ ಹಾತೊರೆದವರೆಂಬುದು ಸತ್ಯ.

### ೩.೧.೨. ಕನ್ಯತ್ವ ಮತ್ತು ಪಾತಿವ್ರತ್ಯ

ಒಬ್ಬ ಸ್ತ್ರೀಗೆ ಕನ್ಯತ್ವ ಹಾಗೂ ಪಾತಿವ್ರತ್ಯ ಎಂಬ ಮೌಲ್ಯಗಳು ಬಹುಮುಖ್ಯವಾದವು. ಇವಕ್ಕೆ ಮೊದಲ ಪ್ರಾಶಸ್ತ್ಯ. ಈ ಮೌಲ್ಯಗಳಿಂದಾಗಿಯೇ ಹೆಣ್ಣು ಗೃಹಬಂಧಿಯಾದಳು. ಶ್ರಮವಿಭಜನೆಯು ಇದಕ್ಕೆ ಪೂರಕವಾಯ್ತು. ನಮ್ಮ ಪರಂಪರೆಯಲ್ಲೆಲ್ಲ ಸೀತೆ, ಸಾವಿತ್ರಿ, ಅನಸೂಯೆಯಂಥ ಮಾದರಿ ಪಾತ್ರಗಳು ನಮ್ಮ ಸ್ತ್ರೀ ಸಮೂಹಕ್ಕೆ ಆದರ್ಶವಾದವು. ವಿವಾಹಪೂರ್ವದಲ್ಲಿ ಸ್ತ್ರೀ ಕನ್ಯತ್ವವನ್ನು ಕಾಪಾಡಿಕೊಂಡರೆ ವಿವಾಹದ ನಂತರ ಪತಿವ್ರತೆಯಾಗಿಯೇ ಬದುಕಬೇಕು. ಕನ್ಯತ್ವ ಹಾಗೂ ಪಾತಿವ್ರತ್ಯದಿಂದಲೇ ಆಕೆಗೆ ಎಲ್ಲಿಲ್ಲದ ಗೌರವ, ಆದರ. ಆದರೆ ಪುರುಷನಿಗೆ ಈ ಕಟ್ಟುಪಾಡು ಇಲ್ಲ. ಆತ ಪತ್ನಿವ್ರತಸ್ಥನಾಗುವ ಅಗತ್ಯವಿಲ್ಲ. ಬದಲಾಗಿ ಹೆಚ್ಚು ರಾಜ್ಯಗಳ ಒಡೆಯನಿಗೆ ಹೇಗೆ ಮನ್ನಣೆ ಇತ್ತೋ ಹಾಗೆ ಹೆಚ್ಚು ಪತ್ನಿಯರನ್ನು ಹೊಂದಿ ಪುರುಷನಿಗೆ ಸಮಾಜದಲ್ಲಿ ಮನ್ನಣೆ ನೀಡಲಾಗಿತ್ತು. ಪುರುಷಪ್ರಾಧಾನ್ಯತೆಯ ಕರಾಳತೆಯು ರಾಣಿಯರ ಮೇಲೂ ಪ್ರಭಾವ ಬೀರಿದ್ದನ್ನು ಗಮನಿಸಬಹುದು.

ಕೆಳದಿ ರಾಣಿ ವೀರಮ್ಮಾಜಿಯು ಸಮರ್ಥವಾಗಿ ರಾಜ್ಯಭಾರ ನಿರ್ವಹಿಸಿದ್ದರೂ ಆಕೆಯ ಒಡೆತನವನ್ನು ಒಪ್ಪಿಕೊಳ್ಳದ ಪುರುಷ ಸಮೂಹ ಅವಳ ಶೀಲವನ್ನು ಶಂಕಿಸಿತು. ಕೆಳದಿಯ ಪ್ರಧಾನಿ ನಿರ್ವಾಣಯ್ಯನೊಂದಿಗೆ ಅನೈತಿಕ ಸಂಬಂಧವಿತ್ತೆಂಬ ಆರೋಪವನ್ನು ಆಕೆ ಹೆಣ್ಣೆಂಬ ಕಾರಣಕ್ಕಾಗಿ ಹೊರಬೇಕಾಯ್ತು. ಹೀಗೆ ಪಾತಿವ್ರತ್ಯದ ವಿಚಾರದಲ್ಲಿ ದ್ವಿಸ್ತರ ನೀತಿ ಹುಟ್ಟಿ

ಗಂಡಸಿಗೆ ಪಾವಿತ್ರತೆಯ ಭಯವಿರಲಿಲ್ಲ. ಸ್ತ್ರೀಯರಿಗೆ ಕನ್ಯತ್ವ ಹಾಗೂ ಪಾತಿವ್ರತ್ಯಗಳು ಒಪ್ಪಿತ ಮೌಲ್ಯಗಳಾಗಿ ಇವುಗಳ ಅನುಕರಣೆಯೇ ಹೆಣ್ಣಿನ ಮುಖ್ಯ ಕರ್ತವ್ಯವಾಯ್ತು.

### ೩.೨. ರಾಣಿಯರು: ಚರಿತ್ರೆ ನಿರೂಪಣೆ ಮತ್ತು ಸ್ತ್ರೀವಾದಿ ಸಂಕಥನ

ಮಹಿಳಾ ಚರಿತ್ರೆಯ ಬರವಣಿಗೆ ಪುರುಷರಿಗೆ ಬೇಕಾದ ದೃಷ್ಟಿಕೋನದಲ್ಲಿ ರಚನೆಗೊಂಡಿದೆ. ಹೀಗಾಗಿ ಮಹಿಳಾ ಚರಿತ್ರೆ ಸ್ತ್ರೀವಾದಿ ದೃಷ್ಟಿಕೋನದಿಂದ ಪುನರಚಿಸುವ ಅಗತ್ಯವಿದೆ. ಸ್ತ್ರೀಯರು ಹೇಗೆ ಚರಿತ್ರೆಯಲ್ಲಿ ಲುಪ್ತವಾಗುತ್ತಿದ್ದಾರೆಂಬುದಕ್ಕೆ ವರ್ಜೀನಿಯಾ ವುಲ್ಫ್ "ಕಾಲ್ಪನಿಕವಾಗಿ ಮಹಿಳೆಗೆ ಅತ್ಯಂತ ಮಹತ್ವದ ಸ್ಥಾನವಿದೆ. ಆದರೆ ವಾಸ್ತವಿಕವಾಗಿ ಅವಳು ಸಂಪೂರ್ಣವಾಗಿ ಅಸಡ್ಡೆಗೊಳಪಟ್ಟಿದ್ದಾಳೆ. ಕಾವ್ಯದಲ್ಲಿ ಮೊದಲಿನಿಂದ ಕಡೆಯವರೆಗೂ ಅವಳೇ ವ್ಯಾಪಿಸಿರುತ್ತಾಳೆ. ಆದರೆ ಚರಿತ್ರೆಯಲ್ಲಿ ಮಾತ್ರ ಕಾಣದಾಗಿರುತ್ತಾಳೆ. ಕಾಲ್ಪನಿಕ ಬರಹಗಳಲ್ಲಿ ಆಕೆ ರಾಜಮಹಾರಾಜನ್ನು, ದಿಗ್ವಿಜಯಿಗಳನ್ನು ಆಳುತ್ತಿರುತ್ತಾಳೆ. ನಿಜ ಜೀವನದಲ್ಲಿ ತನ್ನ ತಂದೆ-ತಾಯಿಗಳ ಬಲವಂತಕ್ಕೆ ಅವಳ ಬೆರಳಿಗೆ ಉಂಗುರ ತೊಡಿಸಿದ ಯಾವುದೋ ಹುಡುಗನ ಆಳಾಗುತ್ತಾಳೆ. ಸಾಹಿತ್ಯದಲ್ಲಿನ ಕೆಲವು ಸ್ಫೂರ್ತಿದಾಯಕ ಶಬ್ದಗಳನ್ನು, ಗಾಢ ಚಿಂತನೆಗಳನ್ನು ಆಡುವ ಆಕೆ ನಿಜ ಜೀವನದಲ್ಲಿ ಓದಲಾರದ, ಮಾತುಬಾರದ ಮೂಢೆಯಾಗಿದ್ದಾಳೆ. ಕೇವಲ ತನ್ನ ಗಂಡನ ಆಸಕ್ತಿಯಾಗಿದ್ದಾಳೆ" ಎಂದು ಹೇಳುವ ಮಾತು ಸತ್ಯವೆನಿಸುತ್ತವೆ.

ಪ್ರತಿಯೊಬ್ಬ ಮಹಿಳೆಯು ತನ್ನಲ್ಲಿ ಸಾಮರ್ಥ್ಯವಿದ್ದರೂ ತಾನು ನಾಯಕಿಯಲ್ಲ, ಸೇವಕಿ ಎಂಬ ಭ್ರಮೆಯ ಚಕ್ರದಲ್ಲಿ ಸಿಲುಕಿದ್ದಾಳೆ. ತನ್ನ ಸಾಧನೆ, ತನ್ನ ನಿರ್ವಹಣೆಗಳನ್ನು ಪರದೆಯ ಹಿಂದೆ ಇಲ್ಲವೆ ಪರದೆಯ ಮೇಲೆ ಚಿಕ್ಕ ಬಿಂದುವನ್ನಾಗಿಸಿಕೊಂಡು ಕ್ರಮೇಣ ಅದನ್ನು ಅದೃಶ್ಯಗೊಳಿಸಿ ಬಿಡುತ್ತಾಳೆ. ತನ್ನಲ್ಲಿ ತಾನೇ ಕೀಳರಿಮೆ ಬೆಳೆಸಿಕೊಂಡು ಬಿಡುತ್ತಾಳೆ. ತಾನು ಸೇವಕಿ ಎಂಬ ಮನದ ಬೇರಿಗೆ ಪುರುಷರು ನೀರು, ಗೊಬ್ಬರವನ್ನು ಹಾಕಿ ಭ್ರಮೆಯ ಮರವನ್ನು ದಟ್ಟವಾಗಿ ಬೆಳೆಸುತ್ತಾರೆ. ಅವರಾಡುವ ನಕಾರಾತ್ಮಕ ನುಡಿಗಳು ಆಕೆಯ ಮನದಲ್ಲಿ ಬೇರೂರುತ್ತವೆ. ಹೀಗಾಗಿ ಸ್ತ್ರೀ ಪುರುಷನ ಆಟಿಕೆಯ ದಾಳವಾಗಿ, ಭೋಗವಸ್ತುವಾಗಿ ಬದುಕಿರುವುದೇ ಹೆಚ್ಚು. ಪುರುಷ ನಿರ್ಮಿತ ಸಾಮಾಜಿಕ ಮೌಲ್ಯಗಳ ವಾಹಕಗಳು ಸ್ತ್ರೀಯೇ ಆಗಿದ್ದಾಳೆ. ತಾಯಿಯಾದ ಸ್ತ್ರೀ ನಿರಂತರ ಭ್ರಮೆಗಳನ್ನು ಸೃಷ್ಟಿಸುತ್ತಾ ಸಾಗುವಳು. ತಂದೆಯ ಹಕ್ಕು ಕರ್ತವ್ಯಗಳೆಲ್ಲವೂ ಸಿದ್ಧ ಮಾದರಿಯ ಅಚ್ಚುಗಳಲ್ಲಿ ಎರಕ ಹೊಯ್ದವುಗಳೇ. ಹೀಗಾಗಿ ಸ್ತ್ರೀ ಹೊಸ್ತಿಲು ದಾಟುವುದು ಗಂಡಸಿನ ಪಾತ್ರವನ್ನು ನಿಭಾಯಿಸುವುದೇ ಒಂದು ಮುಖ್ಯ ಸವಾಲು. ಆ ಪರಿಸರದಲ್ಲಿರುವ ವ್ಯಂಗ್ಯಗಳು, ಅಪಹಾಸಿಗಳನ್ನು ಎದುರಿಸುವುದು ಮತ್ತೊಂದು ಸವಾಲು. ಇಂಥ ಸವಾಲುಗಳನ್ನು ರಾಣಿಯರು ಎದುರಿಸಿದ್ದುದಕ್ಕೆ ನಿದರ್ಶನಗಳಿವೆ. ಸಾಂಸ್ಕೃತಿಕ ರಾಜಕಾರಣದಲ್ಲಿ

ಒಡೆತನ ಕೇವಲ ಗಂಡಸಿಗೆ ಸೀಮಿತವಾದುದು. ಹೀಗಾಗಿ ತನ್ನದಲ್ಲದ ಒಡೆತನವನ್ನು ತನ್ನದಾಗಿಸಿ ಕೊಳ್ಳುವುದು ಹರಸಾಹಸದ ಕಾರ್ಯ. ಈ ಸಾಂಸ್ಕೃತಿಕ ಒಡೆತನವನ್ನು ರಾಣಿಯರು ಪ್ರವೇಶಿಸಿದ್ದು ಅನಿವಾರ್ಯತೆಯಲ್ಲಿ. ಈ ಅನಿವಾರ್ಯತೆಯಲ್ಲಿ ಒಡೆತನ ಪಡೆದರೂ, ಅಲ್ಪಾವಧಿಯವರೆಗೆ ಮಾತ್ರ ಒಡೆತನ ನಡೆಸಿದರೂ ಕೂಡ ಹೇಗೆ ಸಮರ್ಥವಾಗಿ ಆ ಕಾರ್ಯವನ್ನು ನಿರ್ವಹಿಸಿದರೆಂಬ ಅಂಶ ಇಲ್ಲಿ ಮುಖ್ಯವಾಗುತ್ತದೆ. ಇವತ್ತಿನವರೆಗಿನ ರಾಣಿಯರ ಚರಿತ್ರೆ ನಿರ್ಮಾತೃಗಳು ಗಂಡಸರೇ. ಹೀಗಾಗಿ ಸಾಮಾಜಿಕ ಒತ್ತಡದ ಹಿನ್ನೆಲೆಯಲ್ಲಿ ಸಾಂಪ್ರದಾಯಿಕ ಆಕರಗಳನ್ನು ಧಿಕ್ಕರಿಸಿ, ಹೊಸ ರಚನೆಗಳನ್ನು ಸೃಷ್ಟಿಸುವ ಅಗತ್ಯವಿದೆ. ರಾಜನ ಕೇಂದ್ರಿತವಾಗಿಯೇ ನಿರ್ಮಾಣಗೊಂಡ ಚರಿತ್ರೆಯನ್ನು ಮುರಿದು ರಾಣಿ ಕೇಂದ್ರಿತವಾಗಿಯೇ ರಾಣಿಯರ ಚರಿತ್ರೆಯನ್ನು ಕಟ್ಟುವ ಅಗತ್ಯವಿದೆ. ರಾಣಿಯರ ಬದುಕಿನ ಪುರಾವೆಗಳನ್ನು, ಆಕರಗಳನ್ನು ಮರು ಆಲೋಚನೆಗೆ ಒಳಪಡಿಸಿ ಮರುರಚನೆಯನ್ನು ಮಾಡಲು ಪ್ರಾಮಾಣಿಕ ಪ್ರಯತ್ನದ ಅಗತ್ಯವಿದೆ.

ಸ್ತ್ರೀಯರು ಸಾಮಾಜಿಕ ಬದುಕಿನಲ್ಲಿ ಕಾಣಿಸಿಕೊಂಡಿರುವುದು ಹೆಚ್ಚಾಗಿ ಕಲಾವಿದೆಯರಾಗಿಯೇ. ಅವರು ರಾಜಕೀಯ ನಾಯಕಿಯರಾಗಿ ಕಾಣಿಸಿಕೊಂಡಿರುವುದು ತೀರ ಅಪರೂಪ. ಪುರುಷ ಪ್ರಾಧಾನ್ಯತೆಯಲ್ಲಿ ಅಧಿಕಾರದ ನೆಲೆಗಳು ಕೇವಲ ಪುರುಷನಿಗೆ ಸೀಮಿತವಾದವು. ಹೀಗಾಗಿ ಅಧಿಕಾರದ ನೆಲೆಗಳು ಸಾರ್ವತ್ರಿಕವಾಗಿರಲಿಲ್ಲ. ರಾಣಿಯರ ಅಲ್ಪಪ್ರಮಾಣದ ಭಾಗವಹಿಸುವಿಕೆಯನ್ನು ಕಾಣುತ್ತೇವೆ. ಇತಿಹಾಸದುದ್ದಕ್ಕೂ ರಾಣಿ ಹೋರಾಟ ನಡೆಸಿದ್ದು ಯಾರೊಂದಿಗೆ? ರಾಣಿ ನೆರೆಯ ರಾಣಿಯೊಂದಿಗೆ ಹೋರಾಟ ನಡೆಸಿದ ದಾಖಲೆಗಳು ದೊರೆಯುವುದಿಲ್ಲ. ರಾಣಿ ತನ್ನ ಎದುರಾಳಿಯಾಗಿ ಎದುರಿಸಿದ್ದು ನೆರೆಯ ರಾಜನನ್ನೆ, ಪುರುಷನನ್ನೆ ಎಂಬುದನ್ನು ಮರೆಯುವಂತಿಲ್ಲ. ಇದಕ್ಕೆ ಕಾರಣಗಳು ಹಲವು. ಸ್ತ್ರೀಯರಿಗೆ ನಿರಾಕರಿಸಲ್ಪಟ್ಟ ಸಾರ್ವತ್ರಿಕ ವಲಯದಲ್ಲಿ ಸ್ತ್ರೀಯರಿಗೆ ಮುಕ್ತ ಅವಕಾಶಗಳು ದೊರೆಯದಿರುವುದು. ಇಂಥ ಅವಕಾಶಗಳು ದೊರೆತದ್ದಾದರೂ ಅನಿವಾರ್ಯತೆಯಲ್ಲಿ ಯಾರದೋ ಗೈರುಹಾಜರಿಯನ್ನು ತುಂಬುವುದಕ್ಕಾಗಿಯೇ, ತೆರವಾದ ಸಿಂಹಾಸನಕ್ಕೆ ರಾಜನ ಮರಣಾನಂತರ, ಮಗನು ಚಿಕ್ಕವನಾದ್ದರಿಂದ, ಮಗನು ಪ್ರಾಪ್ತ ವಯಸ್ಕನಾಗುವವರೆಗೆ ಮಾತ್ರ ಈಕೆ ಆಡಳಿತ ಚುಕ್ಕಾಣಿಯನ್ನು ಹಿಡಿಯುತ್ತಿದ್ದಳು. ಪುರುಷಪ್ರಧಾನ ವ್ಯವಸ್ಥೆಯು ಈಕೆಯ ಒಡೆತನವನ್ನು ಮನಸಾ ಸ್ವೀಕರಿಸಿತ್ತೇ ಅಥವಾ ನಿರಾಕರಿಸಿತ್ತೇ? ಎಂಬ ಪ್ರಶ್ನೆ ಏಳುತ್ತದೆ.

ಪಿತೃಪ್ರಧಾನ ಸಮಾಜದಲ್ಲಿ ಯಜಮಾನಿಕೆ, ಅಧಿಕಾರ ವಲಯ ಗಂಡಿಗೆ ಮೀಸಲು, ಹೀಗಾಗಿ ಸ್ತ್ರೀಯರ ಒಡೆತನವನ್ನು ಇವರು ಇತಿಹಾಸದುದ್ದಕ್ಕೂ ನಿರಾಕರಿಸುತ್ತಲೇ ಬಂದಿದ್ದಾರೆ. ಕೆಳದಿ ರಾಣಿ ಚೆನ್ನಮ್ಮಾಜಿಯ ಆಳ್ವಿಕೆಯ ಕಾಲದಲ್ಲಿ ಪ್ರಧಾನಿಯಾದ ತಿಮ್ಮಣ್ಣ ಅಧಿಕಾರ ದುರುಪಯೋಗಪಡಿಸಿಕೊಂಡ ಕಾರಣವಾಗಿಯೇ ರಾಣಿಗೂ, ಈತನಿಗೂ ವೈಮನಸ್ಸು ಉಂಟಾಗಿತ್ತೆಂಬುದಾಗಿ

ವಿದೇಶ ಪ್ರವಾಸಿ ಜಾನ್ ಪ್ರೈಯರ್‌ನು ದಾಖಲಿಸಿದ್ದಾನೆ. ಕಾಸರಗೋಡು ತಿಮ್ಮಣ್ಣ ಸೇನಾಧಿಪತಿ ಹುದ್ದೆ ದೊರೆಯಲಿಲ್ಲವೆಂಬ ಕಾರಣಕ್ಕಾಗಿ ಅಸಮಾಧಾನಗೊಂಡು ಬಿಳಗಿಗೆ ಬಂದು ಸೇನಾಪತಿಯ ಹುದ್ದೆ ಗಿಟ್ಟಿಸಿಕೊಂಡನೆಂಬ ವಿವರಗಳು ಸಿಗುತ್ತವೆ. ಇಲ್ಲಿ ಬರುವ ತಿಮ್ಮಣ್ಣ ಹಾಗೂ ಕಾಸರಗೋಡು ತಿಮ್ಮಣ್ಣನ ಪಾತ್ರಗಳು ರಾಣಿ ಸ್ತ್ರೀಯಾದ ಕಾರಣವಾಗಿಯೇ ಆಕೆಯ ಒಡೆತನವನ್ನು ಒಪ್ಪಿಕೊಳ್ಳದ ಮನಸ್ಥಿತಿ ಇವರದಾಗಿತ್ತೆನ್ನಬಹುದು.

ಸ್ತ್ರೀಯರು ಸಾರ್ವತ್ರಿಕ ವಲಯದಲ್ಲಿ ಒಡೆತನ ಪಡೆದಿದ್ದಾರೆಂಬುದೇ ಪುರುಷರ ಆಕ್ರೋಶಕ್ಕೆ ಕಾರಣವಾಗುತ್ತಿತ್ತು. ಹೀಗಾಗಿಯೇ ಕೆಳದಿ ರಾಣಿ ವೀರಮ್ಮಾಜಿ ನಗರ ಸಂಸ್ಥಾನವನ್ನು ಆಳುವ ವಿಷಯ ತಿಳಿದ ಹೈದರಲಿಯು "ಈ ನಗರ ಸಂಸ್ಥಾನವನ್ನು ಹೆಂಗಸು ಆಳುತ್ತಾಳೆಂಬ ವರ್ತಮಾನವಂ ಕೇಳಿ" ಈ ನಗರವನ್ನು ತೆಗೆದುಕೊಳ್ಳಬೇಕೆಂಬ ದುರಾಸೆಯಿಂದ, ನಗರದ ಸಮೀಪದ ಮಾವಿನ ಹೊಳೆಗೆ ಬಂದು ಬೀಡುಬಿಟ್ಟನು. ರಾಣಿ ಸಂಧಾನಕ್ಕಾಗಿ ಶಂಕರ ನಾರಾಯಣಯ್ಯನನ್ನು ಕಳಿಸಿದರೂ, ಹೈದರಾಲಿ ಸಂಧಾನಕ್ಕೆ ಒಪ್ಪದೇ, ರಾಣಿಯಾಳುವ ದುರ್ಗವನ್ನು ವಶಪಡಿಸಿಕೊಂಡು, ರಾಣಿಯನ್ನು ಹಾಗೂ ಆಕೆಯ ಮಗನನ್ನು ಸೆರೆಹಿಡಿದು ಮದ್ದಗಿರಿಯ ಸೆರೆಮನೆಯಲ್ಲಿಟ್ಟನೆಂಬ ಅಂಶ ಶೃಂಗೇರಿ ಕೈಫಿಯತ್ತಿನಿಂದ ದಾಖಲಾಗಿದೆ. ಇಲ್ಲಿ ಹೈದರನು ಹಠ ಹಿಡಿದು ನಗರ ಸಂಸ್ಥಾನವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದ್ದು "ಹೆಂಗಸು ಆಳುತ್ತಾಳೆಂದು". ಅಂದರೆ ಸ್ತ್ರೀ ಜೈವಿಕ ಸಂರಚನೆಯಲ್ಲಿ ದುರ್ಬಲಳು. ತನ್ನದಲ್ಲದ ಒಡೆತನವನ್ನು ಹೆಂಗಸು ಹೇಗೆ ನಿಭಾಯಿಸಿಯಾಳು? ಎಂಬ ಪ್ರಶ್ನೆ ಪುರುಷನದು. ಹೆಣ್ಣೆಂಬ ಕಾರಣಕ್ಕಾಗಿಯೇ ಆಕೆ ಶಕ್ತಿ ಸಾಮರ್ಥ್ಯದ ಕುರಿತು ಮೇಲಿಂದ ಮೇಲೆ ಚರ್ಚಿತಳಾಗುತ್ತಿದ್ದಾಳೆ. ಹೀಗೆ ಇತಿಹಾಸದುದ್ದಕ್ಕೂ ಸ್ತ್ರೀಯರ ಒಡೆತನವನ್ನು ನಿರಾಕರಿಸುತ್ತಲೇ ಬಂದರೂ, ಕೆಲವು ರಾಣಿಯರು ಒಡೆತನವನ್ನು ತಮ್ಮದಾಗಿಸಿಕೊಂಡು, ಸಮರ್ಥವಾಗಿ ಆಳ್ವಿಕೆ ನಡೆಸಿದ್ದಾರೆ.

ಹೆಣ್ಣೆಂಬ ಕಾರಣಕ್ಕಾಗಿಯೇ ಆಕೆಯ ಅಧಿಕಾರವನ್ನು ಅಲ್ಲಗಳೆಯುವವರ ಕೂಟದಲ್ಲಿ ರಾಣಿ ಚೆನ್ನಮ್ಮ ಇದ್ದಳು.

'ಪುಣ್ಯತೀರದ ಮ್ಯಾಲೆ ತಣ್ಣಗಿರದಲೆ ಲೋಕ
ದಣ್ಣಗಳು ಕೂಡಿ ಮಾಡಿದರು॥
ಮಕ್ಕಳೆಲ್ಲರೂ ಹೋದ ಪಕ್ಕಾಸುದ್ದಿಯ ತಿಳಿ।
ದಕ್ಕರದಲಿ ಬಂದು ಕೂಡಿದರು। ಕಿತ್ತೂರ್
ದಕ್ಕಿಸಿಕೊಳ್ಳುವ ಮಾತನಾಡಿದರು॥'

'ಕುಂಪಣಿಯರಾಗ' ಎಂಬ ಪದ್ಯ ಕಿತ್ತೂರಿನ ರಾಣಿ ಚೆನ್ನಮ್ಮನ ಅಸಹಾಯಕ ಸ್ಥಿತಿಯ ಚಿತ್ರಣ ನೀಡುತ್ತದೆ. ಪತಿ ಮಲ್ಲಸರ್ಜನಿದ್ದಾಗ, ಮಕ್ಕಳು ಮೂರು ಜನರು ಇದ್ದಾಗ ಎದುರಾಗದ

ಭೀಕರ ಸಮಸ್ಯೆಯೊಂದು 'ಗಂಡಿನ ಅನುಪಸ್ಥಿತಿಯಲ್ಲಿ ಬಂದೊದಗುವುದು. ಕಿತ್ತೂರಿನ ಏರಿಳಿತದ ಇತಿಹಾಸವನ್ನು ಚೆನ್ನಮ್ಮನ ಬದುಕಿನ ಏರಿಳಿತದೊಂದಿಗೆ ಅರ್ಥಪೂರ್ಣವಾಗಿ ಹೆಣೆಯಲಾಗಿದೆ. ಭಾರತೀಯ ಸಂಸ್ಕೃತಿಯು ಕಟ್ಟಿದ ಪುರುಷ ವ್ಯಕ್ತಿತ್ವದೊಂದಿಗೆ ಚೆನ್ನಮ್ಮನನ್ನು ಸಮೀಕರಿಸಲಾಗಿದೆ. ಪುರುಷನಿಗಿಂತಲೂ ಮಿಗಿಲೆಂಬಂತೆ

ನೂಕಿವನ ಎದೆ ಹಿಡಿದು ಹಿಂದಕ್ಕೆ
ರಕ್ತ ಬಂದರೆ ನೋಡಬಹುದೆಂದು। ಮಾ
ಅಗ್ಸಿ ಬಾಗಿಲವನ್ನು ಅನುಮಾನವಿಲ್ಲದೆ
ಹಾಕ್ಸ್ಯಾಳು ಕದನಕ್ಕೆ ಮುಖವಾದಿತಿನ್ನು

ಎಂಬಂತೆ ಥ್ಯಾಕರೆ ರಾಣಿ ಚೆನ್ನಮ್ಮ ದತ್ತು ಮಗನನ್ನು ಮುಂದಿಟ್ಟುಕೊಂಡು ರಾಜ್ಯವಾಳುವುದನ್ನು ಸಹಿಸದೇ ದತ್ತು ಮಕ್ಕಳಿಗೆ ಹಕ್ಕಿಲ್ಲ ಹಾಗಾಗಿ ಈ ರಾಜ್ಯ ನಮ್ಮದು ಎಂದಾಗ ಥ್ಯಾಕರೆಯನ್ನು ಎದೆ ಹಿಡಿದು ನೂಕುವ ಎದೆಗಾರಿಕೆಯನ್ನು ಚೆನ್ನಮ್ಮ ತೋರಿದ್ದಾಳೆ. ಅಲ್ಲದೆ

ಕಿತ್ತೂರ ಚೆನ್ನಮ್ಮಾ ಸುತ್ತೂರ ಒಡತ್ಯಾಗಿ
ಕತ್ತಿ ಕವಚಗಳ ಉಡುಪುಟ್ಟೋ
ಕತ್ತಿ ಕವಚಗಳ ಉಡುಪುಟ್ಟೋ ಅಬ್ಬರದಿ
ಬತ್ತಲಗುದರೀಯ ಜಿಗಿದಾಳೋ

ಚೆನ್ನಮ್ಮ ಸುತ್ತೂರ ಒಡೆತನವನ್ನು ಒಪ್ಪಿಕೊಂಡಿದ್ದಾಳೆ. ಪುರುಷನಿಗೆ ಸೀಮಿತವಾದ ಕತ್ತಿ, ಕವಚಗಳ ಉಡುಪು ಎಲ್ಲವನ್ನು ಸಹಜವೆಂಬಂತೆ ಧರಿಸಿದ್ದಾಳೆ. ಪುರುಷ ವೇಷ ತೊಡ ಬೇಕೆಂಬುದಾಗಿ 'ನೀ ಇನ್ನ ಗಂಡ ಉಗರಿ ಉಡಬೇಕು' ಎಂದು ಆದೇಶಿಸುವವನು ಮಲ್ಲಸರ್ಜನನೇ. ಸ್ತ್ರೀ ಪಾತ್ರ ಪಲ್ಲಟಗೊಳ್ಳುವಾಗಲೂ ಅದಕ್ಕೆ ಪುರುಷನ ಮನಸ್ಥಿತಿಯೇ ಕಾರಣ ಎಂಬ ಅಂಶ ಇಲ್ಲಿ ವ್ಯಕ್ತಗೊಂಡಿದೆ. ಹೆಣ್ಣು ಗಂಡುಡುಗೆ ತೊಡುವುದು ಹಾಸ್ಯಾಸ್ಪದ. ಕ್ರಿಯಾಶೀಲಳಾಗಿ ಬತ್ತಲ ಗುದರೆಯನ್ನು ಏರುದ ಧೈರ್ಯ ಮಾಡಿದ್ದಾಳೆ. ಕೆಲವೊಮ್ಮೆ ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸಿದ್ದಾಳೆ. ಥ್ಯಾಕರೆ ಅಂತಃಪುರದ ದೇವರ ಮನೆಯಲ್ಲಿ ಬೂಟುಗಾಲಿನಿಂದ ಒಳಬಂದುದು ಆಕೆಗೆ ಸಹನವಾಗಲಿಲ್ಲ.

ಥ್ಯಾಕರೆ ಮುಸುವ ಬೂಟುಗಾಲಲ್ಲಿ ಒಳಗ ಹೊಕ್ಕಾನವ್ವ
ನೋಡಿದ ಚೆನ್ನವ್ವನ ತಡಯಾವು ತಾಪುಗಳು
ಒಳಗೊಳಗೆ ಹಲ್ಲು ಕಡಿದಾಳೋ। ಥ್ಯಾಕರೆ ಸಾಹೇಬನ

ಥ್ಯಾಕರೆ ವಿರುದ್ಧದ ಆಕ್ರೋಶ ಇಲ್ಲಿ ವ್ಯಕ್ತಗೊಂಡಿದೆ. ತನ್ನ ಕೌಟುಂಬಿಕ ವಲಯದೊಳಗಿನ, ಹೊರಗಿನ ಶತ್ರುಗಳಗಳನ್ನೆಲ್ಲ ಎದುರಿಸುವ ಕ್ಲಿಷ್ಟವಾದ ಹಾಗೂ ಅನಿವಾರ್ಯ ಪರಿಸ್ಥಿತಿಯಲ್ಲಿ ಆಕೆ ಇದ್ದಳು. ಯಾವ ಪುರುಷ ಅವಳ ಸಾರ್ವಜನಿಕ ಅಸ್ತಿತ್ವವನ್ನು ನಿರಾಕರಿಸುತ್ತಿದ್ದರೋ ಅಂಥವರನ್ನು ಎದುರಿಸಿ, ಹೋರಾಡುವ ಅಗತ್ಯವಿತ್ತು. ಆಕೆಗೆ ಒದಗಿದ ಕಠಿಣ ರಾಜಕೀಯ ಪರಿಸ್ಥಿತಿಯಲ್ಲಿ 'ಹಕ್ಯಾಗಿ ಬಾಯಿ ಬಿಡತಾಳವ್ವ', 'ಗಾಳಿಗೆ ಬಾಯಿ ಬಿಡತಾಳವ್ವ' ಎಂಬ ಧೋರಣೆ ವ್ಯಕ್ತಗೊಂಡಿದೆ. ಗೀಗೀ ಪದವೊಂದು ಥ್ಯಾಕರೆ ಸಾಹೇಬನ ದುಃಸ್ಥಿತಿಯನ್ನು 'ಕಿತ್ತೂರ ಸಂಸ್ಥಾನದ ಮ್ಯಾಲೆ ಕಾರ್ಬಾರು ಮಾಡಲಿಕ್ಕೆ ಬಂದ ಥ್ಯಾಕರೆ ಸಾಹೇಬ ಹೊಡೆದ ಲಾಗಾಟ. ಲಾಗಾಟಗೀಗೀ ಎಂಬ ಗೀಗಿ ಪದವು ಥ್ಯಾಕರೆ ಮರಣವನ್ನಪ್ಪಿದ ಸಂಗತಿಯನ್ನು ತಿಳಿಸುತ್ತದೆ.

ಚೆನ್ನವ್ವ ಗಂಡನ ಕತ್ತಿ ಹಿಡಿದಾಳೋ।

ಚೆನ್ನವ್ವ ಸಾಹೇಬನ ಚಂಡ ಚಟ್ಟನೆ ಹೊಡೆದಾಳೋ

ಎಂಬ ರಿಯಾಸ ಪದವು ರಾಣಿ ಚೆನ್ನಮ್ಮನ ಧೀರತನವನ್ನು ಚಿತ್ರಿಸಿದೆ. ಹರದೇಶಿ ನಾಗೇಶಿ ಹಾಡಿನಲ್ಲಿ 'ಉಗ್ರ ಕೋಪದಿಂದ ಥ್ಯಾಕರೆ ಹಲ್ಲಕಡಿಯುತ್ತ

ನಲ್ಲಿಯಾರಿಗ್ಯಾಕ ಇಷ್ಟ ಧೀಮಾಕ

ಥ್ಯಾಕರೆಯಚಂದಾತು ದುರ್ಮರಣಾ

ಕೇಳಿ ಬ್ರಿಟಿಷರದ ಹಾರಿತ ಹಲ್ಲಣಾ

ಹೇಡಿ ಹೆಣ್ಣಿನ ಕೈಯಲ್ಲಿ ಹೇಗೆ ಕೊಟ್ಟೊ ಪ್ರಾಣ

ಎಂಬ ಈ ಹಾಡು ಪುರುಷತ್ವದ ಪ್ರತಿಷ್ಠೆಯನ್ನು ಪ್ರತಿಷ್ಠಾಪಿಸುವುದಾಗಿದೆ. ರಾಣಿಯನ್ನು 'ಹೇಡಿ ಹೆಣ್ಣು' ಎಂದು ಕರೆವ ಮೂಲಕ ಹೆಣ್ಣಿನಲ್ಲಿನ ಶೌರ್ಯ, ಧೀರತ್ವದ ಮೌಲ್ಯಗಳನ್ನು ಗಂಡು ಸ್ವೀಕರಿಸುತ್ತಿಲ್ಲ. ಪುರುಷತ್ವವೆಂಬ ಪ್ರತಿಷ್ಠೆ ಕಾಡಿ ಮತ್ತೆ ಮತ್ತೆ ಪೌರುಷದ ಪ್ರತೀಕವಾದ ಗಂಡು ಹೇಡಿ ಹೆಣ್ಣಿನಿಂದ ಸಾಯಲು ಸಾಧ್ಯವೇ? ಎಂಬ ಪ್ರಶ್ನೆ ಇವರ ಮುಂದಿದೆ.

'ಹೆಂಗಸಾದರೆ ಹಿಂದಕೆ ಹೋಗೋ ಗಂಡಸಾದರೆ ಮುಂದಕ ಬಾರೋ,

ಹೇಸಿ ಹೆಂಗಸಿನಂಥ ಖೋಡಿ ಜಾತಿ ಬಾಳಪ್ಪ'

ಹೆಂಗಸು, ಹೆಂಗಸುಬಾಲಿ ಎಂಬ ಇತ್ಯಾದಿ ಮಾತುಗಳನ್ನು ಗಮನಿಸಿದರೆ ಸ್ತ್ರೀಯರನ್ನು ರಾಜಕೀಯ ಬದುಕಿನಿಂದ, ಅಧಿಕಾರದ ನೆಲೆಯಿಂದ ಬಹುದೂರವಿಟ್ಟಿರುವುದು ಸ್ಪಷ್ಟ. ರಾಜಕೀಯ ಕ್ಷೇತ್ರದಂಥ ಸಾರ್ವತ್ರಿಕ ವಲಯ ಸ್ತ್ರೀಗೆ ನಿಷಿದ್ಧ. ಇದು ಪುರುಷನದೇ ಆಗಿದೆ. ಹೀಗಿದ್ದೂ ಬೆರಳೆಣಿಕೆಯ ಸ್ತ್ರೀಯರು ರಾಜಕೀಯ ವಲಯವನ್ನು ಪ್ರವೇಶಿಸಿದ್ದಾರೆ.

ಡಾ.ಎಸ್.ಶೆಟ್ಟರ ಅವರು 'ಕಿತ್ತೂರ ರಾಣಿ ಚೆನ್ನಮ್ಮನ ಶೌರ್ಯದ ಬಗ್ಗೆ, ಆಕೆಯ ಆಳ್ವಿಕೆಯ ಬಗ್ಗೆ ಸಂದೇಹವನ್ನು ವ್ಯಕ್ತಪಡಿಸುತ್ತಾರೆ. ಜೀವನದ ಬಹುಭಾಗ ಅಂತಃಪುರದಲ್ಲಿ ಕಳೆದವಳು. ವಿಧವೆಯಾದ ಈಕೆ ಲೌಕಿಕ ವಿಷಯಕ್ಕೆ ಗಮನ ಕೊಡದೆ ಪೂಜೆ-ಪುನಸ್ಕಾರ, ಕೀರ್ತನೆಗಳಲ್ಲಿ ಆಸಕ್ತರಾಗಿರಲು ಸಾಧ್ಯ. ಇವಳ ರಕ್ತದಲ್ಲಿ ಸಂಸ್ಥಾನಿಕ ಮನೆತನದವರಿಗಿರಬೇಕಾದ ಗಾಂಭೀರ್ಯ, ಸೌಜನ್ಯ, ನಿಷ್ಠಾವಂತಿಕೆ ಮಾತ್ರವಲ್ಲದೆ, ಸಾಮಾಜಿಕ, ರಾಜಕೀಯ ಪ್ರಜ್ಞೆಯು ರಕ್ತಗತವಾಗಿ ಬಂದಿರಲು ಸಾಧ್ಯ. ಆದರೆ ರಾಜತಂತ್ರ ಅನುಭವವಾಗಲಿ, ಅಭ್ಯಾಸದ ಅನುಕೂಲತೆಯಾಗಲಿ, ಅಂತಃಪುರದ ನಾಲ್ಕು ಗೋಡೆಯಲ್ಲಿ ಕಾಲ ಕಳೆದ ಈ ಮಹಾಮಾತೆಗೆ ದೊರೆತುದರ ಬಗ್ಗೆ ನಮಗೆ ಆಧಾರವಿಲ್ಲ. ಅಶ್ವಾರೂಢಳಾಗಿ, ಖಡ್ಗಧಾರಿಯಾಗಿ, ಯುದ್ಧಕೌಶಲ್ಯವನ್ನು, ನಾಯಕತ್ವವನ್ನು ಅವಳು ಪ್ರದರ್ಶಿಸಿದಳೆಂದು ಅನೇಕ ಹಾಡುಗಳಿಂದ, ಲಾವಣಿಗಳಿಂದ ತಿಳಿದೆವು. ಶಾಂತಿಮಾರ್ಗ ದಿಂದ ಸಂಸ್ಥಾನ ಉಳಿಸಿಕೊಳ್ಳಲು ಸತತ ಪ್ರಯತ್ನ ಮಾಡಿದ ಚೆನ್ನವ್ವನ ವ್ಯಕ್ತಿತ್ವಕ್ಕೆ ರುಂಡ ಚೆಂಡಾಡಿದ ಚಾಮುಂಡಿಯ ಉಪಮೆ ನೈಜವಾದುದಲ್ಲವೆಂದರೆ ತಪ್ಪಾಗದು"[೧] ಎಂಬ ಅಭಿಪ್ರಾಯ ಪಡುತ್ತಾರೆ. ಸ್ತ್ರೀವಾದಿ ಚಿಂತಕಿಯರಾದ ಡಾ.ಶೈಲಜಾ ಹಿರೇಮಠ ಅವರು ಡಾ.ಎಸ್.ಶೆಟ್ಟರ್ ಅವರು ಪೂರ್ವಗ್ರಹಪೀಡಿತರಾಗಿದ್ದಾರೆ ಎನ್ನುತ್ತಾರೆ. ಚೆನ್ನಮ್ಮ ಸಾಮಾನ್ಯ ಹೆಣ್ಣಲ್ಲ. ಈಕೆಯ ಶಕ್ತಿ ಸಾಮರ್ಥ್ಯವನ್ನು ಕುರಿತು ಬ್ರಿಟಿಷ ಅಧಿಕಾರಿಗಳು ತಮ್ಮ ಮೇಲಧಿಕಾರಿಗಳಿಗೆ ಬರೆದ ಪತ್ರಗಳನ್ನು ಹಾಗೂ ಬ್ರಿಟಿಷರು ಕಿತ್ತೂರಿನಂಥ ಪುಟ್ಟ ಸಂಸ್ಥಾನವನ್ನು ಕಬಳಿಸಲು ಅಷ್ಟು ಪರಿಪರಿಯಾದ ಹೊಂಚು ಹಾಕುವ ಅಗತ್ಯವಿರಲಿಲ್ಲ. ಹೀಗೆ ಹೆಣ್ಣು ಎಂಬ ಕಾರಣಕ್ಕಾಗಿಯೇ ಆಕೆ ಮತ್ತೆ ಮತ್ತೆ ಪರೀಕ್ಷೆಗೆ ಒಳಾಗುತ್ತಿದ್ದಾಳೆ.

ನಮ್ಮ ದೇಶದ ಜನಸಂಖ್ಯೆಯ ಅರ್ಧಭಾಗ ಮಹಿಳೆಯರೇ ಇದ್ದರೂ, ಇಂದಿಗೂ ಅವರಿಗೆ ಸಾಮಾಜಿಕ, ಸಾರ್ವಜನಿಕ ವಲಯಗಳಲ್ಲಿ ಪುರುಷರಷ್ಟು ಭಾಗವಹಿಸುವ ಅವಕಾಶಗಳು ದೊರೆತಿಲ್ಲ. ಇತಿಹಾಸದ ಪುಟದಲ್ಲಿ ಕೆಲವೇ ಕೆಲವು ಬೆರಳೆಣಿಕೆಯ ಮಹಿಳೆಯರು ರಾಜಕೀಯ ವಲಯವನ್ನು ಪ್ರವೇಶಿಸಿದ್ದಾರೆ. ಇಂಗ್ಲೆಂಡಿನಲ್ಲಿ ಮಾರ್ಗರೇಟ್ ಥ್ಯಾಚರ್, ಶ್ರೀಲಂಕಾದಲ್ಲಿ ಸಿರಿಮಾವೋ ಬಂಡಾರನಾಯಕೆ, ಭಾರತದಲ್ಲಿ ಇಂದಿರಾಗಾಂಧಿ ಸಮರ್ಥ ರಾಜಕೀಯ ಮುತ್ಸದ್ದಿಗಳಾಗಿದ್ದ ರೆಂಬುದನ್ನು ಮರೆಯುವಂತಿಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ಗಾಂಧೀಜಿಯವರಂಥ ನೇತಾರರ ವಿಚಾರಧಾರೆಗಳಿಂದ ಸ್ಫೂರ್ತಿಗೊಂಡ ವಿದ್ಯಾವಂತರು ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಪಡೆದುಕೊಂಡಿದ್ದರು. ಕ್ರಿ.ಶ.೧೯೩೭ರಲ್ಲಿಯೇ ಮೀಸಲು ಕ್ಷೇತ್ರದಿಂದ ೪೩ ಮಂದಿ ಸಾಮಾನ್ಯ ಕ್ಷೇತ್ರದಿಂದ ೮ ಮಂದಿ ಮಹಿಳೆಯರು ಶಾಸಕಾಂಗ ಸಭೆಗಳಿಗೆ ಆಯ್ಕೆಯಾಗಿ ಬಂದಿದ್ದರಲ್ಲದೆ, ಕ್ಯಾಬಿನೆಟ್ ದರ್ಜೆಯ ಆರು ಮಹಿಳಾ ಮಂತ್ರಿಗಳಿದ್ದುದು ಸ್ತುತ್ಯರ್ಹವಾದ ಸಂಗತಿ. ಆದರೆ

ಸ್ವಾತಂತ್ರ್ಯ ಬಂದ ನಂತರ ಈ ಸಂಖ್ಯೆ ಹಾಗೂ ಪಾಲ್ಗೊಳ್ಳುವಿಕೆ ಹೆಚ್ಚುವುದರ ಬದಲು ಕ್ಷೀಣಿಸಿದೆ.

ಸಾಂಸ್ಕೃತಿಕ ಒಡೆತನದಲ್ಲಿ ರಾಣಿಯರು ನಿರ್ವಹಿಸಿದ ಪಾತ್ರವನ್ನು ಇಂದಿನ ಕಾಂಗ್ರೆಸ್ ಪಕ್ಷದ ನಾಯಕಿಯಾದ ಸೋನಿಯಾಗಾಂಧಿಯವರು ನಿರ್ವಹಿಸುತ್ತಿದ್ದಾರೆ. ಪತಿ ರಾಜೀವಗಾಂಧಿಯಿಂದ ತೆರವಾದ ಸ್ಥಾನಕ್ಕೆ ಅಧಿಕಾರಿಯಾಗಿ ಬಂದ ಸೋನಿಯಾಗಾಂಧಿ ಈಗ ಮಗ ಪ್ರಾಪ್ತವಯಸ್ಕನಾದ ಕಾರಣ ಮಗನನ್ನು ಅಧಿಕಾರದಲ್ಲಿ ಕೂಡಿಸಬೇಕೆಂಬ ಮನೋಧೋರಣೆ ಹೊಂದಿದ್ದಾರೆ. ಅಂದರೆ ಇದು ನಮ್ಮ ರಾಣಿಯರ ಪಾತ್ರದ ಮುಂದುವರಿಕೆಯೇ ಆಗಿದೆ.

### ೩.೩. ರಾಣಿಯರು: ಚರಿತ್ರೆ ನಿರೂಪಣೆ ಮತ್ತು ಸ್ತ್ರೀವಾದಿ ಸಂಕಥನ

ಕರ್ನಾಟಕದ ಶಾಸನಗಳಲ್ಲಿ ಮತ್ತು ಕಾವ್ಯ ಪ್ರಪಂಚದಲ್ಲಿ ಹಲವಾರು ಜನ ಸುಗ್ಗಲೆಯರು ಕಂಡುಬರುತ್ತಾರೆ. ಆದರೆ ಶರಣೆ ಸುಗ್ಗಲೆ ಕಲ್ಯಾಣ ಚಾಲುಕ್ಯ ಅರಸ ಇಮ್ಮಡಿ ಜಯಸಿಂಹನ ಮಡದಿಯಾಗಿ, ದಾಸಿಮಯ್ಯನ ಶಿಷ್ಯೆಯೆನಿಸಿ, ಜೈನನಾಗಿದ್ದ ಪತಿಯನ್ನು ಶಿವಭಕ್ತಿಯೆಡೆಗೆ ತಿರುಗಿಸಿ, ಲಿಂಗದೀಕ್ಷೆ ಕೊಡಿಸಿದಳು. ಸುಗ್ಗಲೆ ಬಸವಾದಿ ಪ್ರಮಥರ ಬರವನ್ನು ಸೂಚಿಸುವ ಮುಂಗೋಳಿಯಾಗಿದ್ದಾಳೆಂದು"[೨] ಉಲ್ಲೇಖವಿದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನ ರಾಣಿಯರಲ್ಲಿ ಪಿರಿಯರಸಿಯಾದ ರಾಣಿ ಲಕ್ಷ್ಮೀದೇವಿ. ಇವಳ ತವರೂರು ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಖೇಡಗಿ. ಲಕ್ಷ್ಮಿದೇವಿಯನ್ನು ಶಾಸನಗಳು ಲಕ್ಷ್ಮಾದೇವಿ, ಲಕ್ಷ್ಮೀದೇವಿ, ಪಿರಿಯರಸಿ ಲಕ್ಷ್ಮಿಮಹಾದೇವಿ, ಪಿರಿಯರಸಿ ಲಕ್ಷ್ಮಾದೇವಿ, ತೆಲುಗು ಜೊಮ್ಮಯ್ಯನ ರಗಳೆ ಲಕುಮಾದೇವಿಯೆಂದು ವರ್ಣಿಸಿದೆ. ಖೇಡಗಿ ಶಾಸನವು ಕಂಕೋಜ ಮತ್ತು ಮಸಣಿಕವ್ವೆಯರು ಲಕ್ಷ್ಮಿಮಹಾದೇವಿಯ ತಂದೆ–ತಾಯಿಗಳೆಂಬುದಾಗಿ ತಿಳಿಸುತ್ತದೆ. ಕಂಕೋಜ(ಕಂಕ+ಓಜ) ಹೆಸರಿನ ಅಂತ್ಯದಲ್ಲಿರುವ 'ಓಜ' ಎಂಬ ಪದವು ಶಿಲ್ಪಕರ್ಮ ಅಥವಾ ಲೋಹಕರ್ಮ ಎಂಬ ಅರ್ಥವನ್ನು ಸ್ಫುರಿಸುತ್ತದೆ. ಕಲಿಸುವವ, ಬಡಗಿ, ಕಮ್ಮಾರ, ಚಿನಿವಾರ ಎಂದು 'ಕಲುಕುಟಿಗ ಮಾರೋಜ' ಎಂದೂ, 'ಕೆಂಭಾವಿಯ ಮೂಡಣವೊಲದ ಅಜಮೋಜಗಂ ಕಾಳೋಜಗಂ' ಎಂದೂ, ಪಟ್ಟದಕಲ್ಲಿನ ಪಾಪನಾಥ ದೇವಾಲಯಕ್ಕೆ ದುಡಿದ ಮಹಾಶಿಲ್ಪಿ ರೇವಡಿ ಓವಜ, ಬಳ್ಳಿಗಾವಿಯ ಚೆನ್ನಕೇಶವ ದೇವಾಲಯದ ಮದನಿಕಾ ಗೊಂಬೆಯನ್ನು ನಿರ್ಮಿಸಿದ ದಾಸೋಜ, ಚೆನ್ನಕೇಶವ ದೇವಾಲಯದ ಶಿಲ್ಪಿ ನಾಗೋಜ, ಅಲ್ಲದೆ, ತಿಮ್ಮೋಜ, ಹೊನ್ನೋಜ, ಬೈಚೋಜ, ಬೀರೋಜ. ಸಿಂಗೋಜ. ಕಾಳೋಜ, ಗೂಳಿಯೋಜ, ಧರಣೋಜ, ಸಾವಿಯೋಜ, ಚಂಡೋಲ, ಕೇತೋಜ, ರುದ್ರೋಜ, ರಾಮೋಜ, ಮಲ್ಲೋಜ, ಮಾಣಿಯೋಜ, ದೇವಾಲಯದ ವಾಸ್ತುಶಿಲ್ಪಿ"[೩] ಎಂಬ ಇತ್ಯಾದಿ

ಶಾಸನೋಲ್ಲೇಖಿತ ನಾಮಗಳನ್ನು ಅವಲೋಕಿಸಿದಾಗ 'ಓಜ' ಎಂಬುದು ಹೆಸರುಗಳಿಗೆ ಉಪಸರ್ಗವಾಗಿ ಬಳಕೆಯಾದುದನ್ನು ಗಮನಿಸಬಹುದು. ಇದನ್ನು ಉಪನಾಮವಾಗಿಯೂ ಬಳಸಿದ್ದಾರೆ. ಬೆಂಗಳೂರಿನ ಕೆಲ ಪ್ರದೇಶಗಳಲ್ಲಿ ಕಮ್ಮಾರ, ಬಡಗಿಗಳನ್ನು 'ವಾಜರು' ಎಂದು ಕರೆಯುವರು. ವಾಜ>ಓಜ ಆಗಿರುವ ಸಾಧ್ಯತೆ ಇದೆ. 'ವಾಜ' ಎಂಬುದು ಶಿಲ್ಪಿ, ಕುಶಲಕರ್ಮಿ, ಅಕ್ಕಸಾಲಿಗ, ಚಿನಿವಾರ, ಯೋಗಕ್ಷೇಮ ನೋಡಿಕೊಳ್ಳುವವ ಎಂಬ ಅರ್ಥವನ್ನು ನೀಡುತ್ತವೆ. ಈ ಹಿನ್ನೆಲೆಯಲ್ಲಿ ರಾಣಿ ಲಕ್ಷ್ಮೀದೇವಿಯ ತಂದೆಯ ಹೆಸರಿಗೆ ಬರುವ ಉಪನಾಮ 'ಓಜ' ಎಂಬುದು ಶಿಲ್ಪಿಯನ್ನು ನಿರ್ದೇಶಿಸುವುದರಿಂದ ಇವರು ಶಿಲ್ಪಾಚಾರಿಗಳಾಗಿರಬೇಕೆಂದು ಊಹಿಸಬಹುದು. ರಾಣಿ ಲಕ್ಷ್ಮೀದೇವಿಯ ತಾಯಿ 'ಮಸಣಿಕವ್ವೆ' ಎಂಬ ಹೆಸರನ್ನು ಹೋಲುವ 'ಮಸಣಿತಮ್ಮ' ಎಂಬ ಹೆಸರು ಕೂಡ ಕಂಡುಬರುವುದನ್ನು ಶಾಸನಗಳು ದಾಖಲಿಸಿವೆ. "ಮಸಣಿತಮ್ಮವೆಂಬುದು ಶೈವ ಪಂಥೀಯ ಶಿಲ್ಪಿ ಎಂದಾಗುತ್ತದೆ. ಈ ಹಿನ್ನೆಲೆಯಲ್ಲಿ ರಾಣಿ ಲಕ್ಷ್ಮೀದೇವಿಯು ಶಿಲ್ಪಕರ್ಮ, ಲೋಹಕರ್ಮ ಮನೆತನದವಳೆಂದು ತಿಳಿದುಬರುತ್ತದೆ."[೪] ರಾಣಿ ಲಕ್ಷ್ಮೀದೇವಿಯು ಸದ್ಭಕ್ತೆಯಾಗಿದ್ದಳೆಂಬ ಮಾತು ಸತ್ಯ. 'ನಾಡಿನ ಓಜ–ನಾಡೋಜ' ಎಂಬುದು ನಾಡಿಗೆ ಗುರುವಿನ ಸ್ಥಾನದಲ್ಲಿಯ ಉಪಾಧ್ಯಾಯರನ್ನು ನಿರ್ದೇಶಿಸುವಂತೆ ಕಂಕೋಜ ನಾಡಿನ ಉಪಾಧ್ಯಾಯರೆಂಬುದಾಗಿಯೂ ಊಹಿಸಬಹುದು. ಕ್ರಿ.ಶ.೧೧೭೪ರ ದೋಣಿ ಶಾಸನವು ಈಕೆಯು "ದ್ರೋಣಪುರವನ್ನು ಆಳುತ್ತಿದ್ದಳೆಂದೂ, ಡಂಬಳ ಶಾಸನದಲ್ಲಿ ೧೮ ಅಗ್ರಹಾರಗಳನ್ನು, ಧರ್ಮಪುರವನ್ನು ಆಳುತ್ತಿದ್ದಳೆಂದು"[೪] ತಿಳಿದುಬರುತ್ತದೆ. ಸೂಡಿಯ ಶಾಸನದಲ್ಲಿ 'ರಾಜಲಕ್ಷ್ಮಿ ಲಲನಾರತ್ನಂ, ದ್ಯುನದಿನಿರ್ಮ್ಮಳ ಕೀರ್ತಿ, ಜಗಜ್ಜನಾಭಿಮತೆ, ಪುಣ್ಯದೇವತೆ, ಪ್ರತ್ಯಕ್ಷ ಲಕ್ಷ್ಮಿ ವಿಳಾಸ ವಿದ್ಯಾಧರೆ, ಮನೋರಂಜನಿ, ಚಾಳುಕ್ಯ ರಾಮ ಹೃದಯ ಹರ್ಷೋತ್ಕರ್ಷೆ, ಸನ್ತತಾರ್ಘ್ಯಮಣಿ ಕನಕ ಕಂಕಣವರ್ಷೆ, ಪುಣ್ಯ ಪ್ರಭಾವಚರಿತ್ರ ಪವಿತ್ರೆ, ದಾನ ಚಿನ್ತಾಮಣಿ, ಅಮಳ ಸವತಿಮದಖಣ್ಡನ, ಅಲ್ಲದೆ ಪಿರಿಯರಸಿ ಎಂದು ವರ್ಣಿಸಿದೆ. ಕ್ರಿ.ಶ.೧೧೧೦–೧೧ರ ತರುವಾಯದ ಶಾಸನಗಳು ಲಕ್ಷ್ಮೀಮಹಾದೇವಿಯನ್ನು ಉಲ್ಲೇಖಿಸುವುದಿಲ್ಲ. ಈ ಸಮಯಕ್ಕಾಗಲೇ ರಾಣಿ ಲಿಂಗೈಕ್ಯಳಾಗಿದ್ದಳೋ ಅಥವಾ ರಾಜಕೀಯದಿಂದ ನಿವೃತ್ತಿ ಹೊಂದಿದ್ದಳೊ ಎಂಬುದು ತಿಳಿಯುವುದಿಲ್ಲವೆಂದು ಬಿ.ಆರ್.ಹಿರೇಮಠರು ಅಭಿಪ್ರಾಯ ಪಡುತ್ತಾರೆ. ಅದೇನೆ ಇದ್ದರೂ ರಾಣಿ ಲಕ್ಷ್ಮೀಮಹಾದೇವಿಯು ಸ್ವತಂತ್ರವಾಗಿ ಆಡಳಿತ ನಡೆಸಿದ ರಾಣಿಯರಲ್ಲಿ ಬಹುದೊಡ್ಡ ಹೆಸರು ಎಂಬುದನ್ನು ಮರೆಯುವಂತಿಲ್ಲ.

ವಿಜಯನಗರ ಸಾಮ್ರಾಜ್ಯದ ತರುವಾಯ ಹಿಂದೂ ಧರ್ಮ ಸಂಸ್ಕೃತಿಯನ್ನು ಬೆಳಗಿಸಿದ ಕೀರ್ತಿ ಕೆಳದಿಯವರದು. ಇಂದಿನ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಚಿಕ್ಕ ಗ್ರಾಮವೇ ಕೆಳದಿ. ಗೋವೆಯಿಂದ ದಕ್ಷಿಣದ ಕೇರಳದವರೆಗೆ ಹಬ್ಬಿದ ವಿಶಾಲ ರಾಜ್ಯವನ್ನು ಇಕ್ಕೇರಿ, ಕೆಳದಿ, ಬಿದನೂರು, ಭುವನಗಿರಿಗಳನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದರು. ಸು.೨೭೫ ವರ್ಷಗಳ

ಕಾಲ ಅಂದರೆ ಕ್ರಿ.ಶ.೧೪೯೯ರಿಂದ ೧೭೬೩ರವರೆಗೆ ಈ ರಾಜ್ಯವನ್ನು ಚೌಡಪ್ಪನಾಯಕನಿಂದ ಆರಂಭಿಸಿ ರಾಣಿ ವೀರಮ್ಮಾಜಿಯವರೆಗೂ ಸು.೧೮ ಅರಸರು ಆಳಿದರು. ನಾಡಿನ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ರಾಣಿಯರ ಬದುಕಿನ ರೀತಿ ಜೀವನದ ಸ್ಥಿತಿ-ಗತಿ, ಬದುಕಿನ ಗುಣ, ಆಚಾರ ವಿಚಾರಗಳೂ ಕೂಡ ಪ್ರಮುಖವೆನಿಸುತ್ತವೆ.

ಕೆಳದಿ ಮೊದಲ ರಾಣಿ ಬಸಮಾಂಬೆಯು ಅನುಪಮ ಸೌಂದರ್ಯವನ್ನು ಹೊಂದಿ, ಅತೀ ಪಾವನತರಗಳಾಗಿ ಬದುಕಿದಳು. "ಸಚ್ಚರಿತ್ರೆ"ಯಿಂದ ರಾರಾಜಿಸಿದಳು[೬] ಎಂಬ ಉಲ್ಲೇಖವಿದೆ.

"ರತಿ ರೂಪಿನೊಳೊಪ್ಪುವರುಂ
ಧತಿ ಪತಿ ಭಕ್ತಿಯೊಳೆ ಜಾಣ್ಮೆಯೊಳ್ಳೂತನಭಾ
ರತಿ ನಿರ್ಮಲಮತಿ ಶೋಭಾ
ವತಿಯೆಂದಿಳೆ ಪೊಗಳೆ ತದ್ಯುವತಿ ಕರಮೆಸೆದಳ್"[೭]

ಎಂಬ ವರ್ಣನೆಯಿದೆ. ಅಲ್ಲದೆ ವೀರಾಂಬೆ, ಭದ್ರಾಂಬೆ ಇಬ್ಬರೂ ಚೌಡಪ್ಪನಾಯಕನ ರಾಣಿಯರಾಗಿದ್ದು 'ಸತ್ಕುಲ ಸಂಪನ್ನೆ'ಯರಾಗಿದ್ದರು.[೮] ಬಂಗಾರಮ್ಮ ವೆಂಕಟಾದ್ರಿನಾಯಕನ ಕುಮಾರಿಯಾಗಿದ್ದಳು. ಇವಳ ವಿವಾಹ ಸಂದರ್ಭದಲ್ಲಿ "ಜಾಗರದ ಸೀಮೆ, ಕೋಟೆಯೆಲ್ಲವನ್ನು ಬಳುವಳಿ ಕೊಟ್ಟನೆಂಬ"[೯] ವಿಷಯವಿದೆ.

ರಾಣಿ ಕೊಲ್ಲೂರಮ್ಮಾಜಿಯು ವೀರಭದ್ರನಾಯಕನ ಪತ್ನಿಯಾಗಿದ್ದು, ಪತಿಯು ನಿಧನನಾದಾಗ ಸಹಗಮನ ಹೊಂದಿದ್ದಳು. ರಾಣಿ ವೀರಾಂಬಾಳ ಹೆಸರಿನಲ್ಲಿ ವೆಂಕಟಪ್ಪನಾಯಕನು "ಅಭಿನವ ವೀರಾಂಬಾಪುರ" ಎಂಬ ಅಗ್ರಹಾರವನ್ನು ಕಟ್ಟಿಸಿ, ಸ್ಥಿರ ಶಾಸನವನ್ನು ಬರೆಸಿದನು. ರಾಣಿ ಲಿಂಗಮ್ಮಾಜಿ, ರಾಣಿ ಶಾಂತಮ್ಮಾಜಿ, ರಾಣಿ ವೀರಮ್ಮಾಜಿ, ರಾಣಿ ಬೊಮ್ಮಮ್ಮಾಜಿಯರ, ರಾಣಿ ಭದ್ರಮ್ಮಾಜಿ, ರಾಣಿ ಬಸವಲಿಂಗಮ್ಮಾಜಿ, ರಾಣಿ ಸಿದ್ಧಮ್ಮಾಜಿಯರ ಹೆಸರುಗಳು ದೊರೆಯುತ್ತವೆ. ಇವರು ಆಡಳಿತದಲ್ಲಿ ನೇರವಾಗಿ ಭಾಗವಹಿಸದೇ ಧಾರ್ಮಿಕ, ಸಾಮಾಜಿಕ ರಂಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೆಂಬುದಕ್ಕೆ ಹಲವಾರು ದಾಖಲೆಗಳು ದೊರೆಯುತ್ತವೆ.

ಕೆಳದಿ ಅರಸು ಮನೆತನದಲ್ಲಿ ನೇರ ಆಡಳಿತ ಚುಕ್ಕಾಣಿ ಹಿಡಿದವರಲ್ಲಿ ಪ್ರಮುಖಳು ರಾಣಿ ಚೆನ್ನಮ್ಮಾಜಿ. ಕೋಟಿಪುರದ ಸಿದ್ದಪ್ಪಶೆಟ್ಟರ ಕುಮಾರಿಯಾದ ಚೆನ್ನಮ್ಮಾಜಿಯ ತವರೂರು ಕೋಟಿಪುರವೆಂಬುದು ಸ್ಪಷ್ಟವಾದರೂ ಯಾವ ಕೋಟಿಪುರವೆಂಬುದು ಸ್ಪಷ್ಟವಾಗುವುದಿಲ್ಲ. ಚೆನ್ನಮ್ಮಾಜಿ ಕೆಳದಿ ಮನೆತನಕ್ಕೆ ತನ್ನದೇ ಆದ ರಾಜಕೀಯ, ಚಾರಿತ್ರಿಕ, ಧಾರ್ಮಿಕ, ಸಾಮಾಜಿಕವಾಗಿ ಮಹತ್ವದ ಕೊಡುಗೆಯನ್ನು ನೀಡಿದ ಅಪರೂಪದ ರಾಣಿ. ಕ್ರಿ.ಶ.೧೬೭೨ರಿಂದ ೧೬೯೭ರವರೆಗೆ ಒಟ್ಟು ೨೫ ವರ್ಷಗಳ ಕಾಲ ಯಶಸ್ವಿಯಾಗಿ ಆಳಿದ ಪ್ರಬಲ ರಾಣಿ. ಸೋಮಶೇಖರ

ನಾಯಕನ ತರುವಾಯದ ವಿಷಮಸ್ಥಿತಿಯಲ್ಲಿ ಆಡಳಿತ ಸೂತ್ರ ವಹಿಸಿಕೊಂಡ ರಾಣಿಯ ರಾಜಕೀಯ ಸಾಧನೆಗಳೆಲ್ಲವೂ 'ಕೆಳದಿನೃಪವಿಜಯ'ದಲ್ಲಿ ಉಲ್ಲೇಖಗೊಂಡಿದೆ.

"ವರ ಸೋಮಶೇಖರೇಂದ್ರನ
ತರುವಾಯಿಯೊಳಾಳ್ದ ಕುಶಿವನೃಪಾಂತರಮಾ
ದೊರೆ ಸೋಮಶೇಖರಾಂಗನೆ
ಸುರಚಿರ ಚನ್ನಮಾಂಬೆಯಾಳ್ದಳುರ್ವೀತಳಮಂ"[೧೧]

ಎಂಬಂತೆ ರಾಣಿಯು ತಮ್ಮರಸ ಸೋಮಶೇಖರನು ಆಳುತ್ತಿದ್ದ ರಾಜ್ಯ, ರಾಷ್ಟ್ರ, ಕೋಶ, ಪ್ರಜೆ, ಪರಿವಾರ, ಪರಿಜನ, ಪುರಜನ, ನಿಯೋಗಿಜನ, ಮಂತ್ರಿಜನ, ದೇಶಸೇವಾಜನ ಎಲ್ಲರನ್ನು ರಕ್ಷಿಸುತ್ತ ರಾಜ್ಯವಾಳಿದಳು. ರಾಣಿಯು ಸೇನಾನಿ ತಿಮ್ಮಣ್ಣನ ಬಂಡಾಯದ ವಿರುದ್ಧ ಶಿವಾಜಿಯ ನೆರವನ್ನು ಯಾಚಿಸಿದಳೆಂದು ಖ್ಯಾತ ಮರಾಠ ಇತಿಹಾಸಕಾರ ಸರ್ ದೇಸಾಯಿಯವರು ಹೇಳಿದ್ದಾರೆ. "ಕ್ರಿ.ಶ.೧೬೭೭ರಲ್ಲಿ ತನ್ನ ರಾಜ್ಯದ ಸಮೀಪಕ್ಕೆ ಬಂದಿದ್ದ ಶಿವಾಜಿಯ ಸಹಾಯವನ್ನು ಯಾಚಿಸಿರುವುದು ಅಸಂಭವವೇನಲ್ಲವೆಂಬುದಾಗಿ ಡಾ.ಸೂರ್ಯನಾಥ ಕಾಮತ್‌ರ ಅಭಿಪ್ರಾಯ ವಾಗಿದೆ."[೧೬]

ಚೆನ್ನಮ್ಮಾಜಿಗೆ ಪುತ್ರ ಸಂತಾನವಿಲ್ಲದಿರುವುದರಿಂದ ದತ್ತು ಸ್ವೀಕಾರವು ಅನಿವಾರ್ಯವೂ ಹಾಗೂ ಬಹು ಅಗತ್ಯವೂ ಆದ ಕಾರ್ಯವಾಗಿದ್ದಿತು. ಹಾಗಾಗಿ ಕೆಳದಿ ರಾಣಿ ಚೆನ್ನಮ್ಮಾಜಿಯು ಕೆಳದಿ ಸಂಸ್ಥಾನಕ್ಕೆ ಅರ್ಹನಾದವನನ್ನು ಆರಿಸಿ ಅವನಿಗೆ 'ಬಸಪ್ಪನಾಯಕನೆಂದು' ನಾಮಕರಣ ಮಾಡಿದಳು. ಅಲ್ಲದೆ "ಸ್ವಸ್ತಿ ಶ್ರೀ ವಿಜಯಾಭ್ಯುದಯದ ನಾಮ ಸಂವತ್ಸರದ ಶ್ರಾವಣಶುದ್ಧ ೧೪ನೆಯ ದಿವಸವೂ ಬಸಪ್ಪನಾಯಕರಂ ಗೃಹಿತ ಪುತ್ರನಂ ಮಾಡಿಕೊಂಡು ಸಂಭ್ರಮದಿಂದ ಅರಮನೆಗೆ ಬಿಜಯಂಗೈಸಿ ತಂದು ಕುಮಾರ ಬಸಪ್ಪನಾಯಕರ ಓದು, ಸಾಧನೆ, ಗಜ, ತುರಗ, ವೈಹಾಳಿ ಮುಂತಾದ ರಾಜೋಪಯುಕ್ತವಾದ ಸಮಸ್ತ ವಿದ್ಯೆಗಳೆಲ್ಲವನ್ನು ಕಲಿಸಲು ವ್ಯವಸ್ಥೆ ಮಾಡಿದಳು.

ದತ್ತು ಪುತ್ರನಾದ ಬಸಪ್ಪನಾಯಕನಿಗೆ ನೀಡಿದ ಉಪದೇಶವು ಇಂದಿಗೂ ಪ್ರಸ್ತುತವಾಗಿದೆ. "ನುಡಿದುದನ್ನು ಬದಲಿಸದಿರು, ಎಂದಿಗೂ ಕರ್ತವ್ಯ ಚ್ಯುತನಾಗಬೇಡ, ಸರ್ವದಾ ಮಧುರವಾಗಿ ಮಾತನಾಡು, ದುಷ್ಟರಿಗೆ ನಿನ್ನ ಹೃದ್ಗತವನ್ನು ತೋರದಿರು, ದುರ್‌ಮಾರ್ಗ ಹಿಡಿಯದಿರು"[೧೨] ಇತ್ಯಾದಿಯಾಗಿ ಒಬ್ಬ ಸಮರ್ಥ ಆಡಳಿತಗಾರನಾಗಲು ಏನೆಲ್ಲ ಅರ್ಹತೆಗಳಿರಬೇಕು ಎಂದು ನೀತಿ ಬೋಧಿಸಿದ ವಿವರಗಳು ಇವೆ. ಹೀಗೆ ರಾಣಿ ಚೆನ್ನಮ್ಮಾಜಿಯು ರಾಜಕೀಯ ಕ್ಷೇತ್ರದಲ್ಲಿ

ಶೂರಳೂ, ಧೀರಳೂ ಆಗಿದ್ದಂತೆ ಧಾರ್ಮಿಕ ಕ್ಷೇತ್ರದಲ್ಲೂ ಅಪಾರ ಕೊಡುಗೆಯನ್ನು ನೀಡಿದ್ದಾಳೆ. ಕ್ರಿ.ಶ.೧೬೯೬ರಲ್ಲಿ ಲಿಂಗೈಕ್ಯಳಾದ ರಾಣಿಯ ಸಮಾಧಿಯು ಬಿದನೂರಿನ ಕೊಪ್ಪಲು ಮಠದಲ್ಲಿದೆ.[೧೩]

ಕೆಳದಿಯ ಸಮರ್ಥ ರಾಣಿಯರಲ್ಲಿ ಪ್ರಮುಖರಾದವರಲ್ಲಿ ರಾಣಿ ವೀರಮ್ಮಾಜಿಯೂ ಒಬ್ಬಳು. 'ಬಿದನೂರಿನ ವೀರರಾಣಿ'ಯೆಂದೇ ಬಿರುದನ್ನು ಪಡೆದು ದಕ್ಷಳಾಗಿ ಆಡಳಿತ ನಡೆಸಿದಳು. ಕಿರಿಯ ಬಸಪ್ಪ ನಾಯಕನ ರಾಣಿಯಾದ ವೀರಮ್ಮಾಜಿಯು ಪತಿಯ ಮರಣದ ನಂತರ ಆಡಳಿತವನ್ನು ನಡೆಸಲು ಒಬ್ಬ ಯೋಗ್ಯ ನಾಯಕನನ್ನು ಹುಡುಕಿ ಚೆನ್ನಬಸವನಾಯಕನನ್ನು ದತ್ತು ತೆಗೆದುಕೊಂಡಳು. ಈ ಚೆನ್ನಬಸವ ನಾಯಕನು ಅಕಾಲ ಮರಣ ಹೊಂದಿದನೆಂದೂ ಕೆಲವು ಕಡೆ ಉಲ್ಲೇಖವಿದೆ. ಕೆಲವೆಡೆ ರಾಣಿ ವೀರಮ್ಮಾಜಿಯೇ ಚೆನ್ನಬಸವನಾಯಕನನ್ನು ಕೊಲ್ಲಿಸಿದಳೆಂಬ ಉಲ್ಲೇಖವಿದೆ. ಇದಕ್ಕೆ ಕೆ.ಎಸ್.ಚಟ್ನಿಸ್ ಅವರು ಸಮರ್ಥನೆಯನ್ನು ನೀಡುತ್ತಾರೆ. ನಂತರದಲ್ಲಿ ರಾಣಿ ವೀರಮ್ಮಾಜಿಯು ತಮ್ಮ "ಸೋದರಮಾವನಾದ ಬಂಕಾಪುರದ ಪಟ್ಟಣ ಶೆಟ್ಟಿ ಚೆನ್ನವೀರಪ್ಪನವರ ಕಿರಿಯ ಮಗನನ್ನು ಸರ್ವ ಸಂಭ್ರಮದಿಂದ ಅರಮನೆಗೆ ಕರೆತಂದು ಶಾಸ್ತ್ರೋಕ್ತವಾಗಿ ದತ್ತು ಸ್ವೀಕಾರವನ್ನು ಕೈಗೊಂಡಳು."[೧೪] ಅಲ್ಲದೆ ಕೊಲ್ಲೂರು ಮೂಕಾಂಬಿಕೆಯ ಪೂಜೆಗಾಗಿ ಬೆಳ್ಳಿಯ ಕೊಡವನ್ನು ಮಾಡಿಸಿಕೊಟ್ಟಳು. ರಾಣಿ ವೀರಮ್ಮಾಜಿಯ ದತ್ತುಪುತ್ರನಾದ "೨ನೇ ಸೋಮಶೇಖರನಾಯಕನು ಮಠದಲ್ಲಿ ನಡೆದ ಪರ್ಜನ್ಯಕ್ಕಾಗಿ ತೆಂಗಿನಕಾಯಿ, ಎಲೆ, ಅಡಿಕೆ ಮೊದಲಾದವುಗಳನ್ನು ಕಳಿಸಿಕೊಟ್ಟಿದ್ದನೆಂಬ"[೧೫] ಮಾಹಿತಿಯನ್ನು ಎ.ಕೆ.ಶಾಸ್ತ್ರಿಗಳು ವಿವರಿಸುತ್ತಾರೆ.

ಹೈದರನೊಂದಿಗೆ ಸು.೩೦ ದಿನಗಳ ಕಾಲ ಘನಘೋರವಾಗಿ ಹೋರಾಡಿದ ರಾಣಿ ವೀರಮ್ಮಾಜಿಯು ಸೋತು ಸೆರೆಯಾದಳು. ರಾಣಿಯಾದ ವೀರಮ್ಮಾಜಿಯನ್ನು ಮದುಗಿರಿಯ ಕೋಟೆಯಲ್ಲಿ ಇಡಲಾಯಿತು. ನಾಲ್ಕು ವರ್ಷಗಳ ಮೇಲೆ ಕ್ರಿ.ಶ.೧೭೬೭ರ ಚಳಿಗಾಲದಲ್ಲಿ ಮರಾಠೆಯವರು ವೀರಮ್ಮಾಜಿಯನ್ನು ಬಿಡುಗಡೆ ಮಾಡಿದರು. ರಾಣಿಯನ್ನು ಪುಣೆಗೆ ಕರೆದೊಯ್ಯುವಾಗ ದಾರಿಯಲ್ಲಿಯೇ ಕಾಯಿಲೆಯಾಗಿ ಶಿವಾಧೀನಳಾದಳು. ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನ ಉಜ್ಜಯಿನಿಯಲ್ಲಿ ರಾಣಿಯ ಸಮಾಧಿ ಮಾಡಲಾಯ್ತು.

ಕರ್ನಾಟಕದ ಪ್ರಮುಖ ರಾಜಮನೆತನಗಳಲ್ಲಿ ಬೆಳವಡಿ ಸಂಸ್ಥಾನವೂ ಒಂದು. ಬೆಳಗಾವಿ ಜಿಲ್ಲೆಯ ಚೆನ್ನಮ್ಮನ ಕಿತ್ತೂರಿನಿಂದ ೧೨ ಮೈಲು ದೂರದಲ್ಲಿರುವ ಬೆಳವಡಿ ವೀರತ್ವದ ಸಂಕೇತ ವಾಗಿದೆ. ಸು.೧೭ನೇ ಶತಮಾನದಲ್ಲಿ ಸು.೩೬೧ ಹಳ್ಳಿಗಳ ಆಧಿಪತ್ಯವನ್ನು ವಹಿಸಿಕೊಂಡಿದ್ದ ಈಶಪ್ರಭುವಿನ ನೆಚ್ಚಿನ ರಾಣಿಯಾದ ಮಲ್ಲಮ್ಮನ ತವರೂರು ಸ್ವಾದಿ. ಸ್ವಾದಿಯ ಮಧುಲಿಂಗನಾಯಕನ ಮಗಳಾದ ಈಕೆ ಚಿಕ್ಕಂದಿನಲ್ಲಿಯೇ ಶಿಕ್ಷಣವನ್ನು ಪಡೆದಿದ್ದಳು. ಯುದ್ಧ ಕಲೆಗಳನ್ನು ಹವ್ಯಾಸವಾಗಿ

ಕಲಿತಳು. ಕ್ರಿ.ಶ.೯೮೦ರ ಸೊಗಲ ಶಾಸನವು 'ಬೆಳವಾಡಿ' ಎಂದೂ, ಕ್ರಿ.ಶ.೧೦೭೫ರ ಬೆಳವಡಿ ಶಾಸನವು 'ಬೆಳ್ವಾಡಿ' ಎಂದೂ ಉಲ್ಲೇಖಿಸಿದೆ. ಬೆಳವಡಿ ಎಂಬ ಹೆಸರಿನ ಬಗೆಗೆ ಡಾ.ಎಸ್.ಎಚ್.ರಿತ್ತಿ ಹಾಗೂ ಡಾ.ಪಿ.ಬಿ.ದೇಸಾಯಿಯವರು ಹೇಳುವಂತೆ "ಶಾಸನಗಳಲ್ಲಿ ಬರುವ 'ಬೆಳ್ವೊಲ' ಎಂಬ ಪದಕ್ಕೆ ಬಿಳಿಯ ಹೊಲ ಅಥವಾ ಸಮೃದ್ಧವಾದ ಬೆಳೆ ಬೆಳೆಯುವ ಹೊಲ ಎಂದು ಅಭಿಪ್ರಾಯಪಡುತ್ತಾರೆ.[೧೬] ಕ್ರಿ.ಶ.೧೬೮೦ರ 'ತುರುಕಾರಿ ಪಂಚಮರ ಇತಿಹಾಸದಲ್ಲಿ ಪ್ರಕಟವಾದ ದಾನ ಶಾಸನ "ಅಸ್ತಿ ಕರ್ನಾಟಕೇ ರಮ್ಯೇ ಬೆಳವಾಡಿಪುರಂ"[೧೭] ಎಂದು ಕರೆದಿದೆ. ಅಲ್ಲದೆ ಅಲ್ಲಿಯ ಜನಪದರು 'ಶಿವನ ಪೂಜೆಗೆ ಶ್ರೇಷ್ಠವಾದ ಬಿಲ್ವ ಮರಗಳನ್ನು ಬಳಸುತ್ತಿದ್ದರೆಂದು', ಬಿಲ್ವ ಮರಗಳ ಸಮೂಹವನ್ನು ಬೆಳವಡಿ ಎಂದು, ಬೆಳವೊಲ ಎಂದರೆ 'ಬಯಲು ಪ್ರದೇಶ'ವೆಂದೂ ಹೇಳಬಹುದು.

ವೀರಸ್ತ್ರೀಯಾದ ಮಲ್ಲಮ್ಮನ ಮೂಲವನ್ನು ಮಹಾರಾಷ್ಟ್ರೀಯರು ಕಂಡುಹಿಡಿಯಲು ಮುಂದಾಗಿದ್ದು, ಪ್ರಭುರತ್ನ ಮಾಲಾಕಾರರು 'ಮಲ್ಲಮ್ಮ ಒಬ್ಬ ಮಹಾರಾಷ್ಟ್ರೀಯಳೆಂದು, ಈಕೆಯು ಬೆಳವಡಿ ನಾಡಿನ 'ಕಾಯಸ್ತ ಸ್ತ್ರೀ' ಎಂದು ಬರೆದಿದ್ದಾರೆ. ಮತ್ತೊಬ್ಬ ಲೇಖಕರು ಜ್ಞಾನ ಪ್ರಕಾಶನದ ೮-೧೨-೧೯೧೮ನೇ ಇಸ್ವಿಯ ಸಂಚಿಕೆಯಲ್ಲಿ ಈಕೆ 'ಒಬ್ಬ ಚಿತ್‌ಪಾವನ ವೀರಾಂಗನೆ' ಎಂದಿದ್ದಾರೆ. ಮಲ್ಲವ್ವಾಬಾಯಿಯು ಮಹಾರಾಷ್ಟ್ರ ಸ್ತ್ರೀಯಳಾಗಿರದೆ ಒಬ್ಬ ಕರ್ನಾಟಕಸ್ಥಳೇ ಆಗಿದ್ದಾಳೆಂಬ ಮಾಹಿತಿಯನ್ನು, ಈಕೆ ಬೆಳಗಾಂ ಜಿಲ್ಲೆಯ ಸಂಪಗಾಂ ತಾಲ್ಲೂಕಿನ 'ಬೆಳವಡಿ ದೇಸಗತಿ ಮನೆತನ'ದವಳೆಂದೂ ಮತ್ತು ವೀರಶೈವಳು ಎಂಬ ಸಂಗತಿಯನ್ನು ಭಾರತ ಸಂಶೋಧಕ ಮಂಡಳಿಯ ಕಾರ್ಯದರ್ಶಿಗಳಾದ ಕೈ.ವಾ.ಪಟವರ್ಧನರು ಕೇಸರಿ ಪತ್ರದ ೩ನೇ ಡಿಸೆಂಬರ್ ೧೯೧೮ನೇ ಇಸ್ವಿಯ ಸಂಚಿಕೆಯಲ್ಲಿ ಬರೆದಿದ್ದಾರೆ.

ಕ್ರಿ.ಶ.೧೬೮೦ರ ಶಾಸನವು ಮಲ್ಲಮ್ಮನ್ನು 'ಮಲ್ಲಮಾಂಬಾ', ೯೧ನೇ ಕಲಮೀ ಬಖೈರ ಮತ್ತು ಶಿವದಿಗ್ವಿಜಯ ಬಖೈರುಗಳು 'ಸೌಭಾಗ್ಯವತಿ ಸಾವಿತ್ರಿ', 'ಸಾವಿತ್ರಿಬಾಯಿ' ಎಂದು, ಚಿತ್ರಗುಪ್ತ ಬಖೈರು 'ಲಾಲಬೀ', ಚಟ್ನೀಸ್ ಬಖೈರ 'ಮಲವ್ವಾಯಿ' ಶೇಡಗಾಂವಕರ ಬಖೈರ 'ಮಲಪಾಈ' ಎಂದು ಕರೆದಿರುವದುಂಟು. ತುರುಕಾರಿ ಪಂಚಮರ ಇತಿಹಾಸದಲ್ಲಿ "ಸರ್ವೇ ಪಾತಿವೃತ್ಯೇ ಸತಿಂ ಪರಾಕೋಪೆ ಕಾಲಿಂ ರಣದುರ್ಗಾಂ ರಾಜತಂತ್ರೇ ಪ್ರಮೀಲಿಕಾಂ ಸೌಂದರ್ಯೇ ಚರತಿಂ ಸಾಕ್ಷಾದ್ವಿದಾಯಾಂ ಚ.ಸರಸ್ವತೀಂ ವಿಜ್ಞಾನೇಚ ತಥಾ ಗಾರ್ಗಿಂ ದಾನೇ ಕಲ್ಪಲತಾಮಿತಿ" ಎಂದು ವರ್ಣಿಸಿದೆ. ಮಲ್ಲಮ್ಮ ರಾಜತಂತ್ರ ನಿಪುಣೆಯಾಗಿದ್ದು, ಶಿವಾಜಿಯೊಂದಿಗೆ ಹೋರಾಡಿ, ಮರಾಠಾ ದಂಡನಾಯಕ ದಾದಾಜಿಯು ಕುದುರೆಯ ಹಿಂಗಾಲುಗಳನ್ನು ಕತ್ತರಿಸಿದಾಗ, ರಾಣಿ ಕೆಳಗುರುಳಿದಳು. ಆಗ ರಾಣಿಯನ್ನು ಬಂಧಿಸಿ ಶಿವಾಜಿಯ ಎದುರಿಗೆ ಕರೆತಂದಾಗ ಶಿವಾಜಿಗೆ

ತನ್ನ ಸೋದರಿಯ ನೆನಪಾಗಿ ನೀನು ನನ್ನ ಸೋದರಿಯಂತೆ' ಎಂದು ಹೇಳಿ ರಾಣಿಯನ್ನು ಬಂಧಮುಕ್ತಗೊಳಿಸಿದನು. ಅಲ್ಲದೆ ಮಗನಾದ ನಾಗಭೂಷಣನ ರಕ್ಷಣೆಯ ಹೊಣೆ ಹೊತ್ತನು. ಶಿವಾಜಿ ಮಲ್ಲಮ್ಮಾಜಿಯ ಬಾಂಧವ್ಯದ ಪ್ರತೀಕವಾಗಿ ಶಿಲ್ಪವೊಂದು ಯಾದವಾಡದಲ್ಲಿದೆ. ಶಿವಾಜಿಯೊಂದಿಗಿನ ಯುದ್ಧದ ನಂತರ ರಾಣಿಯು ಸು.೩೫ ವರ್ಷಗಳ ತುಂಬು ಬಾಳನ್ನು ಸಾಗಿಸಿದಳು. ಕ್ರಿ.ಶ.೧೭೧೩ರ ಹೊತ್ತಿಗೆ ನಾಗಭೂಷಣನಿಗೆ ೩೬ ವರ್ಷ. ಮಲ್ಲಮ್ಮನಿಗೆ ೫೮ ವರ್ಷ. ಈಕೆ ತನ್ನ ೫೮ನೇ ವಯಸ್ಸಿನಲ್ಲಿ ಲಿಂಗೈಕ್ಯಳಾದಳು. ಇವಳ ಸಮಾಧಿ ಎಲ್ಲಿರುವುದೆಂಬ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಬೆಳವಡಿಯ ಕೋಟೆಯು ಇನ್ನಿಲ್ಲದಂತೆ ಮಾಯವಾಗಿ ಇಂದು ಶಾಲೆಯೊಂದು ಆ ಜಾಗದಲ್ಲಿ ತಲೆಯೆತ್ತಿ ನಿಂತಿದೆ.

ಉತ್ತರ ಕನ್ನಡ(ಕಾರವಾರ) ಜಿಲ್ಲೆಯ ಸಿದ್ಧಾಪುರ ತಾಲ್ಲೂಕು ಪ್ರದೇಶಗಳನ್ನು ಒಳಗೊಂಡ ಪುಟ್ಟ ಸಂಸ್ಥಾನ ಬಿಳಗಿ ಸೋಮನದಿ ತೀರದ ಬಿಳಗಿಯನ್ನು ರಾಜಧಾನಿಯಾಗಿ ಬೆಳೆಸಿ ೧೫ನೇ ಶತಮಾನದಿಂದ ೧೭ನೇ ಶತಮಾನದವರೆಗೆ ಸು.೨೦೦ ವರ್ಷಗಳ ಕಾಲ ಬಿಳಿಗಿಯನ್ನು ಆಳಿದರು. ಹಲವಾರು ರಾಣಿಯರು ಸಂಸ್ಕೃತಿ ರಕ್ಷಣೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ರಾಣಿ ಚೆಲುವಮ್ಮ, ರಾಣಿ ರಮಾದೇವಿ, ರಾಣಿ ವೀರಾಂಬೆ, ರಾಣಿ ಚೆನ್ನಮ್ಮದೇವಿ, ರಾಣಿ ಶಾಂತಮ್ಮ, ರಾಣಿ ಗೌರಮ್ಮ, ರಾಣಿ ನೀಲಾಂಬಿಕೆ, ಚೆನ್ನಾಂಬಿಕೆ, ರಾಣಿ ಜಯಾಂಬೆ, ರಾಣಿ ಘಂಟೆ ಅಮ್ಮಾಜಿ ಇತ್ಯಾದಿ. ರಾಣಿಯರ ಹೆಸರುಗಳ ಉಲ್ಲೇಖಗಳಿರುವುದು ಕಂಡುಬರುತ್ತದೆ. ನಾಲ್ಕನೆಯ ಘಂಟೇಂದ್ರನು ಮಕ್ಕಳಿಲ್ಲದೆ ಅಸುನೀಗಿದಾಗ, "ಈತನ ರಾಣಿ ಚೆನ್ನಮ್ಮದೇವಿಯು ಕೆಳದಿ ಶಿವಪ್ಪನಾಯಕನು ವಶಪಡಿಸಿಕೊಂಡ ಬಿಳಗಿ ಸಂಸ್ಥಾನ ತನಗೆ ಸೇರಬೇಕೆಂದು ಕೋರಿ ಕೊಂಡಾಗ ಬಿಳಗಿ ಸಂಸ್ಥಾನವನ್ನು ಅವಳಿಗೆ ಬಿಟ್ಟುಕೊಟ್ಟನೆಂಬ"[೧೬] ಮಾಹಿತಿಯು 'ಕೆಳದಿನೃಪವಿಜಯದಿಂದ' ತಿಳಿದುಬರುತ್ತದೆ.

ರಾಣಿ ಚೆನ್ನಮ್ಮ ಬಿಳಗಿ ವಿದ್ವಜ್ಜನರ ಕೋರಿಕೆಯ ಮೇರೆಗೆ ಸಿದ್ದಾಪುರ ತಾಲ್ಲೂಕಿನ ಕೇದಗೆ ಮನೆತನಕ್ಕೆ ಸೇರಿದ ಬಾಲಕನನ್ನು ದತ್ತು ಪಡೆದು ಶಿವಪ್ಪನೆಂದು ಹೆಸರಿಟ್ಟು ದತ್ತು ಪಡೆದಳು. ಶಿವಪ್ಪನಾಯಕನಿಗೆ ಶಾಂತಮ್ಮ ಮತ್ತು ಗೌರಮ್ಮ ಎಂಬ ಪತ್ನಿಯರಿದ್ದು, ಇಬ್ಬರಿಗೂ ಮಕ್ಕಳಾಗಲಿಲ್ಲ. ಆಗ ಶಾಂತಮ್ಮ ಜಂಬೂರ ಮನೆತನದ ಹುಡುಗನನ್ನು ಇಮ್ಮಡಿ 'ಶಿವಪ್ಪನಾಯಕ' ನೆಂದು ಹೆಸರಿಟ್ಟು ದತ್ತು ಸ್ವೀಕರಿಸಿದಳು. ಹೀಗೆ ರಾಣಿಯರು ತೆರವಾದ ಸಿಂಹಾಸನಕ್ಕೆ ಯೋಗ್ಯ ಅಧಿಪತಿಯನ್ನು ಹುಡುಕಿ ದತ್ತು ಸ್ವೀಕರಿಸಿ, ವಂಶ ಪರಂಪರೆಯನ್ನು ಉಳಿಸಿಕೊಂಡು ಹೋಗಲು ಶ್ರಮಿಸಿದರು.

ದಕ್ಷಿಣ ಕರ್ನಾಟಕವನ್ನು ಸಮರ್ಥವಾಗಿ ಆಳಿದ ಅರಸುಮನೆತನಗಳಲ್ಲಿ ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಮನೆತನವೂ ಒಂದು. ತುಮಕೂರು ಜಿಲ್ಲೆಯ

ಬಹುಭಾಗವನ್ನು ಆಳಿದ ಈ ಸಂಸ್ಥಾನ ಇಂದಿನ ಆಧುನಿಕ ತಾಲ್ಲೂಕುಗಳಾದ ಚಿಕ್ಕನಾಯಕನ ಹಳ್ಳಿ, ಗುಬ್ಬಿ, ತಿಪಟೂರು, ತುರುವೇಕೆರೆ, ತುಮಕೂರು ತಾಲ್ಲೂಕಿನ ಕೆಲ ಭಾಗಗಳನ್ನು ಆಳಿದರು. ಹಾಗಲವಾಡಿ ಅರಸರ ಬಗೆಗೆ ಸವಿಸ್ತಾರವಾದ ಮಾಹಿತಿ ದೊರೆಯುವಂತೆ ಹಾಗಲವಾಡಿ ರಾಣಿಯರ ಬಗೆಗೆ ಮಾಹಿತಿಗಳು ದೊರಕದಿರುವುದು ವಿಷಾದದ ಸಂಗತಿ. ರಾಣಿ ಕಲ್ಲವ್ವಮ್ಮನ ಸಾಮಾಜಿಕ ಕೊಡುಗೆಯ ಬಗ್ಗೆ ಮಾಹಿತಿ ಇದೆಯೇ ಹೊರತಾಗಿ ಇನ್ನಿತರ ಯಾವುದೇ ಮಾಹಿತಿಗಳು ಲಭ್ಯವಿಲ್ಲ. ರಾಣಿ ರುದಿರಾಣಮ್ಮ ಕ್ರಿ.ಶ.೧೭೬೧–೧೭೬೨ ರವರೆಗೆ ಅಂದರೆ ಒಂದು ವರ್ಷಕಾಲ ಹಾಗಲವಾಡಿಯನ್ನು ಆಳಿದಳು. ಮುದ್ದವೀರಪ್ಪನಿಗೆ ಮಕ್ಕಳಿಲ್ಲದ ಕಾರಣವಾಗಿ ಆತನ ತಮ್ಮ ಪ್ರಸನ್ನ ರಾಮಪ್ಪ ಆಳ್ವಿಕೆ ನಡೆಸಿ, ಕ್ರಿ.ಶ.೧೭೬೪ರಲ್ಲಿ ಮರಣ ಹೊಂದಿದನು. ಈತನ ಆಳ್ವಿಕೆಯ ಪೂರ್ವದಲ್ಲಿ ರಾಣಿ ರುದಿರಾಣಮ್ಮನವರು ತೆರವಾದ ಸಿಂಹಾಸನಕ್ಕೆ ಅಧಿಪತಿ ಯಾದಳು. ಸಿರಾದಲ್ಲಿದ್ದ ಹೈದರಾಲಿಯು ಹಾಗಲವಾಡಿ ನಾಯಕನು ತೆರಿಗೆ ಹಣ ನೀಡಲಿಲ್ಲವೆಂಬ ಕಾರಣಕ್ಕೆ ಕರಿಚನ್ನಬಸಪ್ಪನಾಯಕನನ್ನು ಮತ್ತು ಮೂರನೇ ಚನ್ನಬಸಪ್ಪನಾಯಕನನ್ನು ಸೆರೆಮನೆ ಯಲ್ಲಿರಿಸಿದನು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ರಾಣಿ ರುದಿರಾಣಮ್ಮನವರು ಸಿರಾದ ನವಾಬನಾದ ಬಸಲಾತ್ ಜಂಗ್‌ನ ಅಪ್ಪಣೆ ಪಡೆದು ಆಳಿದಳಾದರೂ, ಬಹುಕಾಲ ಇವಳು ಆಳಲಿಲ್ಲ. "ಹೈದರಾಲಿ ಬಂಧಿಸಿದ್ದ ೩ನೇ ಚನ್ನಬಸಪ್ಪ ನಾಯಕನು ಬಿಡುಗಡೆಗೊಂಡು ಬಂದು ಆಳ್ವಿಕೆ ಪ್ರಾರಂಭಿಸಿದನು."[೧೯]

ಪ್ರಕೃತಿ ಬೆಡಗಿನ ಸಿರಿ, ಭಾರತದ ಸ್ವಿಟ್ಜರಲ್ಯಾಂಡ್ ಎಂದೇ ಹೆಸರಾದ ಕೊಡಗು ನಾಡನ್ನು ಕ್ರಿ.ಶ.೧೬೦೦ರಿಂದ ಕ್ರಿ.ಶ.೧೮೩೪ರವರೆಗೆ ಹಾಲೇರಿ ವಂಶ ಆಳ್ವಿಕೆ ನಡೆಸಿತು. ಹಾಲೇರಿ ವಂಶಜರು ಮೂಲತಃ ಕೆಳದಿ ವಂಶಕ್ಕೆ ಸೇರಿದವರು. "ಇಕ್ಕೇರಿ ನಾಯಕರ ವಂಶಸ್ಥನಾದ ವೀರರಾಜನು ಜಂಗಮವೇಷ ಧರಿಸಿ ಬಂದು ಜನರ ನಂಬಿಕೆಗೆ ಅರ್ಹನಾಗಿ ಹಾಲೇರಿ ರಾಜವಂಶದ ರಾಜ್ಯ ಸ್ಥಾಪನೆಗೆ ಕಾರಣವಾಗುತ್ತಾನೆ."[೨೦] ಈ ರಾಜ್ಯದ ಚುಕ್ಕಾಣಿ ಹಿಡಿದ ಸಮರ್ಥ ಆಡಳಿತಗಾರರಲ್ಲಿ ಕಿರಿಯ ಪ್ರಾಯದ ಒಬ್ಬ ರಾಣಿಯೂ ಇರುವುದು ವಿಶೇಷ. ಅಲ್ಲದೆ ಇತರ ರಾಣಿಯರು ರಾಜರಿಗೆ ಸಲಹೆಗಾರರಾಗಿ, ಸಹಾಯಕರಾಗಿ ಇದ್ದುದು ಕಂಡುಬರುತ್ತದೆ.

ರಾಣಿ ಲಕ್ಷ್ಮಮ್ಮಾಜಿಯು ವೀರರಾಜನ ಪತ್ನಿಯೂ, ಕೊಡಗಿನ ಚೆಂಗಾಳ್ವ ಪೆರಿಯರಾಜನ ಮಗಳೂ ಆಗಿದ್ದಳು. ಇವಳ ಮಕ್ಕಳು ಅಪ್ಪಾಜಿರಾಜೇಂದ್ರ ಹಾಗೂ ನಂಜುಂಡರಸ. "ಕ್ರಿ.ಶ.೧೬೦೭ ರಿಂದ ೧೬೩೩ರವರೆಗೆ ಹಾಲೇರಿಯನ್ನು ಆಳಿದ ಅಪ್ಪಾಜಿರಾಜೇಂದ್ರನನ್ನು ಶಿವಪ್ಪನಾಯಕ ಸೆರೆ ಹಿಡಿದಾಗ ಬಲಂ(ಬೇಲೂರ) ನಾಯಕರ ರಾಜಕುಮಾರಿಯೂ, ಕಿರಿಯವಳಾದ ಚಂಗಾಳ್ವ ವಂಶದ ರಾಣಿಯೂ ತನ್ನ ಪತಿಯನ್ನು ಸೆರೆಯಿಂದ ಬಿಡಿಸಬೇಕೆಂದು ಬೇಲೂರ ಕೃಷ್ಣಪ್ಪನಲ್ಲಿ

ಕೋರಿದಳೆಂಬುದನ್ನು"[೨೧] ಎಂ.ಜಿ.ನಾಗರಾಜರು ತಿಳಿಸುತ್ತಾರೆ. ಈ ರಾಣಿಯರ ಹೆಸರುಗಳು ಏನೆಂಬುದಾಗಲಿ, ಇನ್ನಿತರ ವಿಚಾರಗಳಾಗಲಿ, ತಿಳಿದುಬಂದಿಲ್ಲ. ರಾಣಿ ನಂಜಮ್ಮಾಜಿ, ಪಟ್ಟದ ಮಲ್ಲಮ್ಮ, ರಾಣಿ ಮುದ್ದಮ್ಮಾಜಿ, ರಾಣಿ ರಾಜಮ್ಮಾಣಿ, ರಾಣಿ ನಂಜಮ್ಮಾಜಿ, ದೇವಮ್ಮಾಜಿ ಇತ್ಯಾದಿ ರಾಣಿಯರ ಹೆಸರುಗಳು ಮಾತ್ರ ಉಲ್ಲೇಖಗೊಂಡಿವೆ. ಹೊರತು ಹೆಚ್ಚಿನ ಮಾಹಿತಿಗಳೇನು ದೊರೆಯುವುದಿಲ್ಲ. ರಾಣಿ ನೀಲಮ್ಮಾಜಿಯು ಮುದ್ದುರಾಜ ಹಾಗೂ ದೇವಮ್ಮಾಜಿಯರ ಪುತ್ರಿಯಾಗಿದ್ದಳು. ಕೊಡವ ಮನೆತನದ ಮೂಲಪುರುಷನಾದ ಉತ್ತುನಾಯಕನನ್ನು ಮುದ್ದುರಾಜನು ಹಾಲೇರಿ ಅರಮನೆಯಲ್ಲಿಟ್ಟು ಸಾಕಿ ಬೆಳೆಸಿದನು. ನಂತರ ವೀರಶೈವ ದೀಕ್ಷೆಯನ್ನು ನೀಡಿ ಚನ್ನಬಸಪ್ಪ ಎಂದು ಹೆಸರಿಟ್ಟು ತನ್ನ ಮಗಳಾದ ನೀಲಮ್ಮಾಜಿಯನ್ನು ವಿವಾಹ ಮಾಡಿಕೊಟ್ಟು ಅವನನ್ನು ಬೆಪ್ಪು ನಾಡನ್ನು ಆಳಲು ನೇಮಿಸಿದನು.

ಚೆನ್ನಬಸವನು ಲಿಂಗೈಕ್ಯನಾದಾಗ ರಾಣಿ ನೀಲಮ್ಮಾಜಿಯು ಅರಮನೆಯಲ್ಲಿ ಉಳಿಯಲು ಒಪ್ಪದೇ ಅರಮೇರಿಯಲ್ಲಿಯೇ ಉಳಿದಳು. ಹಾಗಾಗಿ ನೀಲಮ್ಮಾಜಿಯ ಅಣ್ಣನಾದ ಲಿಂಗರಾಜನು ಅರಮೇರಿ-ಕಳಚೇರಿ ಮಠವನ್ನು ಕ್ರಿ.ಶ.೧೮೧೨ರ ಸುಮಾರಿಗೆ ಸ್ಥಾಪನೆ ಮಾಡಿದನು ಎಂಬ ಅಂಶವನ್ನು ಎಂ.ಜಿ.ನಾಗರಾಜರು ಉಲ್ಲೇಖಿಸಿದ್ದಾರೆ.

ಹೈದರಾಲಿಯು ದೊಡ್ಡವೀರರಾಜೇಂದ್ರನನ್ನು, ಅವನ ತಾಯಿ ದೇವಾಂಬಿಕೆ, ಮೂವರು ಸೋದರಿಯರನ್ನು ಗೊರೂರಿನಲ್ಲಿ ಗೃಹ ಬಂಧನದಲ್ಲಿರಿಸಿದನು. ನೀಲಮ್ಮಾಜಿ, ದೇವಮ್ಮಾಜಿ ಇಬ್ಬರೂ ದೊಡ್ಡವೀರರಾಜೇಂದ್ರನ ಸೋದರಿಯರೇ, ಮತ್ತೊಬ್ಬ ಸೋದರಿ ಯಾರೆಂದು ತಿಳಿದುಬರುವುದಿಲ್ಲ. ಈ ಇಬ್ಬರನ್ನು ಟಿಪ್ಪುಸುಲ್ತಾನನು ದೇವಮ್ಮಾಜಿಯನ್ನು ಮೆಹ್ತಾಬ್(ಚಂದ್ರ) ಎಂದೂ, ನೀಲಮ್ಮಾಜಿಯನ್ನು ಅಪ್ತಾಬ್(ಸೂರ್ಯ) ಎಂದು ಹೆಸರಿಟ್ಟು ಅವರನ್ನು ತನ್ನ ಜನಕ್ಕೆ ಸೇರಿಸಿದ್ದನೆಂಬ ಮಾಹಿತಿ ಕೊಡಗಿನ ಇತಿಹಾಸ ಕೃತಿ ಉಲ್ಲೇಖಿಸಿದೆ. ಇವರಿಬ್ಬರೂ ತೀರಿಕೊಂಡಾಗ ನಾಲ್ಕುನಾಡು ಅರಮನೆಯ ತೋಟದಲ್ಲಿ ಮುಸಲ್ಮಾನ ಧರ್ಮದ ಪ್ರಕಾರ ಇವರನ್ನು ದಫನ್ ಮಾಡಲಾಯ್ತು.

ಮೊದಲ ಪತ್ನಿ ನಂಜಮ್ಮಾಜಿಯ ಮಗಳು ರಾಜಮ್ಮಾಜಿ ಐದು ವರ್ಷದವಳಾಗಿದ್ದಾಗ ದೊಡ್ಡವೀರರಾಜೇಂದ್ರನು ಮಹಾದೇವಮ್ಮಾಜಿಯನ್ನು ವಿವಾಹವಾಗುವ ಸಂದರ್ಭದಲ್ಲಿ ಬರೆದ ಆಶ್ವಾಸನಾ ಪತ್ರ ವಿಶಿಷ್ಟವಾದುದು. "ಇಂಗ್ರೇಜ ಬಹದ್ದೂರ ಕಂಪನಿ ಸರ್ಕಾರದ ಸರದಾರನೆಂದೂ, ಸಿಪಾಯಿಗಳನ್ನೂ, ಇಂಗ್ರೇಜ್ ಸರ್ಕಾರದ ನಿಶಾನಿ ಸಹ ಬಹಳ ಮಾನ ಮರಿಯಾದೆಯಿಂದ ಇದಿರುಗೊಂಡು ಕರೆತಂದು ಸಾಲಾಮು ಫಿರಂಗಿಗಳನ್ನು ಹಾರಿಸಿ ಸಮಸ್ತ ಜನರಂನು ಬರಮಾಡಿ ಸಭೆ ಸೇರಿಸಿ ಲಗ್ನಂವನ್ನು ಸಾಧಿಸಿ ಕಲ್ಯಾಣ ಆಗುವಾಗ್ಗೆ ಮಹದೇವಮ್ಮಾಜಿಯರಿಗೆ 'ನಿಂಮ

ಗರ್ಭದಲ್ಲು ಜನಿಸಿದಂಥಾ ಮಕ್ಕಳಿಗೆ ತಮ್ಮ ಕೊಡಗಿನ ಸಂಸ್ಥಾನದ ರಾಜತ್ವವನ್ನು ಕೊಡುತ್ತೇವೆಂಬುದಾಗಿ ಪ್ರತಿಜ್ಞೆ ಮಾಡಿ ಸಮಸ್ತ ಜನರ ಮುಂದಿಟ್ಟು ಇಂಗ್ರೇಜ ಸರದಾರರ ಶಾಯಿದಿಯಿಂದ ಗುರುಹಿರಿಯರ ಕೈಯಿಂದ ಶುಭ ಮುಹೂರ್ತದಲ್ಲಿ ಬಹಳ ವೇದೋಕ್ತಿಯಿಂದ ಮಹದೇವಮ್ಮಾಜಿ ವರಂನು ವಿವಾಹವಾದನು. ಮಹದೇವಮ್ಮಾಜಿ ಗರ್ಭದಲ್ಲಿ ಜನಿಸಿದಂಥಾ ಕುಮಾರರು ವೀರರಾಜೇಂದ್ರ ಒಡೆಯರವರ ಹೆಸರಿಗೂ, ದೌಲತ್ತಿಗೂ, ರಾಜಪಟ್ಟಕ್ಕೂ ಬಾಧ್ಯರಾಗಿದ್ದಾರೆಂಬುದನ್ನು ಇಂಗ್ರೇಜ್ ದೊಡ್ಡ ಸರ್ಕಾರಕ್ಕೆ ಅರಕೆ ಆಗುವ ಬಗ್ಯೂ ಸಮಸ್ತ ಜನರು ತಿಳಿಯುವ ಬಗ್ಯೂ ಈ ಸಾಧನದಲ್ಲಿ ಬರಸಿ, ಕೊಡಗಿನ ರಾಜಸ್ಥಾನದಲ್ಲಿ ಇಟ್ಟು ಇದೆ ಎಂದು ಕಂಪನಿ ಸರ್ಕಾರದ ಅಧಿಕಾರಿಗಳಿಗೂ ತನ್ನ ರಾಜ್ಯದ ಸಮಸ್ತ ಜನರಿಗೂ ವೀರರಾಜೇಂದ್ರನು ಜಾಹಿರು ಮಾಡಿದನು.[೨೨] ಕಠಿಣ ಸ್ವಭಾವದವನಾದ ವೀರರಾಜೇಂದ್ರನಿಗೆ ಪತ್ನಿಯಾದ ಮಹದೇಮ್ಮಾಜಿಯು ತನ್ನ ಸನ್ನಡತೆಯಿಂದ ಅವನಲ್ಲಿ ಮೃದುತ್ವ ತಂದಿದ್ದಳು. ಈಕೆಗೆ ಗಂಡು ಸಂತಾನವಿಲ್ಲದೆ, ನಾಲ್ಕು ಜನ ಹೆಣ್ಣುಮಕ್ಕಳು ಹುಟ್ಟಿದರು. ದೇವಮ್ಮಾಜಿ, ಮುದ್ದಮ್ಮಾಜಿ, ರಾಜಮ್ಮಾಜಿ, ಮಹದೇವಮ್ಮಾಜಿ ಮಕ್ಕಳು. “ಹಿರಿಮಗಳಾದ ದೇವಮ್ಮಾಜಿಯನ್ನು ಮಲ್ಲಪ್ಪ ಎಂಬ ಕೊಡವನೊಂದಿಗೆ ಮದುವೆ ಮಾಡಿ ೧ ಲಕ್ಷ ಚಿನ್ನದ ವರಹ, ಆಭರಣ, ಬೆಲೆಬಾಳುವ ೮ ವಸ್ತ್ರಗಳನ್ನು ಉಡುಗೊರೆಯಾಗಿ ನೀಡಿದನು.”[೨೩] ಆಕೆಗೆ ಹುಟ್ಟುವ ಗಂಡು ಮಗುವಿಗೆ ವೀರರಾಜೇಂದ್ರ ಎಂದು ಹೆಸರಿಡಬೇಕು. ರಾಜನ ಮುದ್ರೆ ಹಾಗೂ ಖಡ್ಗವನ್ನು ನೀಡಿ ಅವನನ್ನು ಪಟ್ಟದಲ್ಲಿ ಕೂರಿಸಬೇಕು. ಹಾಗೆ ಹುಟ್ಟದಿದ್ದಲ್ಲಿ ಆಕೆಯ ತಂಗಿಯರಲ್ಲಿ ಜನಿಸಿದವಗೆ, ಅವರಿಗೂ ಆಗದಿದ್ದಾಗ ಸಾಮಾನ್ಯ ಸ್ತ್ರೀಯರಲ್ಲಿ ಹುಟ್ಟಿದ ಗಂಡು ಮಕ್ಕಳಿಗೆ ಜೇಷ್ಠತೆಯನ್ನು ಆಧರಿಸಿ ಪಟ್ಟಕ್ಕೆ ಬರಬೇಕೆಂದು ಮರಣ ಶಾಸನ ಬರೆಸಿದನು. ಮತ್ತೆ ತನ್ನ ಮನಸ್ಸನ್ನು ಬದಲಿಸಿಕೊಂಡು ತನ್ನ ಮಗಳಾದ ದೇವಮ್ಮಾಜಿಯೇ ರಾಜ್ಯವಾಳಬೇಕೆಂದು ಕ್ರಿ.ಶ.೧೮೦೯ರ ಜೂನ್ ೯ರಂದು ಮರಣ ಹೊಂದುವ ಸಮಯದಲ್ಲಿ ಪ್ರೀತಿಯ ಮಗಳಾದ ದೇವಮ್ಮಾಜಿ ಕೈಗೆ ರಾಜಮುದ್ರೆಯನ್ನು ನೀಡಿ ಶಿವಾಧೀನನಾದನು. ಹಾಗಾಗಿ ರಾಣಿ ದೇವಮ್ಮಾಜಿ ಕ್ರಿ.ಶ.೧೮೦೯ರಲ್ಲಿ ಕೊಡಗಿನ ಆಡಳಿತಕ್ಕೆ ಮಹಾರಾಣಿಯಾಗಿ ಕ್ರಿ.ಶ.೧೮೧೧ರವರೆಗೂ ಆಳಿದಳು.

ಚಿಕ್ಕವೀರರಾಜೇಂದ್ರನನ್ನು ಕ್ರಿ.ಶ.೧೮೩೪ರ ಮಾರ್ಚ್ ೧೫ರಂದು ರಾಜನನ್ನು ಕಿತ್ತೊಗೆಯಲಾಯಿತು. ಕ್ರಿ.ಶ.೧೮೩೪ರ ಏಪ್ರಿಲ್ ೧೦ರಂದು ಚಿಕ್ಕವೀರರಾಜೇಂದ್ರನು ಶರಣಾಗತನಾದನು. ತನ್ನ ಕುಟುಂಬ ಹಾಗೂ ತನ್ನ ಪ್ರೀತಿಯ ಕುಮಾರಿ ಗೌರಮ್ಮರನ್ನು ಕರೆದುಕೊಂಡು ಕೆಲದಿನ ಕಾಶಿಯಲ್ಲಿ ನೆಲೆಸಿ, ನಂತರ ಲಂಡನ್ನಿಗೆ ತೆರಳಿದನು. ಲಂಡನ್ನಿನಲ್ಲಿರುವ ರಾಣಿ ವಿಕ್ಟೋರಿಯ ತನ್ನ ಮಗಳಾದ ಗೌರಮ್ಮಗೆ ಆಶ್ರಯ ಒದಗಿಸಬೇಕು ವಿದ್ಯೆ, ಪಾಶ್ಚಾತ್ಯ ಸಂಸ್ಕೃತಿ, ನೀತಿ ನಿಯಮಗಳನ್ನು ಕಲಿಸಬೇಕೆಂದು ಕೇಳಿಕೊಂಡನು. ರಾಣಿ ಇದಕ್ಕೆ ಒಪ್ಪಿದಳು. ಅಂದಿನಿಂದ ಕೊಡಗಿನ

ರಾಜಕುಮಾರಿ ಗೌರಮ್ಮ ವಿಕ್ಟೋರಿಯಾ ಗೌರಮ್ಮ ಆದಳೆಂಬ ಮಾಹಿತಿ ಕೊಡಗಿನ ಇತಿಹಾಸದಿಂದ ತಿಳಿದುಬರುತ್ತದೆ.

ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಚೆನ್ನಮ್ಮನ ಕಿತ್ತೂರು ಲಿಂಗಾಯತ ಸಂಸ್ಥಾನಗಳಲ್ಲಿ ಒಂದು. ಚರಿತ್ರೆಯೆನ್ನುವುದು ಎಲ್ಲ ನಿನ್ನೆಗಳು ಇಂದಿನ ವರ್ತಮಾನದಲ್ಲಿ ಬದುಕುವುದು ಎಂದರ್ಥ. ಕಿತ್ತೂರಿನ ರಾಣಿ ಮಲ್ಲಮ್ಮ, ರಾಣಿ ರುದ್ರಮ್ಮ, ರಾಣಿ ಚೆನ್ನಮ್ಮರು ಈ ನಾಡಿನ ಸ್ವಾತಂತ್ರ್ಯ ಮೌಲ್ಯಕ್ಕಾಗಿ ಹೋರಾಡಿದುದನ್ನು ಯಾವತ್ತೂ ಮರೆಯಲು ಸಾಧ್ಯವಿಲ್ಲ.

ರಾಣಿ ಮಲ್ಲವ್ವ ಸು.೧೫ ವರ್ಷಗಳ ಕಾಲ ಸಮರ್ಥವಾಗಿ ಕಿತ್ತೂರನ್ನು ಆಳಿದ ಮೊದಲ ರಾಣಿ. ಈಕೆ ದೊರೆ ಮಾಳವಗೌಡನ ರಾಣಿ. ರಾಣಿ ರುದ್ರಮ್ಮ ಮಲ್ಲಸರ್ಜನ ಹಿರಿಯರಾಣಿ. ಈಕೆಯ ತವರು ಮನೆಯ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ನಾನು ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ತಲ್ಲೂರಿನ ಗಿರಿಜಾಬಾಯಿ ದೇಸಾಯಿಯವರು 'ರುದ್ರಮ್ಮನ ತವರುಮನೆ ತಲ್ಲೂರು ಎನ್ನುತ್ತಾರೆ. ಆದರೆ ಬಾಳಪ್ಪ ಚಿನಗುಂಡಿಯವರು ರುದ್ರಮ್ಮನ ತವರುಮನೆ ಚಚಡಿ ಎನ್ನುತ್ತಾರೆ. ಈ ಬಗ್ಗೆ ಅವರು ಒದಗಿಸುವ ದಾಖಲೆಗಳನ್ನು ಪರಾಮರ್ಶಿಸುವ ಅಗತ್ಯವಿದೆ. ಕಿತ್ತೂರು ಸಂಸ್ಥಾನ ಸಾಹಿತ್ಯ ಕೃತಿಯಲ್ಲೂ ತಲ್ಲೂರು ರುದ್ರಮ್ಮನ ತವರು, ಹುಟ್ಟೂರು ಎಂಬ ಉಲ್ಲೇಖವಿದೆ. ರಾಣಿ ರುದ್ರಮ್ಮ ತನ್ನ ಮಗನಿಗೆ ಬೈರವ ಕಂಕಣ ಕಟ್ಟಿದಳು. ರಾಣಿ ಚೆನ್ನವ್ವನ ಬಗ್ಗೆ ದೊರೆಯುವಷ್ಟು ಮಾಹಿತಿಗಳು ರಾಣಿ ರುದ್ರಮ್ಮನ ಬಗ್ಗೆ ದೊರೆಯದಿರುವುದು ವಿಷಾದದ ಸಂಗತಿ. ಈಕೆಯ ಸಮಾಧಿಯು ಸಂಗೊಳ್ಳಿ ಹತ್ತಿರದ ಮಲಪಹಾರಿ ನದಿಯ ದಂಡೆಯ ಮೇಲಿದೆ ಎನ್ನುತ್ತಾರೆ ಜನಪದರು.

ಕಿತ್ತೂರನ್ನಾಳಿದ ಮತ್ತೊಬ್ಬ ಪ್ರಸಿದ್ಧ ರಾಣಿಯೆಂದರೆ ಚೆನ್ನಮ್ಮ. ಕಿತ್ತೂರಿನ ಕಾಗತಿಯ ದೇಸಾಯಿ ಧೂಳಪ್ಪಗೌಡ ಮತ್ತು ಪದ್ಮಾವತಿಯರ ಮಗಳಾಗಿ ಕ್ರಿ.ಶ.೧೭೭೮ರಲ್ಲಿ ಜನಿಸಿದ ರಾಣಿ ಸು.೧೭೯೦ರಲ್ಲಿ ಕಿತ್ತೂರ ರಾಜ ಮಲ್ಲಸರ್ಜನನೊಂದಿಗೆ ವಿವಾಹವಾಯ್ತು. ದೊರೆ ಮಲ್ಲಸರ್ಜನಿಗೆ ಆಡಳಿತದಲ್ಲಿ ರಾಣಿ ನೆರವಾಗುತ್ತಿದ್ದಳು. ಮಲ್ಲಸರ್ಜನು ಕ್ರಿ.ಶ.೧೮೧೬ರಲ್ಲಿ ಮರಣ ಹೊಂದಿದ. ಆಗ ಮಗ ಶಿವಲಿಂಗರುದ್ರ ಸರ್ಜ ೮ ವರ್ಷ ಕಾಲ ಆಡಳಿತ ನಡೆಸಿ, ಕ್ರಿ.ಶ.೧೮೨೪ರಲ್ಲಿ ಮರಣ ಹೊಂದಿದನು. ಈತನ ಮರಣದ ತರುವಾಯ ರಾಣಿ ಚೆನ್ನಮ್ಮ ಆಡಳಿತ ಸೂತ್ರವನ್ನು ಹಿಡಿದಳು. ಧಾರವಾಡ ಜಿಲ್ಲಾಧಿಕಾರಿಯಾದ ಥ್ಯಾಕರೆಯು ರಾಜಭಂಡಾರಕ್ಕೆ ಬೀಗಮುದ್ರೆ ಹಾಕಿದಾಗ ಕಿತ್ತೂರಿನ ಸ್ವಾಭಿಮಾನಕ್ಕೆ ಧಕ್ಕೆ ಒದಗಿತು. ರಾಣಿ ಯುದ್ಧಕ್ಕೆ ಸಕಲ ಸಿದ್ಧತೆಗಳನ್ನು ನಡೆಸಿದಳು. ನೆರೆಯ ಸಂಸ್ಥಾನಿಕರಿಂದ ಸಹಾಯಹಸ್ತವನ್ನು ಚಾಚಿದಳು. "ದೇವಭಕ್ತರಾದ ರೈತ ಬಂಧುಗಳ ಸೈನ್ಯವನ್ನು ಸಂಗ್ರಹಿಸಿದಳು. ಸಕಲ ತ್ಯಾಗಕ್ಕೆ ಹುರಿದುಂಬಿಸಿದಳು. ಕಿತ್ತೂರು

ಸ್ವತಂತ್ರ್ಯವಿದೆ, ಪರತಂತ್ರಕ್ಕೆ ಬಗ್ಗುವುದಿಲ್ಲ ಎಂಬುದನ್ನು ಜಗತ್ತಿಗೆ ಸಾರಿದಳು. ಕಿತ್ತೂರಿನ ಗುಪ್ತಚರ 'ರುದ್ರಪ್ಪ' ನಾಯಕನನ್ನು ಥ್ಯಾಕರೆ ತೋಪಿಗೆ ಬಲಿಕೊಟ್ಟರೆ ರಾಣಿಯು ಥ್ಯಾಕರೆಯ ಗುಪ್ತಚರ ಮಲ್ಲಪ್ಪ ಕನೂರನನ್ನು ಆನೆ ಕಾಲಿಗೆ ಕಟ್ಟಿ ಎಳಸಿ ಕೊಲ್ಲಿಸಿದಳು" ಹೀಗೆ ಏಟಿಗೆ ಎದುರೇಟನ್ನು ನೀಡಿದಳು.

ಥ್ಯಾಕರೆಯು ಸೈನ್ಯ ಪಡೆಯೊಂದಿಗೆ ಕಿತ್ತೂರಿನೆಡೆಗೆ ಬಂದಾಗ ಕಿತ್ತೂರಿನ ಬಾಗಿಲನ್ನು ಮುಚ್ಚಿ ಸೈನಿಕರಲ್ಲಿ ಧೈರ್ಯವನ್ನು ತುಂಬಿದಳು. ಸಿಟ್ಟಿಗೆದ್ದ ಕಿತ್ತೂರ ಸೇನೆಯು ತಾಳ್ಮೆಯನ್ನು ಕಳೆದುಕೊಂಡಿತು. ಅಮಟೂರು ಬಾಳಪ್ಪನು ರಾಣಿಯ ಆಜ್ಞೆಯಂತೆ ಕೋಟೆಯ ಮೇಲಿಂದ ಗುಂಡು ಹಾರಿಸಿದನು. ಅದು ಥ್ಯಾಕರೆಗೆ ತಗುಲಿ ಆತ ಉರುಳಿಬಿದ್ದನು. "ಅಲ್ಲದೆ ೧೮೨೪ರ ಅಕ್ಟೋಬರ್ ೨೩ರಂದು ಥ್ಯಾಕರೆಯು ಸಾವನ್ನಪ್ಪಿದನು."[೨೪] ಥ್ಯಾಕರೆಯ ಸಾವಿನ ನಂತರ ಚಾಪ್ಲಿನ್ ಕಿತ್ತೂರನ್ನು ಮುತ್ತಿದನು. ರಾಣಿ ಚೆನ್ನಮ್ಮಳು ಸೇರಿದಂತೆ ೪೦ ಜನ ಸರದಾರರು ಸೆರೆಯಾಳಾದರು. ಇವರನ್ನು ಬೆಳಗಾವಿಯ ಕಿಲ್ಲೆಯಲ್ಲಿಯ ಆಲದ ಗಿಡಕ್ಕೆ ತೂಗು ಹಾಕಿ ಕೊಲ್ಲಲಾಯ್ತು. ಚೆನ್ನಮ್ಮ, ವೀರಮ್ಮ, ಜಾನಕಿಬಾಯಿರನ್ನು ಮೊದಲು ಬೈಲಹೊಂಗಲದಲ್ಲಿ ಇರಿಸಿದ್ದರೂ ನಂತರ ವೀರಮ್ಮನನ್ನು ಪ್ರತ್ಯೇಕಿಸಿ ಧಾರವಾಡದಲ್ಲಿ ಇಡಲಾಯ್ತು. ಕೆಲವು ದಿನಕಾಲ ಅತ್ತೆಯೊಡನೆ ಇದ್ದ ಜಾನಕಿಬಾಯಿಯು ಅಸು ನೀಗಿದಳು. ಚೆನ್ನಮ್ಮ ಒಬ್ಬಳೇ ೫ ವರ್ಷಗಳ ಕಾಲ ಸೆರೆಮನೆಯಲ್ಲಿದ್ದು ಕ್ರಿ.ಶ.೧೮೨೯ರ ಫೆಬ್ರುವರಿ ೨ರಂದು ಲಿಂಗೈಕ್ಯಳಾದಳು. "ಅಂದು ಕಿತ್ತೂರ ರಾಣಿ ಚೆನ್ನಮ್ಮ ಹೊತ್ತಿಸಿದ ಸ್ವಾತಂತ್ರ್ಯದ ಕಿಡಿಯು ಇಂದು ಸ್ವಾತಂತ್ರ್ಯದ ಅರುಣೋದಯದ ೧೮೫೭ರ ಹೋರಾಟಕ್ಕೆ ಇಂಬುಕೊಟ್ಟಿರುವುದನ್ನು"[೨೫] ಮರೆಯುವಂತಿಲ್ಲ.

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಒಂದು ಗ್ರಾಮ ಸಿರಸಂಗಿ. ಈ ಸಿರಸಂಗಿಯನ್ನು ರಾಣಿ ಚೆನ್ನಮ್ಮ ಆಳಿದುದು ಒಂದು ವಿಶೇಷ. ರಾಣಿ ಚೆನ್ನವ್ವ ಲಿಂಗನಗೌಡನ ಹಿರಿಯ ಪತ್ನಿ ಕ್ರಿ.ಶ.೧೭೧೬ರಲ್ಲಿ ಲಿಂಗನಗೌಡನು ಮರಣ ಹೊಂದಿದ ನಂತರ ಸಂಸ್ಥಾನಕ್ಕೆ ವಾರಸುದಾರರಿಲ್ಲದ ಸಂದರ್ಭದಲ್ಲಿ ಚೆನ್ನಮ್ಮಾಜಿಯು ಸಂಸ್ಥಾನದ ರಾಜ್ಯಭಾರವನ್ನು ವಹಿಸುವುದಾಗಿ ನವಾಬರಿಗೆ ತಿಳಿಸಿದಳು. "ಆಡಳಿತಕ್ಕೆ ಬೇಕಾದ ಚಾಣಾಕ್ಷತೆ, ನಿರ್ವಹಣೆ ಕೌಶಲ್ಯ, ರಾಜನೀತಿ, ರಾಜ ಗಾಂಭೀರ್ಯತೆ, ಪರಾಕ್ರಮ, ಸಮರಕಲೆ, ರಕ್ತಗತವಾಗಿ ಬಂದಿತ್ತು."[೨೬] ಈಕೆಯ ಉನ್ನತ ವ್ಯಕ್ತಿತ್ವದ ಮೇಲೆ ನಂಬಿಕೆಯನ್ನಿಟ್ಟ ಸವಣೂರು ನವಾಬರು ಸಮ್ಮತಿಯನ್ನು ಕೊಟ್ಟರು. ಲಿಂಗವ್ವನ ಮಗನಾದ ಜಾಯಗೊಂಡನಿಗೆ ಸಕಲ ವಿದ್ಯಾಭ್ಯಾಸ ಕಲಿಕೆಗಾಗಿ ವ್ಯವಸ್ಥೆ ಮಾಡಿದಳು. ಯಾವಗಲ್ಲದ ವೆಂಕಟಗಿರಿಯನ್ನು ಉಪಾಯದಿಂದ ಸದೆಬಡಿದಳು. ಇದರಿಂದ ಸುಪ್ರೀತರಾದ ಸವಣೂರು ನವಾಬರು ಚೆನ್ನಾಂಬೆಗೆ ಯಾವಗಲ್ಲನ್ನು ಉಂಬಳಿಯಾಗಿ[೨೭] ಕೊಟ್ಟರು. ಸಿರಸಂಗಿ ನವಿಲ್ಗುಂದ

ಸಂಸ್ಥಾನದ ರಾಣಿಯರಲ್ಲಿ ಲಿಂಗವ್ವ, ಸಿದ್ದಲಿಂಗವ್ವ, ರಾಯವ್ವರ ಬಗೆಗೆ ಉಲ್ಲೇಖವಿದೆ. ಇವರು ಆಡಳಿತ ಸೂತ್ರವನ್ನು ವಹಿಸಿಕೊಂಡ ಬಗ್ಗೆ ಮಾಹಿತಿಗಳು ದೊರೆಯವು.

ವಿಜಯನಗರ ಪತನವಾದ ನಂತರ ಕರ್ನಾಟಕದಲ್ಲಿ ಭಾರತೀಯ ಧರ್ಮ, ಭಾಷೆ, ಸಂಸ್ಕೃತಿಗಳು ನಾಶವಾಗುತ್ತಿರುವ ಕಠಿಣ ಪರಿಸ್ಥಿತಿಯಲ್ಲಿ ಅವುಗಳನ್ನು ರಕ್ಷಿಸಲೆಂದೇ ಅನೇಕ ದೇಶೀಯ ಸಂಸ್ಥಾನಗಳು ಹುಟ್ಟಿಕೊಂಡವು. ಅಂಥ ಸಂಸ್ಥಾನಗಳಲ್ಲಿ ರಾಯಚೂರು ಜಿಲ್ಲೆಯ ದೇಸಗತಿಯೂ ಒಂದು. ಗೆಜ್ಜಲಗಟ್ಟೆ ನಾಡಗೌಡರ ಮನೆತನದಲ್ಲಿ ಆಗಿ ಹೋದ ರಾಣಿಯರಲ್ಲಿ ಅತಿ ಪ್ರಸಿದ್ಧಳೂ, ಧರ್ಮಿಷ್ಠಳೂ, ಪತಿ ಪಾರಾಯಣೆಯೂ, ಗುರು, ಲಿಂಗ, ಜಂಗಮರಲ್ಲಿ ನಿಷ್ಠಳೂ, ದಾಸೋಹದಲ್ಲಿ ನಿರತಳೂ ಆಗಿದ್ದ ರಾಣಿ ಲಕ್ಷ್ಮೀದೇವಿಯು ಧರ್ಮದಲ್ಲಿ ಶ್ರದ್ಧೆ ತೋರಿದಂತೆ, ರಾಜ್ಯದ ಆಡಳಿತದಲ್ಲೂ ಕೌಶಲ್ಯ, ಧೀರತನ, ಧೈರ್ಯ, ಸ್ಥೈರ್ಯ ತೋರಿರುವಳು. "ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ"[೨೮] ಎಂಬ ಉಕ್ತಿಗೆ ರಾಣಿ ಲಕ್ಷ್ಮೀದೇವಿಯು ನಿತ್ಯ ನಿದರ್ಶನಳಾಗಿದ್ದಳು. ಗೆಜ್ಜಲಗಟ್ಟೆಯ ಮಾನಪ್ಪಗೌಡರ ನಾಲ್ಕನೆಯ ಪತ್ನಿ. ಮಾನಪ್ಪನಾಡಗೌಡರು ವಿಧಿವಶರಾದ ಮೇಲೆ ರಾಣಿ ಲಕ್ಷ್ಮೀದೇವಿಯು ನಾಡಗೌಡಿಕೆಯ ಆಡಳಿತ ಸೂತ್ರವನ್ನು ಹಿಡಿದಳು. ಗುರುಗುಂಟಿಯ ದೊರೆಗಳು ಗೆಜ್ಜಲಗಟ್ಟೆ ಮನೆತನವನ್ನು ತಮ್ಮ ಸ್ವಾಧೀನಪಡಿಸಿಕೊಳ್ಳಲು ತಂತ್ರ ಹೂಡಿ, ತಮ್ಮ ಸೈನ್ಯವನ್ನು ಗೆಜ್ಜಲಗಟ್ಟೆಗೆ ಕಳಿಸಿದರು. ದಂಡುಹಟ್ಟಿಯ ಸಮೀಪ ಬರುವುದನ್ನು ತಿಳಿದು ರಾಣಿ ಲಕ್ಷ್ಮೀದೇವಿಯು ಪ್ರತಿತಂತ್ರವನ್ನು ಹೂಡಿದಳು. ಕತ್ತಲಾಗುತ್ತಿದ್ದಂತೆ ಅಲ್ಲಲ್ಲಿ ಸಾವಿರಾರು ಪಂಜುಗಳನ್ನು ಹೊತ್ತಿಸಿದಳು. ದೂರದಿಂದ ಅವುಗಳನ್ನು ನೋಡಿದ ಗುರುಗುಂಟಿ ಸೈನಿಕರು, ವೈರಿಗಳು ತಮಗಿಂತ ಬಲಿಷ್ಠರೆಂದು ತಿಳಿದು, ಹೆದರಿ ಹಿಂತಿರುಗಿದರು. ರಾಣಿಯ ಸಮಯಪ್ರಜ್ಞೆಯಿಂದ ಗೆಜ್ಜಲಗಟ್ಟೆಯು ಬಂದೊದಗಿದ ಕುತ್ತಿನಿಂದ ಪಾರಾಯ್ತು. ರಾಣಿಯು ನಿಲೋಗಲ್ ಮನೆತನದ ಅಣ್ಣತಮ್ಮಂದಿರ ಸಂಬಂಧಿಗಳಾದ ಪಿಡ್ಡನಗೌಡ ನಾಡಗೌಡರ ಮನೆತನದ ವೆಂಕಟರಾವ್‌ರ ಮಗ ದೊಡ್ಡ ಬಸವಂತರಾವ್ ಅವರನ್ನು ದತ್ತಕ ತೆಗೆದುಕೊಂಡು ಪಟ್ಟಕ್ಕೆ ಕೂರಿಸಿದಳು. ಸಂಸ್ಥಾನದ ಆದಾಯ ಹೆಚ್ಚಿಸಲು ಅನೇಕ ಜನಪರ ಕಾರ್ಯಗಳನ್ನು ಜಾರಿಗೆ ತಂದಳು. ಕೆರೆ, ಬಾವಿಗಳಿಂದ ನೀರಾವರಿಗೆ ಉತ್ತೇಜನ ನೀಡಿದಳು. ಪ್ರಜೆಗಳ ಶಿಕ್ಷಣಕ್ಕಾಗಿ ಹಣ ವಿನಿಯೋಗಿಸಿದಳು. ಆಡಳಿತದಲ್ಲಿ ಬಿಗುವು ಮತ್ತು ಶಿಸ್ತನ್ನು ತಂದಳು. ರಾಣಿ ವಿದ್ಯಾವಂತೆಯಾಗಿದ್ದು, ಸಂಸ್ಥಾನದ ಪತ್ರ ವ್ಯವಹಾರಗಳನ್ನು ತಾನೇ ಮಾಡುತ್ತಿದ್ದಳು. ಗುರು ಹಿರಿಯರಲ್ಲಿ ಗೌರವವನ್ನಿಟ್ಟುಕೊಂಡಿದ್ದಳು. ಶ್ರೀ ಘನಮಠದಾರ್ಯರ ಪ್ರಭಾವದಿಂದ ರಾಣಿಗೆ ಜ್ಞಾನೋದಯವಾಗಿ ಅಧಿಕಾರ, ರಾಜಭೋಗ, ವಿಲಾಸಗಳು ನಶ್ವರವೆಂಬ ವಿವೇಕ ರಾಣಿಯಲ್ಲಿ ಮೊಳೆಯಿತು. ರಾಣಿ ಲಕ್ಷ್ಮೀದೇವಿಯು ನಿತ್ಯ ಅನ್ನದಾಸೋಹವನ್ನು ಏರ್ಪಡಿಸಿ ಜಂಗಮರ ಸೇವೆಯಲ್ಲಿ ತತ್ಪರಳಾದಳು.[೨೯]

ವಿಜಯನಗರದ ಅವನತಿಯ ಸಂದರ್ಭದಲ್ಲಿ ಕನ್ನಡ ನಾಡು ನುಡಿಗಾಗಿ ಶ್ರಮಿಸಿದ ಮತ್ತೊಂದು ಅರಸುಮನೆತನ ಕಳಲೆ. ಕಳಲೆಯಲ್ಲಿ ನಂಜಮ್ಮಣ್ಣಿ, ದೇವಿರಮ್ಮಣ್ಣಿ, ಗೌರಮ್ಮಣ್ಣಿ, ದೊಡ್ಡಮ್ಮಣ್ಣಿ, ಸಿದ್ದಾಜಮ್ಮಣ್ಣಿ, ದೊಡ್ಡ ಮಲ್ಲಾಜಮ್ಮಣ್ಣಿ, ಚಿಕ್ಕಮಲ್ಲಾಮ್ಮಜಣ್ಣಿ, ಚೆನ್ನಜಮ್ಮಣಿ, ದೊಡ್ಡ ತಿಮ್ಮಮ್ಮಣ್ಣಿ, ಚೆಲುವಾಂಬೆ, ಕೆಂಪಾಜಮ್ಮಣ್ಣಿ ಇತ್ಯಾದಿ ರಾಣಿಯರ ಹೆಸರುಗಳ ಉಲ್ಲೇಖವಿದೆ. ರಾಣಿ ಚೆನ್ನಾಜಮ್ಮಣ್ಣಿ, ತಿಮ್ಮರಾಜ ಒಡೆಯರ ೨ನೇ ಪತ್ನಿಯಾದ ಈಕೆ ತಿಮ್ಮರಾಜ ಒಡೆಯರ ಹಿರಿಯ ಪತ್ನಿಯಾದ ದೊಡ್ಡಮ್ಮಣ್ಣಿಯವರಿಗೆ ಜನಿಸಿದ ಲಕ್ಷ್ಮೀಕಾಂತ ಒಡೆಯರಿಗೆ ಪಟ್ಟವಾದುದರ ಬಗೆಗೆ ಅಸಮಾಧಾನವಿತ್ತು. ತನ್ನ ಮಕ್ಕಳಿಗೆ ರಾಜ್ಯ ಸಿಕ್ಕಲಿಲ್ಲವೆಂಬ ಆಕ್ರೋಶದಿಂದ ಲಕ್ಷ್ಮೀಕಾಂತ ಒಡೆಯರನ್ನು ಕೊಲ್ಲಿಸಿದಳೆಂದು, ಅಲ್ಲದೆ ಕರಿಕಲ್ಲು ಮಲ್ಲರಾಜನನ್ನು ಕೊಲ್ಲಿಸಲು ಪ್ರಯತ್ನಿಸಿದಳು. ಅದು ಸಾಧ್ಯವಾಗಲಿಲ್ಲ. ಅವನ ತಾಯಿಯಾದ ದೇವಮ್ಮಣ್ಣಿಯನ್ನು ಸೆರೆಮನೆಯಲ್ಲಿರಿಸಿ, ತನ್ನ ಮೂರು ಮಕ್ಕಳ ಪೈಕಿ "ಚಂದ್ರಶೇಖರ ಒಡೆಯರಿಗೆ ಪಟ್ಟ ಕಟ್ಟಿದಳು."[೩೦] ಲಕ್ಷ್ಮೀಕಾಂತ ಒಡೆಯರ ಪತ್ನಿಯಾದ ಲಿಂಗಮ್ಮಾಜಿಯವರು ಪತಿಯ ಅಕಾಲ ಮರಣಕ್ಕೆ ಮಮ್ಮಲ ಮರುಗಿದಳು. ಸಹಗಮನಕ್ಕೆ ಸಿದ್ಧಳಾಗಿ, ಚಿತೆಯ ಮುಂದೆ ಬಂದು ಶಾಪವೊಂದನ್ನು ನೀಡುತ್ತಾಳೆ. "ಕೂಡಲಾ ಪುರದ ಗದ್ದೆ ಅಕ್ಕಿ ರಕ್ತದ ಕೂಳ ಕಲಿಸಿದಂತೆ ಇರಲೆಂದೂ, ತನ್ನ ಗಂಡನನ್ನು ಕೊಲ್ಲಿಸಿದ ಚೆನ್ನಾಜಮ್ಮಣ್ಣಿಯ ಮಕ್ಕಳ ವಂಶ ಬೆಳೆಯದಿರಲೆಂದೂ, ಮೈಸೂರು ಅರಸರ ಬೋಳಚಾಮರಾಜ ಒಡೆಯರ ಪುತ್ರಿ ದೇವಮ್ಮಣಿಯರ ವಂಶ ಬೆಳೆಯಲಿ"[೩೧] ಎಂದು ಶಾಪ ಕೊಟ್ಟು ಸಹಗಮನ ಹೋದಳೆಂಬ ಮಾಹಿತಿ ತಿಳಿದುಬರುತ್ತದೆ.

ಕ್ರಿ.ಶ.೧೭೭೭ರಲ್ಲಿ ಪಟ್ಟವೇರಿದ ಚಾಮರಾಜನಿಗೆ ಮೂಗೂರ ಬಾಳಲೋಚನನ ಗ್ರತನೂಭವೆ ರೂಪು ಸಂಪನ್ನೆಯಾದ ಕೆಂಪನಂಜಾನೆ, ಹುರಕ್ಕಿ ನಂಜರಾಜತನುಭವೆಯು, ಕೆಂಪದೇವಾಂಬಿಕೆಯು ಅತಿಶಯ ರೂಪವತಿಯಾದ ಕೀಲಾಪುರದ ರಾಜಪುತ್ರಿ ಚೆಲುವಾಂಬೆ, ಬಾಳೆ ಸುಳಿಯಂತೆ ತೊಳಗಿ ಬೆಳಗಿ ನಳನಳಿಸುವ ರೂಪಿನ ಬಾಲೆ ಅರಸನಗಿ ಜೇಷ್ಠ ಪತ್ನಿಯ ಮಗಳಾದ ದೇವಾಂಬಿಕೆಯನ್ನು ಅತಿಶಯ ರೂಪಿನಲ್ಲಿ ರತಿಯು, ವಿದ್ಯಾನಿಪುಣೆಯಿಂ, ಭಾರತಿಯಂ ಸುಗುಣ ಸೊಬಗು ಶಾಂತತೆಯೊಳ್ ರೋಹಿಣಿಯನ್ನು ಹೋಲುವ ಪಂಪಾನ್ವಯನಪ್ಪ ಹುರದ ಪುಟ್ಟರಾಜರಸನ ಕುಮಾರತಿ ಪಾವನೆಯಾದ ದೇವೀರಾಂಬಿಕೆ, ರೂಪಲಾವಣ್ಯ ವಿಲಾಸದೊಳ್ ಸುಲಕ್ಷಣವುಳ್ಳ ತೊಂಡವಾಡಿ ಕಾಂತರಸನ ಪುತ್ರಿ ಲಕ್ಷ್ಮಣಾಂಬೆಯಂ, ಫುಲ್ಲಶರನ ವಲಭೆಯು ರೂಪಂ ಗೆಲ್ವ ಹುಲ್ಲನ ಹಳ್ಳಿಯ ಭೂವಲ್ಲಭನ ಸುತೆ ನಂಜಾಂಬೆ ಹೀಗೆ ಹಲವಾರು ರಾಣಿಯರ ಮಾಹಿತಿಗಳನ್ನು ದೇವಚಂದ್ರನ ರಾಜಾವಳಿ ಕಥಾಸಾರ ಒದಗಿಸುತ್ತದೆ.

ವಿಜಯನಗರೋತ್ತರ ಕಾಲಾವಧಿಯಲ್ಲಿ ಹಿಂದೂ ಧರ್ಮದ ಉಳಿವಿಗಾಗಿ ಶ್ರಮಿಸಿದ ಮತ್ತೊಂದು ಅರಸುಮನೆತನ ಬಳ್ಳಾರಿ ಜಿಲ್ಲೆಯ ಕುರುಗೋಡು ಸಿಂಧರು. ಅರಸರ ಕಾರ್ಯ

ಕಲಾಪಗಳಿಗೆ ಕೈಜೋಡಿಸುತ್ತಿದ್ದ ರಾಣಿಯರ ಸಂಖ್ಯೆಯೂ ಅಪಾರವಾಗಿದೆ. ಈ ಹಿನ್ನೆಲೆಯಲ್ಲಿ ರಾಣಿ ಸಗರಬ್ಬರಸಿ, ರೇವಕಬ್ಬರಸಿ, ಪೊಲೆಯಬ್ಬರಸಿ, ಬಿಜ್ಜಳದೇವಿ, ಕೇತಲದೇವಿ, ಮಹಾದೇವಿ, ಚಂದಲದೇವಿ, ಲಕ್ಷ್ಮೀದೇವಿ, ಸಿರಿಯಾದೇವಿ, ದೇಮುಳದೇವಿ, ತ್ರಿಪುರಾದೇವಿ, ಉಮಾದೇವಿ, ಲೋಕಮಹಾದೇವಿ, ಗಂಗಮಹಾದೇವಿ, ಮಾಣಿಕ್ಯದೇವಿ, ಕಾವಬ್ಬರಸಿ, ಇತ್ಯಾದಿ ರಾಣಿಯರ ಹೆಸರು, ರೂಪ ವ್ಯಕ್ತಿತ್ವವನ್ನು, ಶಾಸನಗಳು ವರ್ಣಿಸಿರುವುದನ್ನು ಕಾಣಬಹುದು(೯೬೫-೯೯೦). ಕಮ್ಮರಸನ ಪತ್ನಿ 'ಸಗರಬ್ಬರಸಿ' ವಿಧಿತಗುಣಗಣ ಶಿಲಾಭರಣ ಭೂಷಿತೆ, ೯೯೦-೧೦೧೫ ಮಲಿಕಾಲನ ರಾಣಿ ರೇವಕಬ್ಬರಸಿ 'ಲಲನೆಗೆ ದೊರೆಯೆನಿಸುವಂತೆ' ಸುಂದರಿ ಕುರುಗೋಡು ಸಿಂಧರು ಪ್ರಾರಂಭದಲ್ಲಿ ಮನ್ನೆಯರಾಗಿದ್ದು ಮುಂದೆ ಸಾಮಂತರಾಗಿ, ಇನ್ನು ಮುಂದೆ ಮಹಾ ಮಂಡಳೇಶ್ವರರಾಗಿ ರಾಜ್ಯಭಾರ ಮಾಡಿದ್ದಾರೆ. ಸಾಮಂತರಸರ ಚಕ್ರವರ್ತಿಗಳಿಗೆ ಅಧೀನರಾಗಿದ್ದರೂ, ಆಡಳಿತದಿಂದ ಸ್ವತಂತ್ರರಾಗಿದ್ದಾರೆ. ಕೇತಲದೇವಿ ವಾಗ್ವಧೂದೇವಿಯಂತೆ ಪ್ರಸಿದ್ಧಳಾಗಿದ್ದಳು.

ಕ್ರಿ.ಶ.೧೧೪೪ರಿಂದ ಕ್ರಿ.ಶ.೧೧೫೧ರ ಮಧ್ಯೆ ಪಟ್ಟಕ್ಕೆ ಬಂದ ಚಾವುಂಡನು ತನ್ನ ರಾಣಿ ಲಕ್ಷ್ಮೀದೇವಿಗೆ ಸೂಡಿ, ಹೊಸೂರು, ಮತ್ತಿತರ ಪ್ರದೇಶಗಳ ಆಡಳಿತವನ್ನು ವಹಿಸಿಕೊಟ್ಟನೆಂಬ ವಿವರವನ್ನು ಡಾ.ಚನ್ನಬಸಯ್ಯ ಹಿರೇಮಠರು ನೀಡುತ್ತಾರೆ. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವಿವಿಧ ಸಾಮಂತ ಅರಸುಮನೆತನಗಳಲ್ಲಿ ಸಿಂಧವಂಶವೂ ಒಂದು, ಕ್ರಿ.ಶ.೭ನೇ ಶತಮಾನದಿಂದ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಕಾಣಿಸಿಕೊಳ್ಳುವ ಇವರು ೧೦ನೇ ಶತಮಾನದಿಂದೀಚೆಗೆ ವಿವಿಧ ಶಾಖೆಗಳಾಗಿ ರಾಜ್ಯಭಾರ ನಡೆಸಿದ್ದಾರೆ.

ಕ್ರಿ.ಶ.೧೧೪೨ರ ಕೊಂಚಗೆರೆ ಶಾಸನವು ರಾಚಮಲ್ಲನ ಪಿರಿಯರಸಿ ಮಾಕಲದೇವಿಯು ರಾಜ್ಯವಾಳುತ್ತಿದ್ದಳೆಂಬ ಬಗ್ಗೆ ತಿಳಿಸುತ್ತದೆ. ಮಾಕಲದೇವಿಗೆ ಮಕ್ಕಳಿಲ್ಲದ್ದರಿಂದ ಕೇವಲ ಪಿರಿಯರಸಿ ಯಾಗಿಯೇ ಉಳಿದಳು. ರಾಣಿ ಏಚಲದೇವಿ ಇರುಂಗೊಳನ ಪತ್ನಿ ಕುರುಗೋಡಿನ ಉಜಾಳೇಶ್ವರ ದೇವಾಲಯದ ಅಂತರಾಳದ ದ್ವಾರಶಾಖೆಗಳ ಕೆಳಭಾಗದಲ್ಲಿ ಚೌರಿಯನ್ನು ಹಿಡಿದು ನಿಂತಿರುವ ಎರಡು ಮೂರ್ತಿಗಳಿದ್ದು, ಇವುಗಳ ಕೆಳಗೆ 'ಶ್ರೀ ಲೋಕಾಪುರದ ಏಚಲದೇವಿ' ಎಂಬ ಶಾಸನ ಬರೆಯಲಾಗಿದೆ. ಬಹುಶಃ ಇವಳ ತವರುಮನೆ ಲೋಕಾಪುರವಾಗಿರಬೇಕು.

ವಿಜಯನಗರ ಸಾಮ್ರಾಟರು ಕೈಗೊಂಡ ರಾಜ್ಯವಿಸ್ತರಣಾ ಹಾಗೂ ಆಂತರಿಕ ಕಲಹಗಳನ್ನು ಶಮನಗೊಳಿಸುವ ಕಾರ್ಯಗಳಲ್ಲಿ ಸುಗಟೂರು ಅರಸರು ಭಾಗಿಗಳಾಗಿ, ಸಾಮ್ರಾಜ್ಯದಲ್ಲಿ ಶಾಂತಿ-ಸಮೃದ್ಧಿ ನೆಲೆಗೊಳ್ಳಲು ಕಾರಣರಾಗಿದ್ದರು. ಜೊತೆಗೆ ಸಾಮ್ರಾಟರಿಗೆ ಸಲ್ಲಬೇಕಾದ ತೆರಿಗೆ-ಸುಂಕ ಇತ್ಯಾದಿಗಳನ್ನು ಕಾಲಕಾಲಕ್ಕೆ ಸಂಗ್ರಹಿಸಿಕೊಡುವುದರ ಮೂಲಕ ಸಾಮ್ರಾಟರ ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಸಾಮ್ರಾಟರಿಂದ 'ಅಮರಗಾರ' ಅಥವಾ 'ಅಮರ ನಾಯಕ' ಅಧಿಕಾರ ಪಡೆದುಕೊಂಡು

ಸುಗಟೂರನ್ನು ಸಮರ್ಥವಾಗಿ ಆಳಿದರು. ರಾಣಿ ವೀರಾಂಬಿಕೆ, ರಾಣಿ ಹಲಸರಾ, ರಾಣಿ ಕೆಂಪಮ್ಮ, ರಾಣಿ ಅಕ್ಕಾಜಮ್ಮಣ್ಣಿ ಇತ್ಯಾದಿ ರಾಣಿಯರು ಆಡಳಿತದಲ್ಲಿ ಸಹಾಯ, ಸಹಕಾರ ನೀಡಿದುದು ಕಂಡುಬರುತ್ತದೆ. ಚಿಕ್ಕರಾಯ ಚಿಕತಮ್ಮಗೌಡನ ರಾಣಿ ವೀರಾಂಬಿಕೆ, ಇಮ್ಮಡಿ ತಮ್ಮೇಗೌಡನ ಹೆಂಡತಿ ವೆಂಕಟಾಂಬೆಯರ ಹೆಸರುಗಳ ಉಲ್ಲೇಖ ಮಾತ್ರ ಕಂಡುಬರುತ್ತದೆ.

ಕ್ರಿ.ಶ.೧೬೩೮–೩೯ರಲ್ಲಿ ರಣದುಲ್ಲಾಖಾನನು ನಡೆಸಿದ ದಾಳಿಗಳಿಗೆ ತುತ್ತಾದ ಹೊಸಕೋಟೆ, ಕೋಲಾರ ಮುಂತಾದ ಪ್ರದೇಶಗಳು ಇವರ ಕೈತಪ್ಪಿ ಮರಾಠರ ಷಹಜಿಗೆ ಜಹಗೀರಾಗಿ ಹೋದವು. ಕೋಲಾರವನ್ನು ಆಳುತ್ತಿದ್ದ ತಿಮ್ಮಗೌಡನು ಈ ವೇಳೆಗೆ ಮೃತನಾಗಿರಲು, ಆತನ ಮಗ ಚಿಕ್ಕರಾಯ ಬಸವಗೌಡನು ಕೇವಲ ಆರು ವರ್ಷದ ಬಾಲಕನಾಗಿದ್ದನು. ಬಾಲಕನ ಸೋದರತ್ತೆಯಾದ 'ಹಲಸಮ್ಮ' ಬಾಲಕನ ಪೋಷಕಳಾಗಿ ಕೋಲಾರವನ್ನು ಆಳುತ್ತಿದ್ದಳೆಂಬ ಅಂಶ ಸಾರಂಗಶ್ರೀಯಿಂದ ತಿಳಿದುಬರುತ್ತದೆ.

ಕನ್ನಡ ನಾಡು–ನುಡಿಗಾಗಿ ಶ್ರಮಿಸಿದ ಮತ್ತೊಂದು ಅರಸು ಮನೆತನವೆಂದರೆ ಬಿಜ್ಜಾವರ, ಮಧುಗಿರಿ ಅರಸುಮನೆತನ. ಕಂಚಿ ಪಲ್ಲವ, ನೊಳಂಬ ಪಲ್ಲವ, ಮಹಾನಾಡಪ್ರಭು ಹೀಗೆ ಮೂರು ಘಟ್ಟಗಳಲ್ಲಿ ಸಾಗಿ ಬಂದ ಸುದೀರ್ಘ ರಾಜಪರಂಪರೆ ಮಹಾನಾಡ ಪ್ರಭುಗಳದು. ಕಂಚಿಯನ್ನು ರಾಜಧಾನಿಯನ್ನಾಗಿಸಿಕೊಂಡು ಕರ್ನಾಟಕದ ಕೆಲವು ಭಾಗಗಳನ್ನು ಪಲ್ಲವರು ಆಳಿದರು. ಇವರಲ್ಲಿ ಹೇಮಾವತಿ(ಹೆಂಜೇರು)ನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ನೊಳಂಬವಾಡಿ ಪ್ರದೇಶವನ್ನಾಳಿದರು. ನೊಳಂಬ ಪಲ್ಲವರೆನಿಸಿದರು. ಈ ನೊಳಂಬ ಪಲ್ಲವರಲ್ಲಿ ೧೩ನೆಯ ಶತಮಾನದ ಹೊತ್ತಿಗೆ ಮುಮ್ಮಡಿ ಪಟ್ಟಣ, ಮಧುಗಿರಿ, ಬಿಜ್ಜಾವರಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರ ನಡೆಸಿದವರು ಮಧುಗಿರಿ ಅರಸರು.

ಇಮ್ಮಡಿ ಚಿಕ್ಕಭೂಪಾಲನಿಗೆ ಚೆನ್ನಾಜಮ್ಮ ಪಟ್ಟಮಹಿಷಿ ಮತ್ತು ಲಿಂಗಮ್ಮ ಎಂಬ ರಾಣಿಯರಿದ್ದರು. ಕರಿತಿಮ್ಮಚಿಕ್ಕಭೂಪನ ಮಡದಿ ಸೋಮಾಂಬೆಯ ರೂಪು, ಜಾಣ್ಮೆ, ಪಾತಿವ್ರತ್ಯ ಮಾಹಿತಿಯನ್ನು ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ ಮನದುಂಬಿ ವರ್ಣಿಸಿದೆ. ಇಮ್ಮಡಿ ಚಿಕ್ಕಭೂಪಾಲನ ಪಟ್ಟಮಹಿಷಿ ಚೆನ್ನಾಜಮ್ಮ "ಅತೀ ರೂಪದಿಂದತಿ ಲಕ್ಷಣ ಸದ್ಗುಣತೆಯಿಂದ ಲಾವಣ್ಯದಿಂದ ಪತಿಭಕ್ತಿ ಚತುರೆಯಾಗಿದ್ದು ದೇವಲೋಕದ ಸತಿಯರ ಗೆಲ್ದಿರ್ಪಳಾಕೆ"[೨೨] ಎಂಬ ವಿವರಗಳಿವೆ. ಮಧುಗಿರಿ, ಬಿಜ್ಜಾವರ ರಾಣಿಯರು ನೇರವಾಗಿ ಆಡಳಿತ ನಡೆಸಿದ ಉಲ್ಲೇಖಗಳು ಕಂಡುಬರದೆ, 'ಸಮರಾಂಗಣ ಜಯಿಸೆಂದು' ಕಂದನನ್ನು ಹಾರೈಸುವ ಮಾತೆಯರು, ಕೆರೆ–ಕಾಲುವೆ, ದೇವಾಲಯಗಳ ನಿರ್ಮಾಣದಂಥ ಧಾರ್ಮಿಕ ಕಾರ್ಯದಲ್ಲಿ ತೊಡಗಿರುವ ರಾಣಿಯರ ಸಂಖ್ಯೆ ಅಪಾರವಾಗಿದೆ.

ಮುಮ್ಮಡಿ ಚಿಕ್ಕಪ್ಪಗೌಡನ ಪತ್ನಿ ಬಹುಧರ್ಮಿಷ್ಠಳು. ಅನೇಕ ದಾನ-ಧರ್ಮ ಮಾಡಿದಳು. ಶ್ರೀ ಮಲ್ಲೇಶ್ವರನ ಪಕ್ಕದಲ್ಲಿ ಪಾರ್ವತಿ ದೇವಿ ವಿಗ್ರಹ ಪ್ರತಿಷ್ಠಾಪಿಸಿದ ಕೀರ್ತಿ ಹಿರಿಯಮ್ಮಳದು. ಶಿವಧರ್ಮವಾಗಿ ವಿರಕ್ತಮಠದ ಗುರು ವಿರಕ್ತಮೂರ್ತಿಗಳಿಗೆ ಗದ್ದಿಗೆ ಕಟ್ಟಿಸಿದ್ದಲ್ಲದೆ, ಗುಮ್ಮಳಾಪುರದ ಗೌರಮ್ಮನ ಗುಡಿಯನ್ನು ಕಟ್ಟಿಸಿದಳೆಂಬ ಮಾಹಿತಿ"[೩೩] ತಿಳಿದುಬರುತ್ತದೆ.

ಒಂದು ಕಾಲದಲ್ಲಿ ಸಣ್ಣಪುಟ್ಟ ಪಾಳೇಗಾರರು. ಮಾಂಡಲಿಕರು, ಮಹಾರಾಜರಂತೆಯೇ ವೈಭವಪೂರ್ಣವಾಗಿ ಆಳ್ವಿಕೆ ಮಾಡಿದ್ದಾರೆ. ದೊಡ್ಡ ದೊಡ್ಡ ಸಾಮ್ರಾಜ್ಯದ ಭರಾಟೆಯಲ್ಲಿ ಸಣ್ಣಪುಟ್ಟ ಅರಸುಮನೆತನಗಳು ಉಪೇಕ್ಷಿಸುತ್ತ ಬಂದಿವೆ. ಈ ಉಪೇಕ್ಷೆಗೆ ಒಳಗಾದ ಕರ್ನಾಟಕದ ಹೆಮ್ಮೆಯ ಮತ್ತು ಗಮನಾರ್ಹವಾದ ಮನೆತನ ಹಂಡೆ ಅರಸುಮನೆತನ. ಕರ್ನಾಟಕದ ಸಂಸ್ಕೃತಿಯ ಹಿರಿಮೆ-ಗರಿಮೆಗಳನ್ನು ನೆರೆಯ ಆಂಧ್ರದವರೆಗೂ ವಿಸ್ತರಿಸಿದ ಕೀರ್ತಿ ಇವರದು. ಕ್ರಿ.ಶ.೧೭೭೧ರಿಂದ ಕ್ರಿ.ಶ.೧೭೭೪ರವರೆಗೆ ಅಂದರೆ ಸುಮಾರು ಮೂರು ವರ್ಷಗಳ ಕಾಲ  ಬಳ್ಳಾರಿ, ಕುರುಗೋಡು, ಪಗರಣೆಗಳನ್ನು ಆಳಿದುದು ಬಳ್ಳಾರಿ ಇತಿಹಾಸದಲ್ಲೇ ಉಲ್ಲೇಖಾರ್ಹ ಸಂಗತಿ. ಈಕೆ ಹೊಸಪೇಟೆ ತಾಲ್ಲೂಕಿನ ಕೊಟ್ಟೂರು ಸ್ವಾಮಿ ಮಠಕ್ಕೆ ವುಳೇನೂರು ಗ್ರಾಮವನ್ನು ಭೂದಾನ ಮಾಡಿ ಕ್ರಿ.ಶ.೧೭೭೩ರಲ್ಲಿ ಸನ್ನದು ನೀಡಿದಳು.

ಹಂಡೆಯ ಪಾಳೆಯಗಾರ ದೊರ್ರೆಪ್ಪನಾಯಕನ ಪತ್ನಿ ವೀರಮ್ಮಗೆ ಕುಂಪನಿ ಅಮಲು ಷರು ಲಾಗಾಯಿತು ಮಂಡ್ರೋಲ್ ಸಾಬರು ಯಿರುವ ಪರಿಯಂತ್ರಲು ತಿಂಗಳ ವೊಂದಕ್ಕೆ ೪೦ ರೂ ಧರ್ಮ ಕೊಟ್ಟರು. ಕೆಲವು ಭೂಸ್ವಾಸ್ಥೆ ನಡೆಸಿದರು. ಅಲ್ಲದೆ ಕುರುಗೋಡಿನ ಪ್ರಸನ್ನ ರಾಮಪ್ಪ ನಾಯಕನ ಹೆಂಡತಿ ಮಂಡ್ರೋಲ್ ಸಾಹೇಬರ ಕಡೆಗೆ ಹೋಗಿ 'ತನಗೆ ಸಂಬಳ ನಡೆಸಬೇಕು. ನಾವು ಬಾದ್ಯಸ್ತರೆಂದು ಪಿರ್ಯಾದಿ ಮಾಡಲಾಗಿ, ಆ ವೀರಮ್ಮನ ಮಗಳಿಗೆ ನಡೆಯುವಂಥ ಸಂಬಳ ಜಪ್ತಿ ಆಯಿತು.

ಬಳ್ಳಾರಿ ಜಿಲ್ಲೆಯ ಕೆಂಚನಗುಡ್ಡವನ್ನು ಸಮರ್ಥವಾಗಿ ಆಳಿದಳೆಂದು ಪ್ರತೀತಿಯಿರುವ 'ತಂಗಮ್ಮ'ನ ಸಮಾಧಿಯು ಕೆಂಚನಗುಡ್ಡದಲ್ಲಿದೆ. ಕೆಂಚನಗುಡ್ಡದ ರಾಣಿ ಸಿದ್ಧಮ್ಮ, ಪದ್ಮಮ್ಮರು ಬಳ್ಳಾರಿ ಜಿಲ್ಲೆಯ ಆಡಳಿತದಲ್ಲಿ ತಮ್ಮ ಛಾಪನ್ನು ಮೂಡಿಸಿದ್ದರೆಂಬುದಾಗಿ ಬಳ್ಳಾರಿ ಕೈಫಿಯತ್ತು ದಾಖಲಿಸಿದೆ.

ಕ್ರಿ.ಶ.೧೬೬೫–೧೬೭೧ರ ಕಾಲದಲ್ಲಿ ರಾಯದುರ್ಗದ ಪಾಳೇಗಾರನು ಧರ್ಮವರವನ್ನು ಆಕ್ರಮಿಸಿಕೊಂಡ ವೆಂಕಟಪ್ಪನಾಯಕನು ಗತಿಸಿದ ಮೇಲೆ ಹೆಂಡತಿ ಸಿದ್ಧರಾಮಕ್ಕ ಮಗ ಸಿದ್ಧಪ್ಪನಾಯಕನ ಹೆಸರಿನಲ್ಲಿ ಅಲ್ಪಕಾಲ ರಾಜ್ಯವಾಳಿದಳೆಂಬ ಮಾಹಿತಿ ತಿಳಿಯುತ್ತದೆ. ಅನಂತಪುರದ ರಾಮಪ್ಪ ಕ್ರಿ.ಶ.೧೭೪೦–೧೭೪೫ ಕಾಲದಲ್ಲಿ ಆಳ್ವಿಕೆ ಮಾಡಿದನು. ಈತನ ಪ್ರತಿಕಕ್ಷಿ ಸಿದ್ಧಪ್ಪನು ಸೆರೆಮನೆಯಲ್ಲಿಯೇ

ಗತಿಸಿದಾಗ ಅವನ ಹೆಂಡತಿ ಭದ್ರಮ್ಮ ಬಳ್ಳಾರಿ ಸೀಮೆಯನ್ನಾಳುತ್ತಿದ್ದ ರಾಮಪ್ಪನನ್ನು ಆಶ್ರಯಿಸಿದಳು. ಅಲ್ಲದೆ ಅನಂತಪುರದ ರಾಮಪ್ಪನ ಮೇಲೆ ಸೇಡು ತೀರಿಸಿಕೊಳ್ಳಲು ಭದ್ರಮ್ಮ ಕಾರಸ್ಥಾನ ನಡೆಸಿದಳು.

ಇಂಗ್ಲಿಷ್ ಸರ್ಕಾರದ ಪ್ರತಿನಿಧಿಯಾಗಿದ್ದ ಮನ್ರೊ ದೊರೆಯು ಅನಂತಪುರವನ್ನು ತನ್ನ ಕೇಂದ್ರಸ್ಥಾನವಾಗಿ ಮಾಡಿಕೊಂಡು ಈ ಮಂಡಲವನ್ನು ಸುವ್ಯವಸ್ಥೆಗೊಳಿಸಿದನು. "ಹಂಡೆ ವಂಶದವರು ಕ್ರಿ.ಶ.೧೮೬೦ರವರೆಗೂ ಇಂಗ್ಲಿಷ್ ಸರ್ಕಾರದಿಂದ ಜೀವನಾಂಶ ಪಡೆಯುತ್ತ ಬಂದರು. ಈ ವಂಶದ ಪುರುಷ ಸಂತತಿಯಲ್ಲಿ ಕೊನೆಯವನಾದ ವಸಂತರಾಯನು ತೀರಿದ ಮೇಲೆ ಈತನ ಹೆಂಡತಿ ಕಲ್ಯಾಣಮ್ಮ ದತ್ತು ತೆಗೆದುಕೊಳ್ಳುವ ಸಂದರ್ಭದಲ್ಲಿ ಈ ವಂಶದ ವಾರಸುದಾರರು ಎಲ್ಲೆಲ್ಲಿರುವರೆಂಬ ಬಗ್ಗೆ ಮನ್ರೋ ದೊರೆಯಿಂದ ವಿಚಾರಣೆ ನಡೆದು, ಈ ವಂಶದ ಮೂಲಪುರುಷರು ವಿಜಾಪುರ ತಾಲ್ಲುಕು ಬಾಗೇವಾಡಿ ಪರಗಣೆಯ ಮುತ್ತಿಗೆ, ವಡವಡಿಗೆ ಗ್ರಾಮಗಳ ನಾಯಕನಾದ ಲಕ್ಕಿರಾಮನೆಂಬುವನೆಂದೂ, ಆತನ ಹಿರೇಮಗನಾದ ಬಾಲದ ಹನುಮಪ್ಪರಾಮನು ಅನಂತಪುರ, ಬಳ್ಳಾರಿ ಪ್ರಾಂತಕ್ಕೆ ಬಂದು ಅಲ್ಲಿ ನೆಲೆಸಿದ್ದನೆಂದೂ, ಕಿರಿಯ ಮಗ ಬಳಗಾನಾಯಕನ ಸಂತತಿಯವರು ವಿಜಾಪುರ ಪ್ರಾಂತದಲ್ಲಿರುವರೆಂದೂ ತಿಳಿದುಬರಲು ಸದರಿ ಬಳಗಾನಾಯಕನ ಸಂತತಿಯವನಾದ ಸಿದ್ದರಾಮಪ್ಪನೆಂಬ ಹುಡುಗನನ್ನು ಕಲ್ಯಾಣಮ್ಮ ದತ್ತಕ ತೆಗೆದುಕೊಳ್ಳಲು ಮನ್ರೋ ದೊರೆಯು ಅಪ್ಪಣೆ ಕೊಟ್ಟನೆಂಬ"[೩೪] ಮಾಹಿತಿ ತಿಳಿದುಬರುತ್ತದೆ.

### ೩.೩. ರಾಣಿಯರು: ಸಾಂಸ್ಕೃತಿಕ ನಿರ್ವಚನ

ಕರ್ನಾಟಕದ ಸಾಂಸ್ಕೃತಿಕ ಪರಂಪರೆಯಲ್ಲೆಲ್ಲ ರಾಣಿಯರು ಎಂಬ ಪದವನ್ನು ಕಾಣುತ್ತೇವೆ. ಈ ಪರಂಪರೆಯಲ್ಲೆಲ್ಲ ಬರುವ ರಾಣಿಯರ ಪ್ರತ್ಯೇಕ ಅಸ್ತಿತ್ವವನ್ನು ಗುರುತಿಸಲಾಗಿಲ್ಲವೆಂಬುದು ಸತ್ಯ ಹೀಗಾಗಿ ರಾಣಿಯರನ್ನು ರಾಜರ ಅಸ್ತಿತ್ವಕ್ಕೆ ಪೂರಕವಾಗಿಯೇ ಗುರುತಿಸಿಕೊಂಡು ಬಂದಿದ್ದೇವೆ. ಸಾಮಾಜಿಕ ವಾಸ್ತವದಲ್ಲೂ ಕೂಡ ಇದೇ ಮಾದರಿ ಇದೆ. 'ರಾಜ' ಎಂಬ ಪದ ಸಾಂಸ್ಕೃತಿಕ ಸಂರಚನೆಯಲ್ಲಿ ಪ್ರಭುತ್ವಕ್ಕೆ ಸಂಬಂಧಿಸಿದ್ದು. 'ರಾಣಿ' ಎಂಬ ಪದ ರಾಜನ ಪತ್ನಿ ಎಂಬರ್ಥದಲ್ಲೆ ಬಳಕೆಗೊಂಡಿರುವುದು. ಚರಿತ್ರೆಯ ಆರಂಭದಿಂದ ಆಧುನಿಕಯುಗದವರೆಗೂ ಕೂಡ ಅನೇಕ ಬಗೆಯ ರಾಜರ ಚರಿತ್ರೆಯನ್ನು ಕಾಣುತ್ತೇವೆ. ರಾಜರ ಚರಿತ್ರೆಗೆ ಪೂರಕ ಹಿನ್ನೆಲೆಯಲ್ಲಿ ಕೆಲವು ರಾಣಿಯರನ್ನು ಗುರುತಿಸಿದ್ದೇವೆ.

ಇತಿಹಾಸದಲ್ಲೆಲ್ಲಾ ವಿಶಿಷ್ಟ ಪ್ರೌಢಿಮೆಯುಳ್ಳ ಸಂಗೀತಪ್ರೇಮಿ, ಕಲಾಪ್ರೌಢಿಮೆ, ವಿಶಿಷ್ಟ ಲಕ್ಷಣಗಳುಳ್ಳ ಕೆಲವೇ ಕೆಲ ರಾಣಿಯರು ಪ್ರಕಾಶಮಾನವಾಗಿದ್ದಾರೆ. ರಜಿಯಾ ಸುಲ್ತಾನ್, ಝಾನ್ಸಿರಾಣಿ ಲಕ್ಷ್ಮೀಬಾಯಿ, ಚೆನ್ನಭೈರಾದೇವಿ, ಚೆನ್ನದೇವಿ, ಅಬ್ಬಕ್ಕರಾಣಿ, ಕೆಳದಿ ರಾಣಿ ಚೆನ್ನಮ್ಮ,

ವೀರಮ್ಮ, ಬೆಳವಡಿ ರಾಣಿ ಮಲ್ಲಮ್ಮ, ಕಿತ್ತೂರಿನ ರಾಣಿ ಚೆನ್ನಮ್ಮ, ರುದ್ರಮ್ಮ ಇತ್ಯಾದಿ ರಾಣಿಯರು ತಮ್ಮ ವಿಶಿಷ್ಟ ಲಕ್ಷಣಗಳಿಂದ ಜಗತ್ತನ್ನು ಬೆಳಗಿದ್ದಾರೆ. ರಾಣಿಯರ ಪ್ರತ್ಯೇಕ ಸಾಮಾಜಿಕ ಚಹರೆಯನ್ನು ಗುರುತಿಸಲಾಗದು. ಏಕೆಂದರೆ ರಾಣಿಯನ್ನು ಯಾವಾಗಲೂ ರಾಜನಿಂದಲೇ ವ್ಯಾಖ್ಯಾನಿಸಲಾಗುತ್ತದೆ. ಅರಸೊತ್ತಿಗೆಯು ಇಂದು ಇಲ್ಲವಾದರೂ ಅಳಿದುಳಿದ ರಾಜನ ಪರಿವಾರವನ್ನು ರಾಜ ಹಾಗೂ ರಾಣಿಯೆಂದೇ ಪರಿಭಾವಿಸುವ ಪರಿಕ್ರಮವಿದೆ. 'ಅರಸೊತ್ತಿಗೆ' ಇಂದು ಇಲ್ಲವಾದರೂ ಕೂಡ ಮೈಸೂರು ದಸರಾ ಸಂದರ್ಭದಲ್ಲಿ ಅಳಿದುಳಿದ ರಾಜಪರಿವಾರದ ವರನ್ನು ಸಾಂಕೇತಿಕವಾಗಿ 'ದಸರಾ ಉತ್ಸವ'ದಲ್ಲಿ ರಾಜನಂತೆ ಸಂಭ್ರಮಕ್ಕೆ ಒಳಪಡಿಸುವ ಪರಿಕ್ರಮ ನಡೆಯುತ್ತಲೇ ಬಂದಿರುವುದು ವಾಸ್ತವ. ಇದು ಒಂದು ರೀತಿಯಲ್ಲಿ ವ್ಯಂಗ್ಯವಾಗಿ ಕಂಡುಬಂದರೂ, ರಾಜನಿಗೆ ಸಂಬಂಧಿಸಿದ ಪರಿವಾರವೆಲ್ಲವೂ ಮುಖ್ಯವಾಹಿನಿಯೇ ಆಗಿದೆ. ಹೀಗಾಗಿಯೇ ರಾಜಪರಿವಾರದಂತೆ ಬದುಕು ಸಾಗಿಸುವ ರಾಣಿ ಪರಿವಾರದವರಿಗೂ ಕೂಡ ಅದೇ ಗೌರವ, ಆದರಗಳಿವೆ. ಉದಾಹರಣೆಗೆ ರಾಣಿ ವಿಕ್ಟೋರಿಯಾ, ರಾಣಿ ಡಯಾನಾ ಇತ್ಯಾದಿ. ರಾಜ್ಯದ ಪರಿಧಿಯಲ್ಲಿ ಬರುವ ರಾಜನ ಚಹರೆ ರಾಜಕೀಯ ಸಂಸ್ಥೆಯಲ್ಲಿ ಪ್ರಮುಖವಾದುದು. ರಾಣಿಯ ಚಹರೆ ರಾಜನಿಗೆ ಪೂರಕವಾದುದು.

ರಾಣಿ ಎಂಬ ಪದವನ್ನು ರಾಜನ ಪತ್ನಿಯೆಂದು ಸರ್ವಸಾಮಾನ್ಯವಾಗಿ ಗುರುತಿಸುತ್ತೇವೆ. ರಾಜ್ಯಾಧಿಕಾರವನ್ನು ಕೇಂದ್ರೀಕರಿಸಿಕೊಂಡು ಪುರುಷನನ್ನು 'ರಾಜ' ಎಂದು ಸಂಬೋಧಿಸಿದರೆ, ರಾಜನ ಪತ್ನಿಯನ್ನು 'ರಾಣಿ'ಯೆಂದು ಕರೆಯುವ ಪರಿಕ್ರಮವಿದೆ. ನಮ್ಮ ಪ್ರಾಚೀನ ಕಾವ್ಯ ಪುರಾಣ, ಶಾಸನಗಳು, ಮೌಖಿಕ ಕಥನಗಳಲ್ಲೂ ಕೂಡ ಇದೇ ಮಾದರಿಯಿದೆ. ರಾಣಿಯರ ಅಸ್ತಿತ್ವವನ್ನು ನಾವು ಪ್ರಾಚೀನ ಕಾಲದಿಂದ ಹಿಡಿದು ಇವತ್ತಿನವರೆಗೂ ಕಾಣುತ್ತೇವೆ.

ವಡ್ಡಾರಾಧನೆಯ ಕಥೆಯಲ್ಲಿ ಬರುವ ಪದ್ಮರಥ ರಾಜನ ಪತ್ನಿಯನ್ನು ರಾಣಿ ಎಂದು ಅಲ್ಲದೆ ಈತನಿಗೆ ಏಳುನೂರು ಜನ ರಾಣಿಯರಿದ್ದರೆಂದು, ಗುಣದತ್ತ ಭಟಾರರ ಕಥೆಯಲ್ಲಿಯು ಉಪರಿಚರನಿಗೆ ಐದುನೂರು ಜನ ರಾಣಿಯರಿದ್ದರೆಂದು, ಭರತನಿಗೆ ತೊಂಬತ್ತಾರು ಸಾವಿರ ರಾಣಿಯರಿದ್ದರೆಂದು ಅಲ್ಲದೆ ಅಭಯಮತಿಯ ರಾಣಿ ಅಮೃತಮತಿ, ಧೃತರಾಷ್ಟ್ರನ ರಾಣಿ ಗಾಂಧಾರಿ, ಪಾಂಡುವಿನ ರಾಣಿಯರು ಕುಂತಿ, ಮಾದ್ರಿ, ಪಾಂಡವರ ರಾಣಿ ದ್ರೌಪದಿ, ದುರ್ಯೋಧನನ ರಾಣಿ ಭಾನುಮತಿ ಹೀಗೆ ಇತಿಹಾಸದ ಪುಟದಲ್ಲೆಲ್ಲ ರಾಣಿಯರ ಉದಾಹರಣೆಗಳು ಸಾಕಷ್ಟು ಲಭಿಸುತ್ತವೆ.

ಕಾವ್ಯ-ಪುರಾಣಗಳಂತೆ ಮೌಖಿಕ ಕಥನಗಳು ಕೂಡ 'ರಾಣಿ'ಯನ್ನು ಪರಿಭಾವಿಸುವ ಪರಿಕ್ರಮವೆಂದರೆ, 'ಒಂದೂರಲ್ಲಿ ಒಬ್ಬ ರಾಜನಿದ್ದ, ಅವನಿಗೊಬ್ಬ ರಾಣಿ ಇದ್ದಳು' ಎಂದೇ ಆಗಿರುತ್ತದೆ. ಹೀಗಾಗಿಯೇ ಭಾರತದ ಇತಿಹಾಸದಲ್ಲೆಲ್ಲ ಸರ್ವಸಾಮಾನ್ಯವಾಗಿ ರಾಣಿಯರ

ಹೆಸರಿಸುವಿಕೆಯು ಒಂದು ದೊಡ್ಡ ಸಾಮ್ರಾಜ್ಯದ ರಾಜನನ್ನು ಕೇಂದ್ರೀಕರಿಸಿಯೇ ನಡೆಯುತ್ತಿತ್ತು. ವಿಷ್ಣುವರ್ಧನನ ರಾಣಿ ಶಾಂತಲೆ, ಇಮ್ಮಡಿ ಪುಲಕೇಶಿಯ ಸೊಸೆಯಾದ ರಾಣಿ ವಿಜಯ ಭಟ್ಟಾರಿಕೆ, ಕದಂಬ ದೊರೆ ಜಯಕೇಶಿ ರಾಣಿ ಮೈಳಲದೇವಿ, ಕದಂಬ ಮಯೂರ ವರ್ಮನ ಮಡದಿ ಅಕ್ಕಾದೇವಿ ಇತ್ಯಾದಿ.

'ರಾಣಿ' ಪದದ ಅರ್ಥವ್ಯಾಪ್ತಿಯಲ್ಲಿ ರಾಜನ ಪತ್ನಿ, ಅರಸಿ, ನಾಯಕತಿ, ದೇಸಾಯತಿ, ಗೌಡತಿಯರನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಪ್ರಾಚೀನ ಶಾಸನಗಳಲ್ಲಿ ಅರಸಿ ಹಾಗೂ ರಾಣಿಯರ ಉಲ್ಲೇಖಗಳು ಕಾಣಸಿಗುತ್ತವೆ. "ಅರಸಿ–ಬಾಗಿಯಬ್ಬೆ ರಾಣಿಗೆ ಸುತ್, ಭೂಮಿಗೆ ಕಡುಜಾಣೆ ರಾಣಿ ರಮಣೀಯತೆಯಂ ಪಡೆದಿರ್ದಳಾಕ್ಷಣಂ', ರಾಣಿಯರ ನವರತ್ನದ ತೊಟ್ಟಗಳಿಹುರ್ತಿಯಲಿ"[೩೫] ಎಂಬ ಇತ್ಯಾದಿ ಉಲ್ಲೇಖಗಳಿಂದ ರಾಣಿಯರು ರಾಜರೊಂದಿಗೆ ವಿವಿಧ ಕಾರ್ಯಗಳಲ್ಲಿ ಭಾಗವಹಿಸುವುದರೊಂದಿಗೆ ಆಡಳಿತ ಕ್ಷೇತ್ರದಲ್ಲಿಯೂ ಗಮನ ಸೆಳೆದಿದ್ದಾರೆ. ಅಷ್ಟೇ ಅಲ್ಲದೆ ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲೂ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ.

ಕಲ್ಯಾಣ ಚಾಲುಕ್ಯ ಪ್ರಸಿದ್ಧ ದೊರೆ ೬ನೇ ವಿಕ್ರಮಾದಿತ್ಯನು ಕ್ರಿ.ಶ.೧೦೫೫ಕ್ಕೂ ಮೊದಲಿನಿಂದ ೧೦೭೬ರವರೆಗೆ ಕುಮಾರವೃತ್ತಿಯಿಂದ ಮಹಾಮಂಡಳೇಶ್ವರನಾಗಿ ಕ್ರಿ.ಶ.೧೦೭೬ರಿಂದ ೧೧೨೬ರ ವರೆಗೆ ಚಕ್ರವರ್ತಿಯಾಗಿ ಆಳಿದನು. ಈತನ ಪತ್ನಿಯರನ್ನು ರಾಣಿಯೆಂದು ಪರಿಭಾವಿಸಲಾಗಿದೆ.

ಮಧ್ಯಕಾಲೀನ ಕರ್ನಾಟಕವನ್ನು ಆಳಿದ ಕೆಳದಿ ಅರಸರು, ಕುರುಗೋಡು ಸಿಂಧರು, ಒಂದು ಪ್ರಭುತ್ವಸಂಬಂಧಿ ನಿರ್ವಚನದಲ್ಲಿ ರಾಣಿಯ ಅಸ್ತಿತ್ವ ಇನ್ನೂ ವಿಸ್ತಾರತೆಯನ್ನು ಪಡೆದು ಸಣ್ಣಪುಟ್ಟ ಮಾಂಡಳಿಕರು, ಸಾಮಂತರು, ದಳವಾಯಿಗಳು, ಪಾಳೇಗಾರರು, ದೇಸಾಯಿಯರು, ನಾಡಗೌಡರ ಪತ್ನಿಯರನ್ನು ರಾಣಿಯರು ಎನ್ನಲಾಗುವುದು.

ಮಧುಗಿರಿ ಅರಸರು ವಿಜಯನಗರದ ಸಾಮ್ರಾಟರಿಗೆ ಸಾಮಂತರಾಗಿದ್ದರು. ಹೀಗಾಗಿ ಸಾಮಂತರಸರಾದ ಇವರ ಪತ್ನಿಯರನ್ನು, ಹಾಲೇರಿ ಅರಸರು ಇಕ್ಕೇರಿ ಅರಸರಿಗೆ ಕಪ್ಪಕಾಣಿಕೆ ನೀಡಿದ ಆಶ್ರಿತರು ಎಂಬುದಾಗಿ 'ಕೆಳದಿನೃಪವಿಜಯವು' ದಾಖಲಿಸಿದೆ. ಈ ಹಿನ್ನೆಲೆಯಲ್ಲಿ ಹಾಲೇರಿ ಅರಸರ ಪತ್ನಿಯರನ್ನು, ಮೈಸೂರು ಸಂಸ್ಥಾನದ ಪ್ರಮುಖ ದಳವಾಯಿಗಳಾಗಿ ಆಡಳಿತ ನಡೆಸಿದ ಕಳಲೆ ದಳವಾಯಿಗಳ ಪತ್ನಿಯರನ್ನು, ರಾಣಿಯೆಂದು ಪರಿಗಣಿಸಲಾಗಿದೆ.

ವಿಜಯನಗರದ ಕೊನೆಗಾಲದ ಅರಸರು ನಾಮಮಾತ್ರ ಪರಮಾಧಿಕಾರಿಗಳಾಗಿದ್ದು, ಪಾಳೇಗಾರರ ಸಾಮೂಹಿಕ ಆಡಳಿತದಿಂದಲೇ ಅವರ ಇಡೀ ರಾಜ್ಯಭಾರ ಮುನ್ನಡೆಯುತ್ತಿತ್ತು. ಇವರು ಸಾಮ್ರಾಜ್ಯದ ಆಧಾರಸ್ತಂಭಗಳಾಗಿ ಆಡಳಿತ ನಡೆಸಿದರು. ಹಾಗಲವಾಡಿ ಪಾಳೇಗಾರರು, ಸುಗಟೂರು ಪಾಳೇಗಾರರು, ಹಂಡೆ ಪಾಳೇಗಾರರ ಪತ್ನಿಯರನ್ನು ರಾಣಿಯೆಂದು ಪರಿಭಾವಿಸಲಾಗಿದೆ.

ಅಲ್ಲದೆ ಕನ್ನಡನಾಡಿನಲ್ಲಿ ಉದಯವಾದ ಚಿಕ್ಕಪುಟ್ಟ ದೇಸಗತಿಗಳಾದ ಬೆಳವಡಿ, ಕಿತ್ತೂರು, ಸಿರಸಂಗಿ, ಬಿಳಗಿ ದೇಸಾಯಿಯರ ಪತ್ನಿಯರನ್ನು ರಾಣಿಯೆಂದು ಪರಿಭಾವಿಸಲಾಗಿದೆ. ಅಲ್ಲದೆ ಗೆಜ್ಜಲಗಟ್ಟೆ, ಜವಳಗೆರೆ, ಮಾನ್ವಿ, ನಾಡಗೌಡರ ಪತ್ನಿಯರನ್ನು ರಾಣಿಯೆಂದು ಪರಿಭಾವಿಸಲಾಗಿದೆ. ಈ ಎಲ್ಲ ಸಂಸ್ಥಾನಿಕ ರಾಣಿಯರು ರಾಜನ ಸಮಾನ ಅಧಿಕಾರವನ್ನು ಹೊಂದಿದ ಇವರ ಬದುಕಿನ ಚಾರಿತ್ರಿಕತೆಗೆ ಮಹತ್ವವಿದೆ.

ಆಡಳಿತದ ಅನುಕೂಲಕ್ಕಾಗಿ ಬೃಹತ್ ಸಾಮ್ರಾಜ್ಯವನ್ನು ಹಲವು ವಿಭಾಗಗಳಾಗಿ ವಿಂಗಡಿಸಿ, ಅಧಿಕಾರವನ್ನು ವಿಕೇಂದ್ರೀಕರಣಗೊಳಿಸುವುದು ಒಂದು ಉತ್ತಮ ಆಡಳಿತದ ಲಕ್ಷಣ. ರಾಜ್ಯವನ್ನು ಆಳುವ ಚಕ್ರವರ್ತಿಗಳೇ ಇಡೀ ಸಾಮ್ರಾಜ್ಯದ ಆಡಳಿತವನ್ನು ನಿರ್ವಹಿಸಿಕೊಂಡು ಹೋಗುವುದು ಅಸಾಧ್ಯವಾದುದು. ಹೀಗಾಗಿ ರಾಜ್ಯವನ್ನು ಅನೇಕ ಸಣ್ಣಪುಟ್ಟ ಘಟಕಗಳನ್ನಾಗಿ ಮಾಡಿ ಒಬ್ಬೊಬ್ಬರನ್ನು ಅಲ್ಲಿಯ ಅಧಿಕಾರಿಗಳಾಗಿ ಮಹಾಮಂಡಳೇಶ್ವರರು, ಮಹಾಮಂಡಳೇಶ್ವರರ ಅಧೀನರಾಗಿ ಮಹಾಸಾಮಂತರು, ಮಹಾಸಾಮಂತರರ ಅಧೀನರಾಗಿ ಪ್ರಭುಗಾವುಂಡರು ಇಲ್ಲವೆ ನಾಳ್ಪ್ರಭುಗಳು, ಪ್ರಭುಗಾವುಂಡರರ ಅಧೀನರಾಗಿ ಗಾವುಂಡರು, ಅಲ್ಲದೆ ಅಮರನಾಯಕರೆನಿಸಿದ ಅನೇಕ ಸ್ಥಳೀಯ ಅಧಿಕಾರಿಗಳು ಹಾಗೂ ಸೇನಾ ನಾಯಕರು ಆಡಳಿತಗಾರರಾಗಿ ಸಾಮ್ರಾಜ್ಯದ ವಿವಿಧ ಘಟಕಗಳಿಗೆ ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ.

ಈ ಕುರಿತು ಶಾಸನತಜ್ಞರಾದ ಡಾ.ಪಿ.ವಿ.ಕೃಷ್ಣಮೂರ್ತಿಯವರು "ವಿಜಯನಗರದರಸರು ಪ್ರಾರಂಭದಲ್ಲಿ ತಮ್ಮನ್ನು ಮಹಾಮಂಡಲೇಶ್ವರರೆಂದೇ ಕರೆದುಕೊಂಡಿದ್ದು, 'ಶ್ರೀವಿರೂಪಾಕ್ಷ ದೇವನೇ' ಸಾಮ್ರಾಜ್ಯದ ಒಡೆಯ. ಮಹಾಮಂಡಳೇಶ್ವರ ಬುಕ್ಕಣ್ಣೊಡೆಯ, ಮಹಾಮಂಡಳೇಶ್ವರ ಹರಿಯಪ್ಪ ಒಡೆಯ ಎಂಬ ಉಲ್ಲೇಖಗಳು ಕಂಡುಬರುತ್ತವೆ. ಮಹಾಮಂಡಳೇಶ್ವರರ ಕೈಕೆಳಗೆ ಅನೇಕ ಪ್ರಧಾನಿ, ದಂಡನಾಯಕರು ಕಾರ್ಯ ನಿರ್ವಹಿಸುತ್ತಿದ್ದರು. ಅಮರನಾಯಕರೆನಿಸಿಕೊಂಡ ಅನೇಕ ಸ್ಥಳೀಯ ಸೇನಾನಾಯಕರ, ಆಡಳಿತಗಾರರ ಉಲ್ಲೇಖಗಳಿವೆ"[೩೬] ಎಂದು ತಿಳಿಸುತ್ತಾರೆ.

ಮೇಲಿನ ಈ ವಿವರಣೆಯನ್ನು ಕೊಡುವ ಉದ್ದೇಶವೆಂದರೆ 'ರಾಣಿ' ಪದದ ಅರ್ಥವ್ಯಾಪ್ತಿಯನ್ನು ಖಚಿತಪಡಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ. ಹೀಗಾಗಿ ಒಂದು ಸಾಮ್ರಾಜ್ಯದ ಚಕ್ರವರ್ತಿಗಳಂತೆ ಇತರ ಅಧಿಕಾರಿ ವರ್ಗದವರನ್ನು ಅಂದರೆ ಮಹಾಮಂಡಳೇಶ್ವರರು, ಮಹಾಸಾಮಂತರು, ಪ್ರಭುಗಾವುಂಡರು, ಗಾವುಂಡರು ಮತ್ತು ಪಾಳೇಗಾರರನ್ನು ಕೈಹಿಡಿದ ಪತ್ನಿಯರನ್ನು 'ರಾಣಿಯರು' ಎಂದು ಪರಿಗಣಿಸಿ ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗಾಗಿ ಇಲ್ಲಿ ರಾಣಿ ಎಂದರೆ ಚಕ್ರವರ್ತಿಯ ಪತ್ನಿ, ಮಹಾಮಂಡಳೇಶ್ವರನ ಪತ್ನಿ, ಮಹಾ ಸಾಮಂತರ ಪತ್ನಿ, ಪ್ರಭುಗಾವುಂಡರ ಪತ್ನಿ, ನಾಳ್ಪ್ರಭುಗಳ ಪತ್ನಿ, ಅಮರನಾಯಕರ ಪತ್ನಿ

ಅಲ್ಲದೆ ದೇಸಾಯಿ, ಸರ್‌ದೇಸಾಯಿ, ನಾಡದೇಸಾಯಿಯರ ಪತ್ನಿಯರನ್ನು ಒಳಗೊಂಡಂತೆ 'ರಾಣಿ' ಪದದ ಅರ್ಥವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲಾಗಿದೆ. ಮುಂದುವರೆದು ಪ್ರಮುಖ ಅರಸಿಯರ ಜೊತೆಗೆ ನಾಡಗೌಡ ಮನೆತನದ ಗೌಡತಿಯರನ್ನು 'ರಾಣಿ' ಪರಿಭಾಷೆಯಲ್ಲಿ ಪರಿಗಣಿಸಿ, ಅವರ ಸಾಧನೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

### ೩.೪. ರಾಣಿಯರು: ರಾಜ್ಯಾಧಿಕಾರದ ಸಂದರ್ಭ

'ರಾಜ್ಯ, ರಾಜ್ಯಾಧಿಕಾರ, ಪ್ರಭುತ್ವ'ವೆಂಬ ಪರಿಕಲ್ಪನೆಗಳು ನಿರ್ಮಾಣಗೊಂಡಿದ್ದೇ ಸ್ತ್ರೀಯರನ್ನು ಹೊರತುಪಡಿಸಿ. ಹೀಗಾಗಿ ತನ್ನದಲ್ಲದ ಕ್ಷೇತ್ರದಲ್ಲಿ ರಾಣಿ ಪ್ರವೇಶ ಪಡೆಯುವುದೇ ಒಂದು ದೊಡ್ಡ ಸವಾಲು. ಒಬ್ಬ ಸ್ತ್ರೀಗೆ ನಿಗದಿಪಡಿಸಿದ ಮಹಾಮಾತೆ, ಮಹಾಪತಿವ್ರತೆಯಂಥ ಸಿದ್ಧಮಾದರಿಯಲ್ಲಿಯ ಪಾತ್ರಗಳು ಪಲ್ಲಟಗೊಂಡಾಗ ಆಕೆ ಎದುರಿಸುವ ಸಮಸ್ಯೆಗಳು ಎಂಥವು? ಗಂಡಸೆಂಬ ಅಹಂಕಾರದಲ್ಲಿ ಸ್ತ್ರೀಯ ಸ್ವಭಾವ, ವರ್ತನೆ, ಬದುಕಿನ ರೀತಿ ಎಲ್ಲವನ್ನು ನಿರ್ಬಂಧಿಸುತ್ತಾ, ವಿಧವೆಯರಿಗೆ 'ಅಮಂಗಲೆ'ಎಂಬ ಹಣೆಪಟ್ಟಿ ಕಟ್ಟಿ ನಾಲ್ಕು ಗೋಡೆ ಮಧ್ಯೆದಲ್ಲಿಯೇ ಆಕೆಯನ್ನು ಬಂಧಿಸುವ ನೂರಾರು ಸಂಕೋಲೆಗಳ ನಡುವೆ 'ರಾಜ್ಯಾಧಿಕಾರ'ವನ್ನು ವಹಿಸುವುದೇ ಒಂದು ಛಾಲೆಂಜ್. ಅರಿಸ್ಟಾಟಲನಿಂದ ಫ್ರಾಯ್ಡ್‌ವರೆಗಿನ ವೈಜ್ಞಾನಿಕ ತಿಳುವಳಿಕೆಯು ಸ್ತ್ರೀಯನ್ನು ಸ್ತ್ರೀಯೆಂದು ಪರಿಗಣಿಸದೇ ಗಂಡಿನೊಡನೆ ಹೋಲಿಸುವುದರ ಮೂಲಕ ಆಕೆಯನ್ನು 'ವಿಕಲಾಂಗ ಪುರು' ಎಂದು ವ್ಯಾಖ್ಯಾನಿಸುತ್ತಾ, ಸ್ತ್ರೀಯ ಹಲವಾರು ನೆಲೆಗಳನ್ನು ನಿರಾಕರಿಸಿರುವರು. ಸ್ತ್ರೀಯ ಸ್ವಾತಂತ್ರ್ಯ ಸಮಾನತೆ, ಬದುಕುವ ಅಧಿಕಾರ ಎಲ್ಲವನ್ನು ನಿರ್ಬಂಧಿಸಿರುವರು. ಹೀಗಿದ್ದು ಬೆರಳೆಣಿಕೆಯಷ್ಟು ರಾಣಿಯರು ಇಂಥ ನಿರ್ಬಂಧಗಳನ್ನು ಮೀರಿ ತಮ್ಮ ಅಸ್ತಿತ್ವವನ್ನು ಕಂಡುಕೊಂಡಿದ್ದು ವಿಶೇಷವಾದುದು. ಕೆಲಕಾಲದವರೆಗಾದರೂ ರಾಜನ ಕರ್ತವ್ಯಗಳನ್ನು ನಿಭಾಯಿಸಿದ್ದು ದಾಖಲಾರ್ಹ ಸಂಗತಿ. ರಾಣಿಗೆ ರಾಜ್ಯಾಧಿಕಾರದ ಸಂದರ್ಭ ಒದಗಿದ್ದಾದರೂ ಯಾವಾಗ? ರಾಜರಂತೆ ಆಕೆ ಆರಂಭದಿಂದಲೂ ರಾಜ್ಯ ಪ್ರಭುತ್ವಕ್ಕೆ ಒಳಗಾದವಳೇ? ಇಲ್ಲ, 'ರಾಣಿಯಾಗಿ' ರಾಜ್ಯಾಧಿಕಾರವನ್ನು ಪಡೆದುದು ಕೇವಲ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ. ಒಬ್ಬ ರಾಜನು ಅಸಮರ್ಥನಾದಾಗ ಇಲ್ಲವೇ ಅಕಾಲಿಕ ಮರಣ ಹೊಂದಿದಾಗ, ಪುತ್ರರಿಲ್ಲದಾಗ ಅಥವಾ ಪುತ್ರರು ಚಿಕ್ಕವನಿದ್ದಾಗ, ಆತ ಪ್ರಾಪ್ತವಯಸ್ಕನಾಗುವವರೆಗೆ ಮಾತ್ರ ಈಕೆ ಅಧಿಕಾರದಲ್ಲಿರುವಳು. ಹೀಗೆ ಯಾರದೋ ಒಬ್ಬರ ಗೈರನ್ನು ತುಂಬುವ ಅನಿವಾರ್ಯತೆಯಲ್ಲಿ ರಾಜ್ಯಾಧಿಕಾರವನ್ನು ಪಡೆಯುವಳು. ಕೆಳದಿ ರಾಣಿ ಚೆನ್ನಮ್ಮಾಜಿಯು ಪತಿ ಸೋಮಶೇಖರನಾಯಕನು ಮರಣ ಹೊಂದಿದಾಗ, ತೆರವಾದ ಸಿಂಹಾಸಕ್ಕೆ ಅಧಿಪತಿ ಇಲ್ಲವಾದಾಗ ಬಸಪ್ಪನಾಯಕನು ಚಿಕ್ಕವನಾದ ಕಾರಣ, ಆತ ಪ್ರಾಪ್ತ

ವಯಸ್ಕನಾಗುವವರೆಗೆ ಮಾತ್ರ ಆಡಳಿತ ನಡೆಸಿದಳು. ಬೆಳವಡಿಯ ರಾಣಿ ಮಲ್ಲಮ್ಮ ದೊರೆ ಈಶಪ್ರಭುವಿನ ಮರಣದ ನಂತರ ಮಗ ನಾಗಭೂಷಣನು ಚಿಕ್ಕವನಿದ್ದ ಕಾರಣವಾಗಿಯೇ ಅಧಿಕಾರವನ್ನು ವಹಿಸಿಕೊಂಡಳು. ಕಿತ್ತೂರಿನ ಮಾಳವರುದ್ರಗೌಡನು ಅಸಮರ್ಥ ದೊರೆಯಾಗಿದ್ದು, 'ರಂಜನಿ' ಎಂಬ ಮುಸಲ್ಮಾನಳೊಬ್ಬಳಲ್ಲಿ ಅನುರಕ್ತನಾಗಿ ರಾಜ್ಯವನ್ನು ತೊರೆದು ವಿಲಾಸಪ್ರಿಯ ನಾಗಿದ್ದನು. ಇಂಥ ಸಂಧಿಗ್ಧ ಪರಿಸ್ಥಿತಿಯಲ್ಲಿ ಮಾಳವರುದ್ರಗೌಡನ ರಾಣಿ ಮಲ್ಲಮ್ಮ ಹದಿನೈದು ವರ್ಷಗಳ ಕಾಲ ಕಿತ್ತೂರಿನ ಅಧಿಕಾರ ವಹಿಸಿಕೊಂಡದ್ದು ಗಮನಾರ್ಹವಾದದು. ಹಂಡೆ ಪಾಳೇಗಾರರ ದ್ಯಾಮಪ್ಪ ನಾಯಕನ ಮರಣದ ತರುವಾಯವೇ ರಾಣಿ ನೀಲಮ್ಮ ರಾಜ್ಯಾಧಿಕಾರವನ್ನು ವಹಿಸಿಕೊಂಡಳು. ಹೀಗೆ ರಾಜ್ಯಾಧಿಕಾರವು ಅನಿವಾರ್ಯವಾಗಿ ದೊರೆತು, ಕೆಲಕಾಲದಲ್ಲೆ ಪುರುಷ ಆ ರಾಜ್ಯಾಧಿಕಾರವನ್ನು ಕಸಿದುಕೊಂಡ ಸಂಗತಿ ಇತಿಹಾಸದಲ್ಲೆಲ್ಲ ದಾಖಲಾಗಿದೆ. ಆದರೆ ದೊರೆತ ಅಲ್ಪ ಸಮಯದಲ್ಲಿ ಸಮರ್ಥವಾಗಿ ರಾಜನ ಕರ್ತವ್ಯಗಳನ್ನೆಲ್ಲ ನಿರ್ವಹಿಸಿದ್ದು, ರಾಣಿಯರ ಹೆಗ್ಗಳಿಕೆಯಾಗಿದೆ. ರಾಣಿ ಅಧಿಕಾರ ವಲಯದಲ್ಲಿ ಎದುರಿಸಿದ ಬಹುದೊಡ್ಡ ಸಮಸ್ಯೆಗಳೆಂದರೆ ಒಂದು ಉತ್ತರಾಧಿಕಾರತ್ವ ಇನ್ನೊಂದು ವಂಶೀಯತೆ.

### ೩.೪.೧. ಉತ್ತರಾಧಿಕಾರತ್ವ

ಪಿತೃಪ್ರಧಾನ ವ್ಯವಸ್ಥೆಯಲ್ಲಿ ರಾಜನ, ರಾಜನಿಂದ, ರಾಜನಿಗಾಗಿ ಇರುವ ವ್ಯವಸ್ಥೆಯೇ ಉತ್ತರಾಧಿಕಾರತ್ವ, ಅಂದರೆ ಸಂಸ್ಥಾನದ ಉತ್ತರಾಧಿಕಾರವು ಅರಸನಿಂದ ಅರಸನ ಹಿರಿಯಮಗನಿಗೆ ಪ್ರಾಪ್ತವಾಗುತ್ತಿತ್ತು. ಒಂದು ವೇಳೆ ಮೃತನಾದ ರಾಜನಿಗೆ ಮಗನಿಲ್ಲದೆ ಹೋದರೆ ಅಥವಾ ಮಕ್ಕಳು ಅನರ್ಹವಾದರೆ, ಆಗ ತಮ್ಮಂದಿರೋ, ಮೊಮ್ಮಕ್ಕಳೋ, ಚಿಕ್ಕಪ್ಪಂದಿರೋ, ಸೋದರಳಿಯರೋ ಇಲ್ಲವೆ ಹೊರಗಿನ ಸಂಬಂಧಿಗಳನ್ನು ತಮ್ಮ ಉತ್ತರಾಧಿಕಾರಿಯಾಗಿ ಮಾಡುತ್ತಿದ್ದರೇ ಹೊರತಾಗಿ ಮಗಳನ್ನಲ್ಲ ಅಥವಾ ಮೃತ ರಾಜನ ರಾಣಿಯನ್ನಲ್ಲ.

ಕೆಳದಿ ಅರಸ ರಾಮರಾಜನಾಯಕನಿಗೆ ಇಬ್ಬರು ಮಕ್ಕಳಿದ್ದರೂ ಅವರು ಅಸಮರ್ಥರಾದ ಕಾರಣ ಅವನ ಸಹೋದರ ೧ನೇ ವೆಂಕಟಪ್ಪನಾಯಕ ಉತ್ತರಾಧಿಕಾರಿಯಾದನೇ ಹೊರತಾಗಿ ರಾಮರಾಜನ ರಾಣಿಯಲ್ಲ. ಅಲ್ಲದೆ ಬಿಳಗಿ ಸಂಸ್ಥಾನದ ಮೌನಘಂಟೆಯು ಮಕ್ಕಳಿಲ್ಲದೇ ಮರಣ ಹೊಂದಿದಾಗ ಮೌನಘಂಟೆಯ ಸಹೋದರಿ 'ಘಂಟೆಮ್ಮಾಜಿಯು' ತಾನು ಅಸರುಮನೆತನದ ಕುಡಿಯೆಂದು ತನಗೆ ರಾಜ್ಯ ಸಲ್ಲಬೇಕೆಂದು ಬಾಳ್ಗೇಡಿಗೆ ಬಂದು ಅಧಿಕಾರಕ್ಕೆ ಸೆಣಸಿದಳು. ಆದರೆ ಈಕೆಯ ಅಧಿಕಾರವನ್ನು ಬಯಸದ ಪ್ರಜೆಗಳು ಕ್ಷಾದಿಗೆ ಮನೆತನದ ಬಾಲಕನಿಗೆ ಶಿವಪ್ಪನಾಯಕನೆಂದು ಹೆಸರಿಟ್ಟು, ಆತನನ್ನು ಉತ್ತರಾಧಿಕಾರಿಯನ್ನಾಗಿ ಮಾಡಿದರೆ ವಿನಾ ಘಂಟೆಮ್ಮಾಜಿಯನ್ನಲ್ಲ. ಹೀಗಾಗಿ ಉತ್ತರಾಧಿಕಾರತ್ವವು ಪಿತೃಸ್ಥಾನೀಯತೆಯನ್ನು ಹೊಂದಿತ್ತೆನ್ನಬಹುದು.

### ೩.೪.೨. ವಂಶೀಯತೆ

ಒಂದು ರಾಜ್ಯವು ವಂಶಪಾರಂಪರ್ಯವಾಗಿ ಮುಂದುವರೆಯುತ್ತಾ ಸಾಗಬೇಕಾದರೆ ವಂಶದ ಕುಡಿಯ ಅಗತ್ಯವಿದೆ. ಆ ವಂಶದ ಕುಡಿ ಗಂಡಸೇ ಆಗಿರಬೇಕು. ವಂಶದ ಹಕ್ಕೆಲ್ಲ ಗಂಡಸರಿಗೆ ಮೀಸಲು ಹೆಣ್ಣಿಗಲ್ಲ. ಗಂಡಿಗೆ ಹಕ್ಕುಗಳಿದ್ದರೆ ಹೆಣ್ಣಿಗೆ ಬದ್ಧತೆಯಿದೆ. ಆಕೆಗೆ ದೊರೆಯುವುದೆಲ್ಲ ದಾನವಾಗಿಯೇ ಹೊರತು ಹಕ್ಕಾಗಿಯಲ್ಲ. ಸ್ತ್ರೀಪುರುಷರಿಬ್ಬರಿಗೂ ನಾಗರಿಕ ಹಕ್ಕುಗಳಿವೆಯಾದರೂ ನಿರ್ಣಾಯಕ ಪಾತ್ರ ತೆಗೆದುಕೊಳ್ಳುವ ಪುರುಷನೇ ಗಂಡಸು ಸಾರ್ವಜನಿಕ ವಲಯಕ್ಕೆ ಸೇರಿದವನು. ರಾಜಕೀಯ ಸಂಸ್ಥೆಯೂ ಕೂಡ ಆತನ ನಿರ್ಮಿತಿಯೇ, ಹೀಗಾಗಿಯೇ ಪ್ರಭುತ್ವವೆಲ್ಲ ಗಂಡಸಿನ ಸ್ವತ್ತು. ನಮ್ಮ ಕಾವ್ಯ-ಪುರಾಣಗಳಲ್ಲೆಲ್ಲ ಪುತ್ರನಿಗಾಗಿ ತಪಸ್ಸುಗಳನ್ನಾಚರಿಸಿದ ಉಲ್ಲೇಖಗಳು ಸಾಕಷ್ಟಿವೆ. ಆದರೆ ಪುತ್ರಿಗಾಗಿ ನಡೆದದ್ದು ವಿರಳವೇ. 'ಗಂಡುಮಗು ಬೇಕೆಂದು ವರ ಕೇಳಿದ್ದರೆ ಹೆಣ್ಣುಮಗು ಹುಟ್ಟಿತೆಂದು ಅದನ್ನು ಹಿಂದಿರುಗಿಸುವ ವಿಚಾರ ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿ ಉಕ್ತಗೊಂಡಿದೆ. ಇದು ಹೆಣ್ಣಿನ ಬಗೆಗಿನ ತಾತ್ಸಾರ ಭಾವನೆಯ ಪ್ರತೀಕವಾಗಿದೆ. 'ಗಂಡು ಕುಲದೀಪಕರೆಂಬ' ಕಾರಣವಾಗಿಯೇ ನಮ್ಮ ರಾಣಿಯರೆಲ್ಲರಿಗೂ ತಮ್ಮ ವಂಶೋದ್ಧಾರಕನನ್ನು ಪಡೆಯುವ ಹೆಬ್ಬಯಕೆ.

ಆದರೆ ರಾಣಿಯರಿಗೆ ಶಾಪವೋ ಎಂಬಂತೆ ಮಕ್ಕಳಾಗದೇ ಇರುವುದೇ ಹೆಚ್ಚು. ಆದರೂ ಅವು ಅಕಾಲ ಮರಣಕ್ಕೀಡಾಡುವುದೇ ಹೆಚ್ಚು. ಕೆಳದಿ ರಾಣಿ ಚೆನ್ನಮ್ಮಾಜಿಗೆ, ವೀರಮ್ಮಾಜಿ, ಸಿರಸಂಗಿ ರಾಣಿ ಚೆನ್ನಮ್ಮ, ಗೆಜ್ಜಲಗಟ್ಟೆ ರಾಣಿ ಲಕ್ಷ್ಮೀದೇವಿ ಇತ್ಯಾದಿ ರಾಣಿಯರಿಗೆ ಮಕ್ಕಳೇ ಇಲ್ಲ. ಇನ್ನು ಕಿತ್ತೂರಿನ ರಾಣಿ ರುದ್ರವ್ವನಿಗೆ ಶಿವಲಿಂಗರುದ್ರಸರ್ಜ, ವೀರಭದ್ರ ಸರ್ಜರು, ಚೆನ್ನಮ್ಮನ ಉದರದಲ್ಲಿ ರುದ್ರಸರ್ಜ ಎಂಬ ಮಕ್ಕಳಿದ್ದರು. ಇವರು ಅಕಾಲಿಕ ಮರಣಕ್ಕೆ ತುತ್ತಾದರು ಹೀಗೆ ಒಂದಿಲ್ಲ ಒಂದು ಕಾರಣದಿಂದಾಗಿ ತಮ್ಮ ವಂಶೀಯತೆಯನ್ನು ರಕ್ಷಿಸಿಕೊಳ್ಳುವ ಬಹುದೊಡ್ಡ ಹೊಣೆ ರಾಣಿಯರದಾಗಿತ್ತು.

### ೩.೪.೩. ಸಾಂಪ್ರದಾಯಿಕ ರಾಣಿಯರ ಚಿತ್ರಣ

ಚಕ್ರವರ್ತಿಗಳು ಹಾಗೂ ಅವರ ಅಧೀನ ರಾಜರು ಬಹು ಪತ್ನಿತ್ವವನ್ನು ಹೊಂದಿದ್ದು, ಇದು ವೈಭವದ ಸಂಕೇತವಾಗಿದ್ದಿತು. ರಾಣಿಯರು ಪ್ರಭಾವಶಾಲಿ ಯಾಗಿದ್ದು, ಅವರಿಂದ ರಾಜರು ರಾಜನೀತಿಯ ವಿಷಯವಾಗಿ ಸಲಹೆ ಪಡೆಯುತ್ತಿದ್ದರು. ರಾಣಿಯರನ್ನು ಪಿರಿಯರಸಿ, ಪಟ್ಟದರಸಿ, ಪಟ್ಟಮಹಾದೇವಿ, ರಾಣಿ ಎಂಬುದಾಗಿ ವಿಂಗಡಿಸಲಾಗಿದ್ದು, ಇವರು ಸಾಮ್ರಾಜ್ಯದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನಮಾನಗಳನ್ನು ಹೊಂದಿದ್ದರು.

"ಪಿರಿಯರಸಿ ಹಿರಿಯ ರಾಣಿಯಾಗಿದ್ದು, ರಾಜನು ವರಿಸಿದ ಹೆಂಡತಿಯಾಗಿದ್ದಳು. ಇವಳಿಗೆ ಮಕ್ಕಳಾದರೆ ಪಿರಿಯರಸಿ ಪಟ್ಟಮಹಾದೇವಿಯೆಂಬ ಬಡ್ತಿ ಇವಳಿಗೆ ಒದಗುತ್ತಿತ್ತು. ಒಂದು ವೇಳೆ ಮಕ್ಕಳಾಗದೇ ಹೋದಲ್ಲಿ ಪಿರಿಯರಸಿಯಾಗಿಯೇ ಉಳಿಯುತ್ತಿದ್ದಳು. 'ಪಟ್ಟದ ರಾಣಿ' ಎಂಬುದು ಚಕ್ರವರ್ತಿಯಂತೆ ಒಂದು ಸ್ಥಾನವಾಗಿದ್ದು, ಉಳಿದೆಲ್ಲ ರಾಣಿಯರಿಗಿಂತ ಇವಳ ಸ್ಥಾನ ಹಿರಿಯದಾಗುತ್ತಿತ್ತು. ಚಕ್ರವರ್ತಿಯೊಂದಿಗೆ ಎಲ್ಲ ಧಾರ್ಮಿಕ, ಸಾಮಾಜಿಕ ಮೊದಲಾದ ಕಾರ್ಯಗಳಲ್ಲಿ ಪತಿಯೊಂದಿಗೆ ಭಾಗವಹಿಸುತ್ತಿದ್ದಳು. ಈ ಹಕ್ಕು ಕೇವಲ ಪಟ್ಟದ ರಾಣಿಯ ಸ್ವತ್ತಾಗಿತ್ತೆಂಬುದು ವಿಶೇಷ. ಹೀಗಾಗಿ ಧವಳಶಂಖ, ಉದ್ದಂಡ, ಪುಂಡರೀಕ, ಕನಕದಂಡ, ಚಾಮರ ಸ್ತೋಮಗಳು ಪಟ್ಟದ ರಾಣಿಯ ಚಿಹ್ನೆಗಳಾಗಿದ್ದವು. ಇಂಥ ಗೌರವಗಳು ಉಳಿದ ರಾಣಿಯರಿಗೆ ಇರಲಿಲ್ಲ. ಪಟ್ಟದರಸಿಯೆಂದರೆ ರಾಜನ ಜೊತೆಗೆ ಪಟ್ಟವನ್ನು ಕಟ್ಟಿಕೊಂಡ ರಾಣಿ. ಪಟ್ಟಕಟ್ಟು, ಪಟ್ಟಂಗಟ್ಟು ಅಂದರೆ ಅಧಿಕಾರ ವಹಿಸಿಕೊಡು ಎಂಬರ್ಥವೂ ಇದೆ. ಪಟ್ಟದರಸ, ಪಟ್ಟದರಸಿ, ಪಟ್ಟದ ಆನೆ, ಪಟ್ಟದ ಕುದುರೆಗಳಿಗೆ ವಿಶೇಷ ಸ್ಥಾನಮಾನಗಳಿವೆ.

### ೩.೪.೪. ಪಟ್ಟದರಸಿಯ ಕಾರ್ಯಗಳು

ಪಟ್ಟದರಸಿಯು ರಾಜ್ಯ ಕಾರ್ಯಗಳಲ್ಲಿ ಭಾಗವಹಿಸುವುದು ರಾಜತಂತ್ರಕ್ಕೆ ಸಂಬಂಧಿಸಿದ ಹಲವಾರು ವಿಚಾರಗಳ ಬಗ್ಗೆ. ರಾಜನು ಪಟ್ಟದರಸಿಯ ಸಲಹೆ, ಸೂಚನೆಗಳನ್ನು ಪಡೆಯುತ್ತಿದ್ದನು. ಹಬ್ಬ, ಉತ್ಸವ, ಜಾತ್ರೆಗಳಿಗೆ ಸಂಬಂಧಿಸಿದ ವಿಚಾರಗಳನ್ನು ಪಟ್ಟದರಸಿಯೊಂದಿ ಸಮಾಲೋಚಿಸಲಾಗುತ್ತಿದ್ದನು. ರಾಜ್ಯಕ್ಕೆ ಸಂಬಂಧಪಟ್ಟ ಹಲವಾರು ಮಹತ್ವದ ಸಭೆಗಳಲ್ಲಿ ನೇರವಾಗಿ ಭಾಗವಹಿಸುವ ಹಕ್ಕು ಈಕೆಗಿತ್ತು. ಪಟ್ಟದರಸಿಯಾದವಳು ರಾಜ್ಯದ ಕೆಲವು ಭಾಗವನ್ನು ಆಳುವ ಹಕ್ಕನ್ನು ಪಡೆದಿದ್ದಳು. ಪಟ್ಟದರಸನ ಸ್ಥಾನದ ನಂತರದ ಸ್ಥಾನವೇ ಪಟ್ಟದರಸಿಯದು. ಹೀಗಾಗಿ ರಾಜನ ಅನುಪಸ್ಥಿತಿಯಲ್ಲಿ ರಾಜ್ಯಾಧಿಕಾರವನ್ನು ವಹಿಸಿಕೊಳ್ಳುವ ಹಕ್ಕು ಈಕೆಗಿದೆ. ತನ್ನ ಅಧೀನ ಅಧಿಕಾರಿ ವರ್ಗವಾದ ಮಂಡಳೇಶ್ವರ, ಸಾಮಂತರುಗಳಿಗೆ ಆಜ್ಞೆ ಮಾಡುವ ಅಧಿಕಾರವು ಪಟ್ಟದರಸಿಗಿದೆ. ಹೀಗಾಗಿಯೇ ಪಟ್ಟದರಸಿಯು ಪಿರಿಯರಸಿ ಹಾಗೂ ಇತರ ರಾಣಿ ಪರಿವಾರದವರಿಗಿಂತ ಭಿನ್ನವೂ, ವಿಶಿಷ್ಟವೂ ಆದ ಪಾತ್ರ ನಿರ್ವಹಿಸುತ್ತಿದ್ದಳು.

ಮೊದಲನೇ ಪಿರಿಯರಸಿಗೆ ಮಕ್ಕಳಾಗದಿದ್ದರೆ, ಎರಡನೇ ಪಿರಿಯರಸಿಗೆ ಪಟ್ಟಮಹಾದೇವಿಯ ಪಟ್ಟ ಹೋಗುತ್ತಿತ್ತು. ಇವಳೂ ಸಂತಾನಹೀನಳಾಗಿದ್ದರೆ ಮುಂದೆ ಇರುವ ಇತರ ರಾಣಿಯರಲ್ಲಿ ಯಾರಿಗೆ ಸಂತಾನವಿರುತ್ತದೆಯೋ ಆ ರಾಣಿಯನ್ನು ಪಟ್ಟದ ರಾಣಿಯನ್ನಾಗಿ ಮಾಡಲಾಗುತ್ತಿದ್ದ ರೆಂಬುದಾಗಿ ಹಲವು ಮೂಲಗಳಿಂದ ತಿಳಿದುಬರುತ್ತದೆ."[೩೭] 'ಅಪುತ್ರಸ್ಯ ಗತಿರ್ನಾಸ್ತಿ' ಎಂಬಂತೆ ರಾಣಿಯರು ಭೌತಿಕವಾಗಿ ಎಷ್ಟೇ ಸಬಲರಾಗಿದ್ದರೂ, ಆಂತರಿಕವಾಗಿ ಸಂತಾನಭಾಗ್ಯವಿಲ್ಲವೆಂಬ

ಕಾರಣಕ್ಕಾಗಿ ಅವಮಾನದಿಂದ ಕುಗ್ಗುವ ಹಾಗೂ ಅಧಿಕಾರದಲ್ಲಿ ಅಪ್ರಧಾನತೆ ಹೊಂದುತ್ತಿದ್ದರು. ರಾಣಿಯರನ್ನು ಸಾಂಪ್ರದಾಯಿಕ ಚೌಕಟ್ಟಿನ ಮೂಲಕವಾಗಿ ಅವರಿಗೆ ಒತ್ತಿ ಒತ್ತಿ ಸಂತಾನಭಾಗ್ಯ ವಿಲ್ಲದನ್ನು ಸೂಚಿಸುವ ರೀತಿಯಲ್ಲಿ ಅವರಿಗೆ ಅಧಿಕಾರದ ಪ್ರಮುಖ ನೆಲೆಗಳು ಒದಗದಿರುವುದು ವಿಷಾದದ ಸಂಗತಿ.

ರಾಣಿಯರು ಸ್ವತಂತ್ರ ಸಾಮ್ರಾಜ್ಞಿಳಾಗಿ ಆಡಳಿತವನ್ನು ನಿರ್ವಹಿಸಿದ್ದರೇ ಎಂಬ ಪ್ರಶ್ನೆಯನ್ನು ಹಾಕಿಕೊಂಡಾಗ ಅವರು ಸ್ವತಂತ್ರ ಸಾಮ್ರಾಜ್ಞಿಗಳಾಗಿ ಆಳಿದ್ದಾರೆಂಬುದಾದರೆ, ಯಾವ ಸಂದರ್ಭದಲ್ಲಿ ಎಂಬ ಪ್ರಶ್ನೆ ಏಳುತ್ತದೆ. ಏಕೆಂದರೆ ರಾಜ ಬದುಕಿರುವವರೆಗೂ ಅಪ್ರಧಾನವಾಗಿದ್ದು, ಇಲ್ಲವೇ ರಾಜ ಅಸಮರ್ಥನಾಗಿದ್ದಾಗ, ಅನಿವಾರ್ಯವಾಗಿ ರಾಣಿ ರಾಜಕಾರಣಕ್ಕೆ ಧುಮುಕಿದ ಸಂದರ್ಭಗಳ ಅನಿವಾರ್ಯತೆಯನ್ನು ಕಾಣುತ್ತೇವೆ. ಈ ಅನಿವಾರ್ಯತೆಯು ಕೂಡ ಎಲ್ಲಿಯವರೆಗೆ ಎಂದರೆ ಅಪ್ರಾಪ್ತ ವಯಸ್ಕ ಮಕ್ಕಳು ಪ್ರಾಪ್ತವಾಗುವವರೆಗೆ, ಅಂದರೆ ಗಂಡು ಅಧಿಕಾರಕ್ಕೆ ಬರುವವರೆಗೆ ಮಾತ್ರ. ಹೀಗೆ ಪುತ್ರವಿಲ್ಲವೆಂಬ ದೊಡ್ಡ ಪ್ರಶ್ನೆಯನ್ನು ಎದುರಿಸುತ್ತಲೇ ರಾಜ್ಯ, ತನ್ನನ್ನು ಅಲ್ಲದೆ ಸಾಕುಮಗನನ್ನು ರಕ್ಷಿಸುವ ಹೊಣೆಯು ರಾಣಿಯರಿಗಿದ್ದುದನ್ನು ಗಮನಿಸಬಹುದು. ರಾಣಿ ಪಲಾಯನಗೊಳ್ಳುವಾಗಲೂ ತನ್ನ ಸಾಕುಮಗನನ್ನು ಕರೆದುಕೊಂಡು, ಆತನ ರಕ್ಷಣೆಯ ಹೊಣೆಹೊತ್ತ ರಾಣಿಯರಿಗೆ ತಮ್ಮ ವಂಶವಾಹಿನಿಯನ್ನು ಮುಂದುವರಿಸಿಕೊಂಡು ಹೋಗುವ ಬಹುದೊಡ್ಡ ಜವಾಬ್ದಾರಿಯ ಹೊರೆಯಿದೆ. ರಾಣಿಯಾಗಿದ್ದಾಗಲೂ ಆಕೆ ತಾಯಿಯಾಗಿರಬೇಕು, 'ಗಂಡೇ ಅಧಿಕಾರದಲ್ಲಿರಬೇಕು ಹೆಣ್ಣಲ್ಲವೆಂಬ ಅಜೆಂಡಾಗಳ ಮಧ್ಯದಲ್ಲಿ ರಾಣಿ ಮನಸ್ಸನ್ನು ಕೇಂದ್ರೀಕರಿಸಿ ಕೊಂಡು ಆಳ್ವಿಕೆ ನಡೆಸದೆ, ಆಡಳಿತವನ್ನು ಬಿಟ್ಟುಕೊಡಬೇಕೆಂದು ಮತ್ತು ಯಾರದೋ ಗೈರು ಹಾಜರಿಯನ್ನು ತುಂಬಲು ರಾಣಿ ಆಳ್ವಿಕೆ ಮಾಡಿದುದು ಕಂಡುಬರುತ್ತದೆ. ಹೀಗೆ ಸನಾತನ ಸಂಪ್ರದಾಯಗಳು ರಾಣಿಯರನ್ನು ಕುಬ್ಜಗೊಳಿಸುತ್ತವೆ. ಈ ಹಿನ್ನೆಲೆಯಲ್ಲಿ ರಾಣಿಯರು ತಮಗೆ ಸಂತಾನಭಾಗ್ಯವಿಲ್ಲವೆಂಬ ಕಾರಣಕ್ಕಾಗಿಯೇ ಪಟ್ಟಮಹಾ ದೇವಿಯಾಗದೇ, ಪಿರಿಯರಸಿಯಾಗಿಯೇ ಉಳಿದುದು ಕಂಡುಬರುತ್ತದೆ. ರಾಣಿಯರು ಅಂದರೆ ಪಿರಿಯರಸಿಯೂ ಅಲ್ಲದ ಪಟ್ಟಮಹಾದೇವಿಯೂ ಅಲ್ಲದ ಸಾಮಾನ್ಯ ರಾಣಿಯರು. ಇವರು ಸಾಮ್ರಾಜ್ಯದ ವಿವಿಧ ಪ್ರದೇಶಗಳನ್ನು ಆಳುತ್ತಿದ್ದರೆಂಬುದಾಗಿ ಡಾ.ಎಂ.ಚಿದಾನಂದಮೂರ್ತಿಯವರು ಹೇಳಿರುವರು. ಡಾ.ಚೆನ್ನಕ್ಕ ಎಲಿಗಾರ ಅವರು ಆರನೇ ವಿಕ್ರಮಾದಿತ್ಯನು ಬಹುಸಂಖ್ಯಾತ ರಾಣಿಯರ ನಡುವಿನ ಸವತಿ ಮಾತ್ಸರ್ಯ ಕಡಿಮೆಗೊಳಿಸಲಾಗಿಯೇ ರಾಣಿಯರ ಮನಸ್ಸುಗಳು ರಾಜಕೀಯದ ಕಡೆಗೆ ತಿರುಗುವಂತೆ ಮಾಡಿರಬಹುದೆಂದು ಹೇಳುತ್ತಾರೆ. ಒಂದು ರೀತಿಯಲ್ಲಿ ಈ ಮಾತು ಸತ್ಯವೇ ಎನಿಸುತ್ತದೆ.

"ಸಿಂಧ ಅರಸ ಚಾವುಂಡನು ಬಿಜ್ಜಳನ ತಂಗಿ ಸಿರಿಯಾದೇವಿ, ಲಕ್ಷ್ಮಿದೇವಿ, ದೇಮುಲ ದೇವಿಯರನ್ನು ವಿವಾಹವಾದನು. ದೇಮುಲದೇವಿಯನ್ನು ಶಾಸನಗಳು ಸಕಲಭೋಗಭಾಗಿನಿ,

ದ್ವಿತೀಯ ಲಕ್ಷ್ಮಿ ಸಮಾನೆ, ಪ್ರತ್ಯಕ್ಷ ಪಾರ್ವತಿ, ಪತಿವ್ರತಾ ಅರುಂಧತಿ, ಶಿಷ್ಟೇಷ್ಟ ಜನ ಕಲ್ಪವೃಕ್ಷೆ, ಅಭಿನವ ಸರಸ್ವತಿ, ಬೇಡಿದುದನ್ನು ನೀಡುವ ಸುರಧೇನು ಎಂದು ವರ್ಣಿಸಿವೆ. ಅಲ್ಲದೆ ಅರಸಿ ಬೀದಿಯ ೧೧೫೧ರ ಶಾಸನವು ಇವಳನ್ನು 'ಪಿರಿಯರಸಿ ಪಟ್ಟಮಹಾದೇವಿ' ಎಂದು ಕರೆದಿದೆ. ಈ ಸ್ಥಾನವು ಮುಂದೆ ಅವಳಿಂದ ತಪ್ಪಿ ಬಿಜ್ಜಳನ ತಂಗಿಯಾದ ಸಿರಿಯಾದೇವಿಗೆ ಸಂದಿತು. ರೋಣ ೧೧೭೯ರ ಶಾಸನವು "ವೀರ ಚಾವುಂಡರಸದೇವನರ್ದ್ಧಾಂಗಿ ಲಕ್ಷ್ಮಿ ಪಟ್ಟದ ಮಹಾದೇವಿ ಯಂತಃಪುರ ಮುಖದರ್ಪಗೆ ಸಿರಿಯಾದೇವಿಯರಸಿ"[೩೮] ಎನ್ನುತ್ತದೆ.

ಇದಕ್ಕೆ ಅಪವಾದವೆನ್ನುವಂತೆ "ಪಟ್ಟದ ರಾಣಿ ಎಂಬುದು ಚಕ್ರವರ್ತಿಯಂತೆ ಒಂದು ಪದವಿಯಾಗಿದ್ದು, ಉಳಿದ ರಾಣಿಗಿಂತ ಇವಳ ಸ್ಥಾನ ಹಿರಿದು. ಇವಳಿಗೆ ಸಂತಾನವಿರದಿದ್ದರೆ, ಮುಂದಿನ ರಾಣಿಗೆ ಪಟ್ಟದ ರಾಣಿ ಸ್ಥಾನ ದೊರೆಯುತ್ತಿದ್ದಿತು. ಆದರೆ ಇಲ್ಲಿ ದೇಮುಲದೇವಿಗೆ ಪುತ್ರ ಸಂತಾನವಿದ್ದಾಗಲೂ ಆ ಸ್ಥಾನ ತಪ್ಪಿ ಸಿರಿಯಾದೇವಿಗೆ ಸಂದಿದೆ. ಇದು ಕಲಚೂರಿಗಳ ಪ್ರಭುತ್ವದ ದರ್ಪವನ್ನು ಮತ್ತು ರಾಣಿಯರ ಮನಸ್ತಾಪವನ್ನು ಸೂಚಿಸುತ್ತದೆ.[೩೯] ಹಿರಿಯ ರಾಣಿಗಾದ ಅನ್ಯಾಯವನ್ನು ಸರಿಪಡಿಸಲು ಚಾವುಂಡರಸ ಅಸಮರ್ಥನಾಗಿದ್ದನು. ಈತನ ಮತ್ತೊಬ್ಬ ರಾಣಿ ಲಕ್ಷ್ಮಿದೇವಿ ಅಗ್ರಸತಿ ಎನಿಸಿದ್ದಳು. ಇವಳು "ಸಹಸ್ರ ಫಳಭೋಗ ಭಾಗಿನಿ, ದ್ವಿತೀಯ ಲಕ್ಷ್ಮಿ ಸಮಾನೆ, ಕಳಹಂಸಯಾನೆ, ದಾನಚಿಂತಾಮಣಿ, ಯಾಚಕ ಜನ ದಾರಿದ್ರ್ಯ ಸಂಹರಣಿ, ಗುಣ ಗಣಾಭರಣಿ, ಬುಧಜನಾಹಾದೆ, ಸಾಹಸೋತ್ತುಂಗೆ, ವಿಜಯ ವೈಜಯಂತಿ, ಸಿಂಧ ಮುಕುಂದೆ, ಸಿಂಧ ಮಹಾದೇವಿ"[೪೦] ಎಂಬ ಬಿರುದನ್ನು ಧರಿಸಿದ್ದಳು ಎಂಬ ಅಂಶ ತಿಳಿದುಬರುತ್ತದೆ.

ಒಟ್ಟಿನಲ್ಲಿ ಕರ್ನಾಟಕ ಲಿಂಗಾಯತ ರಾಣಿಯರು: ಒಂದು ಅಧ್ಯಯನ ಎಂಬ ಸಂಶೋಧನ ಮಹಾಪ್ರಬಂಧದಲ್ಲಿ ರಾಣಿಯರೆಂದರೆ ಯಾರು? ಯಾರನ್ನು ರಾಣಿಯರ ವ್ಯಾಪ್ತಿಯಲ್ಲಿ ಪರಿಗ್ರಹಿಸಬೇಕಾಗಿದೆ. ರನ್ನಕವಿ ಹೇಳುವಂತೆ ಸಾಮಂತರದಲ್ಲಿ ಬೆಳೆದು, ಮಾಂಡಲಿಕರಲ್ಲಿ ಉದಿತೋದಿತನಾಗಿ, ಚಕ್ರವರ್ತಿಗಳಲ್ಲಿ ಕವಿಚಕ್ರವರ್ತಿಯಾದೆನೆಂಬ ಹೇಳಿಕೆಯಲ್ಲಿ ಚಕ್ರವರ್ತಿಗಳ ಕೆಳಗೆ ಮಾಂಡಲಿಕರು, ಸಾಮಂತರು, ಪಾಳೇಗಾರರು ಇತ್ಯಾದಿ ಸಣ್ಣಪುಟ್ಟ ಸಂಸ್ಥಾನಿಕರು ಇದ್ದರೆಂಬುದನ್ನು ಗಮನಿಸಬೇಕು. ಇದು ಆಡಳಿತದ ಅನುಕೂಲಕ್ಕಾಗಿ ನಮ್ಮ ಅರಸರು ಮಾಡಿಕೊಂಡ ಆಡಳಿತ ವಿಭಾಗಗಳೆನಿಸಿದರೂ ಆ ವಿಭಾಗಗಳ ಒಡೆಯರ ಪತ್ನಿಯರನ್ನು ಇಲ್ಲಿ 'ರಾಣಿಯರೆಂದು' ಪರಿಗಣಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗಾಗಿ ರಾಣಿಯರೆಂದರೆ ಕೇವಲ ಚಕ್ರವರ್ತಿಗಳ ಪತ್ನಿಯರಲ್ಲ, ಸಾಮಂತರ, ಮಾಂಡಲಿಕರ, ಪಾಳೇಗಾರರ, ನಾಡಗೌಡ ಮನೆತನದ ಒಡತಿಯರನ್ನು ರಾಣಿಯರೆಂದು ಪರಿಭಾವಿಸಿಕೊಳ್ಳಲಾಗಿದೆ. ಈ ಎಲ್ಲ ಸಂಸ್ಥಾನಿಕ ರಾಣಿಯರು ರಾಜನ ಸಮಾನ ಅಧಿಕಾರವನ್ನು ಪಡೆದು ಸಮರ್ಥವಾಗಿ ರಾಜ್ಯಾಡಳಿತವನ್ನು ನಿರ್ವಹಿಸಿದ್ದಾರೆ.

**ಕೊನೆಟಿಪ್ಪಣಿಗಳು**

೧. ಶೈಲಜಾ ಹಿರೇಮಠ, ಸ್ತ್ರೀಕಥನ, ೨೦೦೩, ಪು.೪೫೧

೨. ಯತೀಶ್ವರ ಸೀ.ಚ., ಸುಗ್ಗಲೆ, ೨೦೧೦, ಪು.೨೩

೩. ಎ.ಕ.೮, ಹಾಸನ ಜಿಲ್ಲೆ, ೧೯೮೪, ಪು.೧

೪. ಮುಳಗುಂದ ಚ.ವಿ, ಮಾತೋಶ್ರೀ, ೧೯೮೬, ಪು.೧೬೬

೫. ನಾಗಯ್ಯ ಜೆ.ಎಂ., ಪೂರ್ವೋಕ್ತ, ೧೯೯೨, ಪು.೩೪

೬. ಕೊಪ್ಪಾ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ೧೯೯೦, ಪು.೧

೭. ಲಕ್ಷ್ಮಣ ತೆಲಗಾವಿ, ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ೨೦೦೩, ಪು.೧

೮. ಶಾಮಾಶಾಸ್ತ್ರಿ ಆರ್., ಕೆಳದಿ ನೃಪವಿಜಯ, ೧೯೭೩, ಪು.೧೦

೯. ಅದೇ, ಪು.೬೩

೧೦. ಅದೇ, ಪು.೧೧೬

೧೧. ಮುಳಗುಂದ ಚ.ವಿ., ಮಾತೋಶ್ರೀ, ೧೯೮೬, ಪು.೨೦೦

೧೨. ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., ಕೆಳದಿ ಸಂಸ್ಥಾನ: ಸಮಗ್ರ ಅಧ್ಯಯನ, ೧೯೯೪, ಪು.೨೩೨

೧೩. ಅದೇ, ಪು.೧೧೨

೧೪. ಅದೇ, ಪು.೧೧೩

೧೫. ಅದೇ

೧೬. ಮೆಳವಂಕಿ ಕೆ.ಆರ್., ಸಂಸ್ಥಾನಿಕರ ಐತಿಹಾಸಿಕ ಸಾಹಿತ್ಯ, ೨೦೦೭, ಪು.೭೫

೧೭. ಮುಳಗುಂದ ಚ.ವಿ., ಮಾತೋಶ್ರೀ, ೧೯೮೬, ಪು.೨೧೫

೧೮. ಶಾಮಾಶಾಸ್ತ್ರಿ ಆರ್., ಕೆ.ನೃ.ವಿ, ೧೯೭೩, ಪು.೧೪೩

೧೯. ಯೋಗೀಶ್ವರಪ್ಪ ಡಿ.ಎಸ್., ಹಾಗಲವಾಡಿ ನಾಯಕರು, ೧೯೯೯, ಪು.೪೬

೨೦. ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್, ಮಲೆ ಕರ್ನಾಟಕದ ಅರಸು ಮನೆತನಗಳು, ೨೦೦೧, ಪು.೨೨

೨೧. ನಾಗರಾಜ್ ಎಂ.ಜಿ., **ಕೊಡಗಿನ ಹಾಲೇರಿ ರಾಜವಂಶವು, ಭಾಗ ೧**, ೨೦೦೪, ಪು.೪೪

೨೨. ಕೃಷ್ಣಯ್ಯ ಡಿ.ಎಸ್., **ಕೊಡಗಿನ ಇತಿಹಾಸ**, ೧೯೯೫, ಪು.೨೬೧

೨೩. ಅದೇ, ಪು.೪೭೭

೨೪. ಕೊಂಗವಾಡ ಜಿ.ವಿ., **ಕಿತ್ತೂರ ಇತಿಹಾಸ**, ೧೯೯೮, ಪು.೩

೨೫. ಮಾರಿಹಾಳ ಚ.ಗು., **ಕುಮಾರದೇವರು ರಾಜಗುರು**, ೨೦೦೯, ಪು.೬೭

೨೬. ಅದೇ, ಪು.೮೩

೨೭. ಮುಳಗುಂದ ಚ.ವಿ., **ಮಾತೋಶ್ರೀ**, ೧೯೮೬, ಪು.೨೨೬

೨೮. ಮುಕ್ಕುಂದಿಮಠ ಶಾಶ್ವತಸ್ವಾಮಿ, **ರಾಯಚೂರು ಜಿಲ್ಲೆಯ ನಾಡಗೌಡ ಮನೆತನಗಳು ಮತ್ತು ರಾಣಿಯರು**, ೨೦೦೮, ಪು.೧೦

೨೯. ಅದೇ, ಪು.೧೦

೩೦. ಶಿವಣ್ಣ ಕೆ.ಎಸ್., **ಕಳಲೆ ಮನೆತನದ ವೀರಶೈವ ದಳವಾಯಿಗಳು**, ೧೯೯೪, ಪು.೨೯

೩೧. ಅದೇ, ಪು.೫೬

೩೨. ಕಲಬುರ್ಗಿ ಎಂ.ಎಂ., ಬಸವರಾಜ ಕೆ.ಆರ್, ಪರಶಿವಮೂರ್ತಿ ಎಸ್., **ಮಹಾನಾಡ ಪ್ರಭುಗಳು**, ೧೯೯೫, ಪು.೫೬

೩೩. ಕಲಬುರ್ಗಿ ಎಂ.ಎಂ., **ಸಾರಂಗಶ್ರೀ**, ೧೯೯೪, ಪು.೧೪೮

೩೪. ಸದಾಶಿವಯ್ಯನವರು ಟಿ.ಎಸ್.ಎಂ., **ಕರ್ನಾಟಕದ ಗಡಿಗೆರೆಗಳು**, ೧೯೪೯, ಪು.೩೭

೩೫. 'ಬಿಲ್ಲ–ತಾಹಿತ್ಯ', **ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ನಿಘಂಟು, ಸಂಪುಟ ೫**, ೧೯೯೩, ಪು.೭೬೦೯

೩೬. ಕೃಷ್ಣಮೂರ್ತಿ ಪಿ.ವಿ., **ತಮಿಳು ಕನ್ನಡ ನಾಡಿನ ಶಾಸನಗಳು**, ೧೯೯೭, ಪು.೩೬

೩೭. ನಾಗಯ್ಯ ಜೆ.ಎಂ., **ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ**, ೧೯೯೨, ಪು.೨೯

೩೮. ಹಿರೇಮಠ ಚೆನ್ನಬಸವಯ್ಯ, **ಕುರಗೋಡು ಸಿಂಧರು: ಒಂದು ಅಧ್ಯಯನ**, ೧೯೯೫, ಪು.೩೮

೩೯. ಅದೇ, ಪು.೩೯

೪೦. ಮುಳಗುಂದ ಚ.ವಿ., **ಮಾತೋಶ್ರೀ**, ೧೯೮೬, ಪು.೧೩೩

### ಅಧ್ಯಾಯ ನಾಲ್ಕು

# ಲಿಂಗಾಯತ ರಾಣಿಯರು: ಸಾಂಸ್ಕೃತಿಕ ಅಧ್ಯಯನ

## ಅಧ್ಯಾಯ ನಾಲ್ಕು

# ಲಿಂಗಾಯತ ರಾಣಿಯರು: ಸಾಂಸ್ಕೃತಿಕ ಅಧ್ಯಯನ

ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಮಹಿಳೆಯರ ಪಾತ್ರ ವಿಶೇಷವಾದದ್ದು. ಹಾಡು ಕಟ್ಟಬಲ್ಲ, ನಾಡು ಆಳಬಲ್ಲ ಇವರ ಬದುಕಿನಲ್ಲಿ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಬಹುದಾಗಿದೆ. ಕೇವಲ ಸಾಂಸ್ಕೃತಿಕ ಚರಿತ್ರೆಯ ವ್ಯಾಪ್ತಿಯಲ್ಲಿ 'ಮಹಾಸತಿ' ಮೌಲ್ಯದ ಹೆಸರಿನಲ್ಲಿ ವಿಜೃಂಭಿಸಿರುವ ಈ ನಾಡಿನ ಶ್ರೀಸಾಮಾನ್ಯ ಮಹಿಳೆಯರು ಅಸಾಮಾನ್ಯ ರಾಣಿಯರು ಬದುಕಿರುವಾಗಲೇ ರಾಜಕೀಯ, ಸಾಹಿತ್ಯಿಕ, ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಹೀಗಾಗಿ ಸಂಸ್ಕೃತಿಯೆನ್ನುವುದು ಜೀವನ ಪದ್ಧತಿಯಾಗಿದೆ. ಆ ಜೀವನ ಪದ್ಧತಿಯ ಭಾಗವಾಗಿ ಕಾಣಿಸಿಕೊಳ್ಳುವ ಕರ್ನಾಟಕ ಲಿಂಗಾಯತ ರಾಣಿಯರ ಸಾಂಸ್ಕೃತಿಕ ಅಧ್ಯಯನದ ಸಾಧಕ–ಬಾಧಕಗಳನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಪರಾಮರ್ಶಿಸಲಾಗಿದೆ.

### ೪.೧. ರಾಜಕೀಯ ಅಧ್ಯಯನ

'ಶಿಷ್ಟರ ರಕ್ಷಣೆ, ದುಷ್ಟರ ದಂಡನೆ' ಉಕ್ತಿಯು ಕೇವಲ ರಾಜಮಹಾರಾಜರಿಗೆ, ದಂಡಾಧಿಪತಿಗಳಿಗೆ, ಶೂರರಿಗೆ ಅಥವಾ ಆ ಕಾಲದಲ್ಲಿ ಬದುಕಿದ್ದ, ವೀರರಿಗೆ ಮಾತ್ರ ಸೀಮಿತವಾದುದಲ್ಲ. ಈ ಮಾತು ಕರ್ನಾಟಕದ ರಾಣಿಯರಿಗೂ ಅನ್ವಯವಾಗುವಂಥದ್ದು. ರಾಣಿಯರೂ ಕೂಡಾ ರಾಜಪ್ರಭುತ್ವದ ಆಡಳಿತ ವ್ಯವಸ್ಥೆಯ ಆಗು–ಹೋಗುಗಳಿಗೆ ಕಾರಣೀಭೂತರಾಗಿದ್ದಾರೆ. ಇದಕ್ಕೆ ಇತಿಹಾಸದಲ್ಲಿ ಹಲವಾರು ಸಾಕ್ಷಿಗಳು ದೊರೆಯುತ್ತವೆ. ಇಂಗ್ಲೆಂಡಿನ ರಾಣಿಯಾದ ಮೇರಿ ಎಲಿಜಬೆತ್, ವಿಕ್ಟೋರಿಯ, ರಷ್ಯಾವನ್ನಾಳಿದ ಕ್ಯಾಥರಿನ್, ದೆಹಲಿಯ ರಜಿಯಾ ಸುಲ್ತಾನ, ವಾರಂಗಲ್ಲಿನ ಕಾಕತೀಯ ರುದ್ರಾಂಬೆ, ಗೇರುಸೊಪ್ಪೆಯ ರಾಣಿ ಬೈರಾದೇವಿ, ಚೆನ್ನಬೈರಾದೇವಿ, ತಮಿಳಿನ ರಾಣಿ ಬಲ್ಲಮಹಾದೇವಿ, ಕೆಳದಿ ರಾಣಿ ಚೆನ್ನಮ್ಮಾಜಿ, ಚೆನ್ನವೀರಮ್ಮಾಜಿ, ಬೆಳವಡಿ ಮಲ್ಲಮ್ಮ, ಕಲ್ಯಾಣ ಚಾಲುಕ್ಯ ರಾಣಿ ಲಕ್ಷ್ಮೀದೇವಿ, ಕಿತ್ತೂರ ರಾಣಿ ರುದ್ರಮ್ಮ, ರಾಣಿ ಚೆನ್ನಮ್ಮ,

ಸಿರಸಂಗಿ-ನವಿಲ್ಗುಂದ ರಾಣಿ ಚೆನ್ನಮ್ಮಾಜಿ, ಕಳಲೆಯ ರಾಣಿ ದೇವಮ್ಮಾಜಿ, ರಾಣಿಲಕ್ಷ್ಮಮ್ಮಣಿ ಇತ್ಯಾದಿ ಪ್ರಮುಖ ರಾಣಿಯರು ರಾಜಕೀಯ ಕ್ಷೇತ್ರದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿದ್ದಾರೆನ್ನಬಹುದು.

ರಾಜರಿಗೆ ಅನುರೂಪವೆಂಬಂತೆ ಅನೇಕ ಜನ ರಾಣಿಯರು ರಾಜಕೀಯ ಬದುಕನ್ನು ಬಾಳಿದ್ದಾರೆ. "ಕಾರ್ಯೇಷು ಮಂತ್ರಿಯಾಗಿ" ಹಲವಾರು ರಾಣಿಯರು ಉನ್ನತ ವ್ಯಕ್ತಿತ್ವ ಹೊಂದಿದ್ದಾರೆ. ಉತ್ತಮ ಗುಣಗಳಿಂದ ವ್ಯಕ್ತಿತ್ವವನ್ನು ಉನ್ನತೀಕರಿಸಿಕೊಂಡು ರಾಜಕೀಯ ಬದುಕನ್ನು ಬಾಳಿದ್ದಾರೆ. ಇದಕ್ಕೆ ಲಿಂಗಾಯತ ರಾಣಿಯರೂ ಹೊರತಾಗಿಲ್ಲ.

ಕಲ್ಯಾಣ ಚಾಲುಕ್ಯ ರಾಣಿ ಲಕ್ಷ್ಮೀದೇವಿಯು ಪತಿ ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯ ೫ನೆಯ ವರ್ಷ ಅಂದರೆ ಕ್ರಿ.ಶ.೧೦೮೦ರಲ್ಲಿಯೇ ಮುಂಡರಗಿ ತಾಲ್ಲೂಕಿನ ಡೋಣಿಯನ್ನು ಆಳಲು ಪ್ರಾರಂಭಿಸಿದಳು. "ಕ್ರಿ.ಶ.೧೦೮೪ರಲ್ಲಿ ಕಲ್ಯಾಣದಲ್ಲಿ, ೧೦೯೫-೯೬ರಲ್ಲಿ ಹದಿನೆಂಟು ಅಗ್ರಹಾರ ಮತ್ತು ಡಂಬಳವನ್ನು, ೧೧೧೦-೧೧ರಲ್ಲಿ ನಿಡಸಿಂಗಿಯನ್ನು, ಸು.ಕ್ರಿ.ಶ.೧೧೧೧-೧೧೧೨ರಲ್ಲಿ ಖೇಡಗಿಯನ್ನು ಆಳುತ್ತಿದ್ದಳೆಂಬ ಸಂಗತಿ ಶಾಸನಗಳಿಂದ ತಿಳಿದುಬರುತ್ತದೆ. ೨೦ ವರ್ಷಗಳವರೆಗೆ ಅವಿರತವಾಗಿ ಬೇರೆ ಬೇರೆ ಪ್ರದೇಶಗಳಿಂದ ರಾಜ್ಯಾಡಳಿತ ನಡೆಸಿದಳು."[೧]

ಕೆಳದಿಯನ್ನಾಳಿದ ಸಮರ್ಥ ರಾಣಿ ಚೆನ್ನಮ್ಮಾಜಿ. ಈಕೆಯ ಪತಿಯಾದ ಹಿರಿಯ ಸೋಮಶೇಖರ ನಾಯಕ ಕ್ರಿ.ಶ.೧೬೬೪ರಲ್ಲಿ ಪಟ್ಟವನ್ನೇರಿ, ಕ್ರಿ.ಶ.೧೬೭೧ರವರೆಗೆ ಒಟ್ಟು ೭ ವರ್ಷ ೯ ತಿಂಗಳು ರಾಜ್ಯವಾಳಿದನೆಂದು, ಈತನ ಕೊನೆಯ ದಿನಗಳು ತುಂಬಾ ಶೋಚನೀಯವಾಗಿತ್ತೆಂದು ಕೆಲವು ಕೃತಿಗಳು ಉಲ್ಲೇಖಿಸುತ್ತವೆ. ಅಲ್ಲದೆ 'ಬರಮೆ ಮಾವುತನೆಂಬ ಆಸ್ಥಾನದ ರಾಜವೈದ್ಯನ ಮೋಸಕ್ಕೆ ಗುರಿಯಾದ ಈತನಿಗೆ ಬುದ್ಧಿಭ್ರಮಣೆಯಾಯಿತೆಂದೂ, ಈತನಿಗೆ 'ಹುಚ್ಚು ಸೋಮಶೇಖರ ನಾಯಕ'ನೆಂಬ ಹೆಸರು ಆಯಿತು"[೨] ಎಂದೂ ವಸುಧಾರೆಯ ಕೈಫಿಯತ್ತು ಸಮರ್ಥಿಸುತ್ತದೆ. ಕೊನೆಗೆ ಈತ ಸೋಮಯ್ಯನೆಂಬ ಬ್ರಾಹ್ಮಣನಿಂದ ಹತನಾದ. ಇದಕ್ಕೆ 'ಕನೋರದ ರಾಜನಾದ ಶಾಮ್‌ಶಂಕರ ನಾಯಕನನ್ನು ಅವನ ಸರದಾರನೇ ಕೊಲೆ ಮಾಡಿದ ಮೇಲೆ ಆತನ ವಿಧವೆ ಚಿಕ್ಕವಯಸ್ಸಿನ ರಾಣಿ ಬಸಪ್ಪನಾಯಕನ ಹೆಸರಿನಲ್ಲಿ ರಾಜ್ಯವಾಳುತ್ತಿದ್ದಳೆಂದು, ಇವಳ ಬೆಂಬಲಕ್ಕೆ ತಿಮ್ಮನಾಯಕನಿದ್ದನೆಂದು ವಿದೇಶಿ ಪ್ರವಾಸಿ ಜಾನ್‌ಪ್ರೈಯರನು ಸಮರ್ಥಿಸುತ್ತಾನೆ. ಇದರಿಂದ ಸೋಮಶೇಖರ ನಾಯಕನು ತನ್ನ ಸರದಾರರಿಂದಲೇ ಕೊಲ್ಲಲ್ಪಟ್ಟನೆಂದು ಮತ್ತು ರಾಣಿ ಚೆನ್ನಮ್ಮಾಜಿ ಚಿಕ್ಕ ವಯಸ್ಸಿನಲ್ಲಿಯೇ ಆಡಳಿತ ಸೂತ್ರವನ್ನು ವಹಿಸಿಕೊಂಡಳೆಂಬುದನ್ನು ತಿಳಿಸುತ್ತದೆ.

ಇದೇ ವಿಷಯವನ್ನು ಕುರಿತು ಫ್ರಾನ್ಸ್‌ನ ಅಬೆಕಾರ್ ಎಂಬ ವಿದೇಶಿ ಪ್ರವಾಸಿಯು ಕ್ರಿ.ಶ.೧೬೭೨ರ ಡಿಸೆಂಬರ್ ತಿಂಗಳಲ್ಲಿ ಒಂದು ವಿಚಿತ್ರ ಪ್ರಸಂಗವೆಂಬುದಾಗಿ ದಾಖಲಿಸಿದ್ದಾನೆ.

ಪ್ರಭಾವಶಾಲಿಗಳಾದ ಬ್ರಾಹ್ಮಣರಿಬ್ಬರ ಪಿತೂರಿಯಿಂದ ಮಂಗಳೂರು ದೊರೆಯನ್ನು ಕೊಲೆ ಮಾಡಿ 'ತಾಯ್‌ಬೀ' ಎಂಬುವನನ್ನು ಸೇನಾಧಿಪತಿಯಾಗಿ ನೇಮಿಸಿದರೆಂದೂ, ಈತ ಹೆಂಡ ಕಟ್ಟುವ(ಈಡಿಗರ) ಜಾತಿಗೆ ಸೇರಿದವನೆಂದು ಉಲ್ಲೇಖಿಸಿದ್ದಾನೆ. ದಿನದಿನಕ್ಕೂ ಬಲಿಷ್ಠನಾದ ಈತ ನಿಜನಾಯಕನಂತೆ ವರ್ತಿಸಲು ಅದೇ ಬ್ರಾಹ್ಮಣರೇ ತನ್ನ ಕೊಲೆಗೆ ಸನ್ನಾಹ ನಡೆಸಿದ್ದಾರೆಂಬ ಸುದ್ದಿ ತಿಳಿದು ರಾಣಿ(ಬಿದನೂರ) ಕಂಡು ಆಕೆಗೆ ರಾಜಭಕ್ತಿಯನ್ನು ಸಲ್ಲಿಸಿದನು. ದೇಶದ ಜನರನ್ನು ಹಿಂಸಿಸುತ್ತಿದ್ದ ಬ್ರಾಹ್ಮಣರನ್ನು ಬಂಧಿಸಿ, ಅವರ ಆಸ್ತಿಪಾಸ್ತಿಯನ್ನೆಲ್ಲ ವಶಪಡಿಸಿಕೊಂಡಳು. ರಾಜ ಸೋಮಶೇಖರನನ್ನು ಕೊಲೆ ಮಾಡಿದವನು 'ನಾರಾಯಣಮಲ್ಯ' ಎಂಬುದಾಗಿ ಪ್ರವಾಸಿ ಕಂಡ ಇಂಡಿಯಾದಲ್ಲಿ ದಾಖಲಾಗಿದೆ. ಕಾರವಾರದ ಇಂಗ್ಲಿಷ್ ಏಜೆಂಟರ ಪ್ರಕಾರ ಬಿಜಾಪುರ ರಾಜ್ಯದ ರಾಯಭಾರಿ ಮತ್ತು ಆತನ ಸಿಪಾಯಿಗಳು, ರಾಜನ ಸರದಾರರು ಆತನ ದುರಾಡಳಿತವನ್ನು ಸಹಿಸಲಾರದೆ ಆತನನ್ನು ಕೊಲೆ ಮಾಡಿದರೆಂದು ಹೇಳಲಾಗಿದೆ. ಡಾ.ಫ್ರೇಸರ್ ಕೂಡ ಈ ಕೊಲೆಯ ವಿಷಯ ಹೇಳುತ್ತಾನೆ. ಅಬೆಕಾರ್ ಹೇಳುವ ಈ 'ನಾರಾಯಣಮಲ್ಯ' ಮಂಗಳೂರಿನಲ್ಲಿ ಬಿದನೂರು ರಾಜ್ಯದ ಪ್ರತಿನಿಧಿಯಾಗಿದ್ದನಲ್ಲದೆ, ಭಟ್ಕಳ ಬಂದರಿನ ಮುಖ್ಯ ವರ್ತಕನೂ ಆಗಿದ್ದನೆಂಬ ವಿಚಾರ ದಾಖಲಾಗಿದೆ.

ಗಂಡು ಇಲ್ಲದ ಅರಮನೆಗೆ ಕನ್ನ ಹಾಕಲು ಶತ್ರುಗಳು ಹೊಂಚು ಹಾಕುತ್ತಿರುವ ವಿಷಮ ಪರಿಸ್ಥಿತಿಯಲ್ಲಿ ರಾಣಿಯು ಶಾಲಿವಾಹನ ಶಕವರ್ಷ ೧೫೯೪ನೆಯ ವಿರೋಧಿಕೃತ ಸಂವತ್ಸರ ಫಾಲ್ಗುಣ ಬಹುಳ ೧೦ರಲ್ಲಿ ಅಂದರೆ ಕ್ರಿ.ಶ.೧೬೭೨ರಲ್ಲಿ ಭುವನಗಿರಿಯಲ್ಲಿ ಪಟ್ಟವೇರಿದಳು. ಹೀಗೆ ವಿಧಿಯುಕ್ತ ಪಟ್ಟಾಭಿಷೇಕವನ್ನು ಹೊಂದಿ ರಾಜ್ಯವಾಳಿದ ಮೊದಲ ರಾಣಿ ಚೆನ್ನಮ್ಮಾಜಿಯೇ ಆಗಿದ್ದಾಳೆ.

ರಾಣಿಯು ತನ್ನ ಪತಿಯ ಅಸಾಧಾರಣ ಮನೋಬಲದಿಂದ ಕೆಳದಿ ರಾಜ್ಯದ ಆಂತರಿಕ ಹಾಗೂ ಬಾಹ್ಯ ಶತ್ರುಗಳನ್ನು ಸದೆಬಡಿದು ಶಾಂತಿ, ಸುವ್ಯವಸ್ಥೆಯನ್ನು ಕಾಪಾಡಿದಳು. ಅರಾಜಕತೆಗೆ ಔಷಧವು ದಂಡೋಪಾಯ ಎಂಬುದನ್ನು ಅರಿತ ಈಕೆ ತನ್ನ ಪತಿಯ ಸಾವಿಗೆ ಕಾರಣನಾದ ಜೈನಧರ್ಮೀಯ ಜಿನ್ನೋಪಂತ ಭಟನನ್ನು ಕೊಲ್ಲಿಸಿದಳು. ವಿಷಮ ಪರಿಸ್ಥಿತಿಯಲ್ಲಿ ಕಳೆದುಕೊಂಡಿರುವ ಅನೇಕ ಪ್ರಾಂತಗಳನ್ನು ಮರಳಿ ಪಡೆದಳು. ಸೋದೆಯ ರಾಮಚಂದ್ರ ನಾಯಕನನ್ನು ಸೋಲಿಸಿ ಬದನೆಗೋಡು, ಬಾಳೂರ್, ಪುಲಿಯಕಣ್ಣ, ಕರವೂರ ಸೀಮೆ, ಶಿರಸಿ ಮತ್ತು 'ಮಿಡಿಜೆಯ ಕೋಟೆ'ಯನ್ನು ವಶಪಡಿಸಿಕೊಂಡಳು. 'ಹುಲಿಗೆರೆ ಕೋಟೆ'ಯನ್ನು ವಶಪಡಿಸಿಕೊಂಡು ಅದಕ್ಕೆ 'ಚನ್ನಗಿರಿ ಕೋಟೆ'ಯೆಂದು ತನ್ನ ಹೆಸರನ್ನು ನಾಮಕರಣ ಮಾಡಿದಳು. 'ಮೊಳಕಾಲ ಬಾಸಿಗನೆಂಬ' ಬಿರುದನ್ನು ಧರಿಸಿದ್ದ ಜರಿಮಲೆಯ ರಾಜನನ್ನು ಸೆರೆಹಿಡಿದಳು. ಬಸವಾಪಟ್ಟಣವನ್ನು ಸ್ವಾಧೀನಪಡಿಸಿ

ಕೊಂಡಳು. ಮೈಸೂರು ಪ್ರಾಂತಕ್ಕೆ ಸೇರಿದ ಕಡೂರು, ಬಾಣಾವರ, ಹಾಸನ, ಬೇಲೂರು, 'ಬೀದರಕೋಟೆಗಳನ್ನು' ವಶಪಡಿಸಿಕೊಂಡಳು. ಮೈಸೂರು ಅರಸನ ದಳವಾಯಿಯಾದ ತಿಮ್ಮಪ್ಪನನ್ನು ಪಲಾಯನಗೊಳಿಸಿ 'ವಸುಧಾರೆಯ ಕೋಟೆ' ಸೀಮೆಗಳನ್ನು ವಶಪಡಿಸಿಕೊಂಡಳು. ಶಿರಸಿ, ಬನವಾಸಿ, ತುಳುರಾಜ್ಯದ ಸಂಸ್ಥಾನಿಕರನ್ನು ಅಡಗಿಸಿ ಕಪ್ಪ-ಕಾಣಿಕೆ ಸಲ್ಲಿಸುವಂತೆ ಮಾಡಿದಳು.

'ಮೊರೆಹೊಕ್ಕವನಂ ಕೊಡುವದು ರಾಜಧರ್ಮಂ' ಎಂಬುದನ್ನು ಅರಿತ ರಾಣಿ ಚೆನ್ನಮ್ಮಾಜಿಯು "ಮೊರೆಹೊಕ್ಕಾರೆಯರಸನೆನಿಪ್ಪ ರಾಮರಾಜನಂ ಪೊರೆದು, ಪ್ರಚ್ಛನ್ನ ವೇಷವಂ ಮಾಡಿ ಸೀಮೊಗ್ಗೆಗಾಗಿ ಗಾಜನೂರು ಪೊಳೆಯಂ ದಾಂಟಿಸಿ ಪಳುವಮಂ ಮರೆಗೊಂಡೆಳದಾರಿ ವಿಡಿದು ಬೊರೆನೆಡೆಹಳ್ಳಿ, ಆಡುಹಳ್ಳಿ, ಕಳಸ, ಖಾಂಡ್ಯ ವಸುಧಾರೆಗಾಗಿ ಸಾಗಿಸಿ ಚಂದಿಯನ್ನು ತಲುಪುವಂತೆ ಮಾಡಿ"[೩] ದಿಲ್ಲಿಯ ಮೊಗಲ್ ಚಕ್ರವರ್ತಿಯನ್ನು ಸಮರ್ಥವಾಗಿ ಎದುರಿಸಿದಳು. ರಾಣಿಯ ಈ ಪ್ರಮುಖ ಸಾಧನೆಯನ್ನು ವಿದ್ವಾಂಸರಾದ ಟಿ.ಎಸ್.ಸೇಜವಾಲ್ಕರರು "A nobel service rendered on a most critical occassion in the life of the maratha state"[೪] ಎನ್ನುತ್ತಾರೆ. ಅಂದರೆ ಮರಾಠ ಸಾಮ್ರಾಜ್ಯದ ಅತೀ ಸಂಕಷ್ಟ ಪರಿಸ್ಥಿತಿಯಲ್ಲಿ ರಾಣಿಯು ಮಾಡಿದ ಈ ಸೇವೆ ಅಮೋಘವಾದುದು, ಅವಿಸ್ಮರಣೀಯವಾದುದಾಗಿದೆ. ಇದೇ ರೀತಿಯಾಗಿ ರಾಣಿಯು ಗೋಲ್ಕೊಂಡದ ನವಾಬನ ಆಸ್ಥಾನದಲ್ಲಿದ್ದ ಪೆದ್ದೂರ ಲಿಂಗಪ್ಪನಿಗೂ ಕೂಡ ಆಶ್ರಯವನ್ನು ನೀಡಿರುವುದು ಆಕೆಯ ಸಾಮರ್ಥ್ಯದ ಶ್ರೇಷ್ಠತೆಯನ್ನು ಬಿಂಬಿಸುತ್ತದೆ.

ಕೆಳದಿ ಸಂಸ್ಥಾನದ ಆಡಳಿತ ಸೂತ್ರವನ್ನು ಹಿಡಿದ ಮತ್ತೊಬ್ಬ ಸಮರ್ಥ ರಾಣಿ ವೀರಮ್ಮಾಜಿ. "ಪಾಳ್ಯದ ಶಿವಲಿಂಗಪ್ಪನ ಕುಮಾರಿಯಾದ ವೀರಮ್ಮಾಜಿ ಬಂಕಾಪುರದ ಹೆಣ್ಣುಮಗಳು."[೫] ಈಕೆಗೆ ಮಕ್ಕಳಿಲ್ಲದ ಕಾರಣ ನಿರ್ವಾಣಯ್ಯರ ಮಗ ಗುರುವಪ್ಪನವರ ಕುಮಾರನಾದ ಚೆನ್ನಪ್ಪನಿಗೆ ಚನ್ನಬಸವಪ್ಪನಾಯಕನೆಂದು ನಾಮಕರಣ ಮಾಡಿ ದತ್ತು ಸ್ವೀಕರಿಸಿ ಸದ್ಧರ್ಮದಿಂದ ವರ್ಷ ೨ ತಿಂಗಳು ೮ ದಿನ ೨೭ ಪರ್ಯಂತಂ ರಾಜ್ಯವಾಳಿದಳೆಂದು ಕೆಳದಿನೃಪವಿಜಯ ಉಲ್ಲೇಖಿಸಿದರೆ, "ರಾಣಿಯೇ ಚನ್ನಬಸವಪ್ಪನನ್ನು ಕ್ರಿ.ಶ.೧೭೫೭ರಲ್ಲಿ ಕೊಲ್ಲಿಸಿದಳೆಂದು ಸೂರ್ಯನಾಥ ಕಾಮತ್‌ರು ಅಭಿಪ್ರಾಯಪಡುತ್ತಾರೆ."[೬] ಆದರೆ ಈ ಬಗ್ಗೆ ಖಚಿತ ದಾಖಲೆಗಳ ಕೊರತೆಯಿದೆ. ಹಾಗಾಗಿ ಚನ್ನ ಬಸಪ್ಪನಾಯಕನು ಅನಾರೋಗ್ಯದಿಂದ ಸಾವನ್ನಪ್ಪಿರಬಹುದೆಂದು ಊಹಿಸಬಹುದಾಗಿದೆ. ಹೀಗೆ ತೆರವಾದ ಸಿಂಹಾಸನಕ್ಕೆ ಅಧಿಪತಿಯನ್ನು

'ಧರೆಯೊಳಗತಿಶಯ ಬಂಕಾ
ಪುರದುಜ್ವಲ ಚೆನ್ನವೀರಪನ ಸುಕುಮಾರಂ
ಧುರ ಧೀರ ಸೋಮಶೇಖರ
ಧರಣೀಶ್ವರವರ್ಯನಮರಗಿರಿ ನಿಭಧೈರ್ಯಂ'

ಎಂಬಂತೆ ರಾಣಿಯು ತನ್ನ ಸೋದರಮಾವನಾದ ಬಂಕಾಪುರದ ಪಟ್ಟಣಶೆಟ್ಟಿ ಚನ್ನವೀರಪ್ಪನ ಕನಿಷ್ಠ ಪುತ್ರನಿಗೆ ಸೋಮಶೇಖರನಾಯಕನೆಂದು ನಾಮಕರಣ ಮಾಡಿ ಕ್ರಿ.ಶ.೧೭೫೮ರಲ್ಲಿ ಆತನ ಹೆಸರಿನಲ್ಲಿ ಆಡಳಿತ ನಡೆಸಿದಳು. ಮೊದಲು ಆರೆಯರ ಸೈನ್ಯವನ್ನು ಸೋಲಿಸಿ, ಪಶ್ಚಿಮ ಸಮುದ್ರ ತೀರದಲ್ಲಿ ಶೋಭಿಸುವ ಮಿಡಿಜೆಯ ಕೋಟೆಯನ್ನು ಮತ್ತೆ ಸ್ವಾಧೀನಪಡಿಸಿಕೊಂಡಳು.

ರಾಣಿಯು ಆಳುತ್ತಿದ್ದ ನಗರದ ಸಂಸ್ಥಾನವನ್ನು ವಶಪಡಿಸಿಕೊಳ್ಳುವ ದುರಾಸೆಯಿಂದ ಹೈದರಾಲಿಯು ಚಿತ್ರದುರ್ಗದ ಮದಕರಿನಾಯಕನ ಸಹಾಯವನ್ನು ಪಡೆದನು. ರಾಣಿಯು ಆಳುತ್ತಿದ್ದ ಸೀಮೆಗಳನ್ನು ವಶಪಡಿಸಿಕೊಳ್ಳುತ್ತ ಮಾವಿನಹೊಳೆಗೆ ಬಂದು ಬೀಡುಬಿಟ್ಟರು. 'ರಾಣಿ ವೀರಮ್ಮಾಜಿಯು ನಿರ್ವಾಹವಿಲ್ಲದೆ ಹೈದರನೊಡನೆ ಶಾಂತಿ ಒಪ್ಪಂದ ಮಾಡಲು ಶಂಕರ ನಾರಾಯಣನನ್ನು ಕಳಿಸಿದಳು. ಹೈದರನು ಯುದ್ಧ ನಿಲ್ಲಿಸಲು ೨೦ ಲಕ್ಷ ರೂ. ಕೊಡಬೇಕೆಂದನು. ಆದರೆ ರಾಣಿಗೆ ಅಷ್ಟೊಂದು ಹಣವಿರದೇ ೪ ಲಕ್ಷ ರೂ. ಕೊಡುವುದಾಗಿ ತಿಳಿಸಿದಳು. ಇದಕ್ಕೆ ಹೈದರನು ಒಪ್ಪಲಿಲ್ಲವೆಂಬುದನ್ನು ಇಂಗ್ಲಿಷ್ ಅಧಿಕಾರಿ ಜಾರ್ಜ್ ರೋಡಿಗೇರನು ಕ್ರಿ.ಶ.೧೭೬೩ರ ಜನೇವರಿಯಲ್ಲಿ ಬರೆದ ಪತ್ರವು ಸಮರ್ಥಿಸುತ್ತದೆ.

ರಾಣಿಯು ಹೈದರನ ವಿರುದ್ಧ ಯುದ್ಧಕ್ಕೆ ಸಕಲ ಸಿದ್ಧತೆಯನ್ನು ಮಾಡಿಕೊಂಡಳು. ಸವಣೂರು ನವಾಬನ ಸಹಾಯವನ್ನು ಪಡೆದು, ಸು.೨೭ ದಿನಗಳು ಭಯಾನಕ ಯುದ್ಧ ನಡೆಯಿತು. ಆರಂಭದಲ್ಲಿ ಹೈದರನಿಗೆ ಸೋಲಾಗುವ ಸೂಚನೆಗಳಿದ್ದರೂ, ಹೈದರನ ಅಪಾರ ಸೈನ್ಯದಿಂದಾಗಿ ರಾಣಿಗೆ ಸೋಲಾಗುವ ಸೂಚನೆಗಳು ಕಂಡುಬಂದವು. ಹೀಗಾಗಿ ರಾಣಿ ತನ್ನ ಸೈನ್ಯ, ಸಾಕು ಮಗನನ್ನು ಕರೆದುಕೊಂಡು ಕವಲೇದುರ್ಗಕ್ಕೆ ಹೋಗಿ ನಂತರ ಬಲ್ಲಾಳರಾಯ ದುರ್ಗಕ್ಕೆ ಬಂದಳು. ಅಲ್ಲಿ 'ಪೀರ್‌ಜಾವೇದ'ನ ವಿಶ್ವಾಸದ್ರೋಹದಿಂದ ಹೈದರನು ರಾಣಿಯನ್ನು ಬಂಧಿಸಿ ಸೆರೆಮನೆಯಲ್ಲಿಟ್ಟನು. ೭-೩-೧೭೬೩ರಲ್ಲಿ ಬಿದನೂರಿಗೆ 'ಹೈದರನಗರವೆಂದು' ಹೆಸರಿಟ್ಟನೆಂದು, ಸು.೧೫ ದಿನಗಳವರೆಗೆ ನಗರದಲ್ಲಿದ್ದ ಎಲ್ಲ ಐಶ್ವರ್ಯಗಳನ್ನು ದೋಚಿದನೆಂದು, ದೋಚಿದ ಐಶ್ವರ್ಯವೇ ಸು.೧೨ ಕೋಟಿ ಪಗೋಡಗಳಷ್ಟು ಮೌಲ್ಯವಿತ್ತೆಂದು ಒಂದು ಹೇಳಿಕೆಯಿದೆ. ಇದು ಕೆಳದಿಯ ಸಮೃದ್ಧತೆಯ ಅಗಾಧತೆಗೆ ಸಾಕ್ಷಿಯಾಗಿದೆ.

ಒಂದು ಹೇಳಿಕೆಯ ಪ್ರಕಾರ ಮರಾಠಾ ಮಾಧವರಾಯನ ಸಹಾಯದಿಂದ ಬಿಡುಗಡೆಗೊಂಡ ವೀರಮ್ಮಾಜಿಯು ಪುಣೆಗೆ ಹೋಗುವ ಮಾರ್ಗಮಧ್ಯದಲ್ಲಿಯೇ ಅಸುನೀಗಿದಳೆಂದೂ, ಮತ್ತೊಂದು ಹೇಳಿಕೆಯ ಪ್ರಕಾರ ಮಹಾ ಶಿವಭಕ್ತೆಯಾದ ರಾಣಿಯು ಸೋಲಿನ ಅವಮಾನ ಸಹಿಸದೇ ತನ್ನ ಇಷ್ಟಲಿಂಗವನ್ನು ನುಂಗಿ ಅಸುನೀಗಿದಳೆಂಬ ಅಂಶ ತಿಳಿದುಬರುತ್ತದೆ. ಖಚಿತವಾದ ಆಧಾರಗಳ ಕೊರತೆಯ ಕಾರಣವಾಗಿ ಮೊದಲಿನ ಹೇಳಿಕೆ ಹೆಚ್ಚು ನಂಬಲರ್ಹವೆನಿಸುತ್ತದೆ. ರಾಣಿ ವೀರಮ್ಮಾಜಿಯು

ಪೂನಾಕ್ಕೆ ಹೋಗುವಾಗ ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನ ಉಜ್ಜನಿಯಲ್ಲಿ ತೀರಿಕೊಂಡಿದ್ದು, ಉಜ್ಜನಿ ಮಠದ ಆವರಣದಲ್ಲಿ ರಾಣಿಯ ಸಮಾಧಿಯನ್ನು ಮಾಡಲಾಯಿತು. ಎಂದು ಐತಿಹ್ಯವೊಂದು ಸಮರ್ಥಿಸುತ್ತದೆ.

'ಪೌರುಷವೃತ್ತಿ ಪೌರುಷ ಲೋಕವೊಂದೇ
ಎಂದ ಮಾತಿಗೆ ತಂದೆ ಸಂಚಕಾರ
ಹೆಣ್ಣು ಪೌರುಷ ಪ್ರತಿಭೆಯಾಗಳೆ
ದೇಶಾಭಿಮಾನದ ದೃಢ ಚಿತ್ತದಿ ಬೆಳೆಸಿದೆ
ವನಿತೆಯ ಸೇನೆ ಕಟ್ಟಿ ಕ್ರಿಯಾಶೀಲೆಯಾದೆ
ವೀರವನಿತೆಯ ಚಿಂತೆಯಲಿ ನಿರ್ಮಿಸಿದೆ ಸುವರ್ಣದೃಷ್ಟಿ'

ಎಂದು ಕವಯಿತ್ರಿ ಶೈಲಜಾ ಉಡಚಣರು ಹೊಗಳಿದಂತೆ ೨೦೦೦ ಮಹಿಳಾ ಸೈನ್ಯವನ್ನು ಕಟ್ಟಿ, ತನ್ನ ರಾಜ್ಯ ರಕ್ಷಣೆ ಮಾಡಿದ ವೀರರಾಣಿ ಬೆಳವಡಿ ಮಲ್ಲಮ್ಮ ಜಾಗತಿಕ ಮಟ್ಟದಲ್ಲಿ ಕೀರ್ತಿಯನ್ನು ಪಡೆದಿದ್ದಾಳೆ. ಈಶಪ್ರಭುವಿನ ಪತ್ನಿಯೂ, ಸ್ವಾದಿ ಮಧುಲಿಂಗ ನಾಯಕನ ಮಗಳೂ ಆದ ಈಕೆ ವೀರಮ್ಮಾಜಿಯ ಮಗಳಾಗಿ "ಶಾಲಿವಾಹನ ಶಕೆ ೧೫೮೨ನೇ ಸಂವತ್ಸರ ಶ್ರಾವಣ ಕೃಷ್ಣಪಕ್ಷ ಅಷ್ಟಮಿಯ ದಿನ ಅಂದರೆ ಕ್ರಿ.ಶ.೧೬೬೦ರಲ್ಲಿ ಜನಿಸಿದ ಮಲ್ಲಮ್ಮಾಜಿಯು ಕತ್ತಿವರಸೆ, ಧನುರ್ವಿದ್ಯೆಯಲ್ಲಿ ದಿಟ್ಟೆಯಾಗಿದ್ದಳು. ಗುರಿಯಿಟ್ಟು ಭಲ್ಲೆಯನ್ನು ಸರಿಯಾಗಿ ಎಸೆಯುತ್ತಿದ್ದಳು. ಬಾಲ್ಯದಿಂದಲೂ ಯುದ್ಧ ಕಲೆಯಲ್ಲಿ ನಿಷ್ಣಾತಳಾಗಿದ್ದಳು.

ಹೂಲಿಯ ಸಿಂಹಾಸನಾಧಿಪತಿಯಾದ ಶ್ರೀ ಸಿದ್ಧವೀರಯೋಗಿ ಮಹಾರಾಜರ ಮಾತಿನಂತೆ ಮಲ್ಲಮ್ಮಾಜಿಯು ಪರಾಕ್ರಮಶಾಲಿಯೂ, ಕೀರ್ತಿವಂತಳು ಆದಳು. ಅತೀ ಹೆಚ್ಚು ಹುಲಿಯನ್ನು ಕೊಂದ ಬೆಳವಡಿಯ ಈಶಪ್ರಭುವಿನೊಂದಿಗೆ ಸ್ವಾದಿ ರಾಜಧಾನಿಯಲ್ಲಿ ಬ್ರಹ್ಮ ವಿವಾಹದಂತೆ ಲಗ್ನ ಸಮಾರಂಭವು ವೈಭವದಿಂದ ಜರುಗಿತು.

ಈಶಪ್ರಭುವಿನ ತಂದೆಯಾದ ಚಂದ್ರಶೇಖರನು ಕ್ರಿ.ಶ.೧೬೩೮ರಲ್ಲಿ ಮರಣ ಹೊಂದಿದ ಮೇಲೆ ಈಶಪ್ರಭುವು ೨೮ನೇ ದೊರೆಯಾಗಿ ಸಿಂಹಾಸನವೇರಿದನು. ಈಶಪ್ರಭುವಿನ ಅವಧಿಯಲ್ಲಿ ಬೆಳವಡಿ ಸಂಸ್ಥಾನವು ವಿಸ್ತಾರವಾಯಿತು. ಶಿವಾಜಿಯು ದಕ್ಷಿಣದ ತಂಜಾವೂರನ್ನು ಗೆದ್ದು, ಬೆಳಗಾವಿಯ ಮೂಲಕ ರಾಯಗಡಕ್ಕೆ ಹೋಗುವಾಗ ಸಂಪಗಾವಿಯ ಬಳಿ ಬೀಡು ಬಿಟ್ಟಿದ್ದ ಈಶಪ್ರಭು ಕೋಟೆಯನ್ನು ಭದ್ರಪಡಿಸಿ ಯುದ್ಧಕ್ಕೆ ತಕ್ಕ ಸಿದ್ಧತೆ ಕೈಗೊಂಡನು. ಶಿವಾಜಿಯು ಬೆಳವಡಿಗೆ ಮುತ್ತಿಗೆ ಹಾಕಿ, ದವಸ-ಧಾನ್ಯಗಳ ಪೂರೈಕೆಯನ್ನು ನಿಲ್ಲಿಸಿದ. ಎರಡೂವರೆ ತಿಂಗಳು ಕೋಟೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಅದು ವಿಫಲವಾಯ್ತು. ದಾದಾಜಿ ರಘುನಾಥ

ಪ್ರಭು ಮಹಾಡಕರ ಎಂಬ ಮರಾಠ ದಳಪತಿಯು ಕೋಟೆಯ ಸಮೀಪದ ಮನೆಗಳಿಗೂ, ಹುಲ್ಲು, ದವಸ ಧಾನ್ಯಗಳನ್ನು ಇಟ್ಟಿದ್ದ ಮನೆಗಳಿಗೂ ಬೆಂಕಿ ಹಚ್ಚಿದನೆಂದು, ಅದನ್ನು ನಂದಿಸುವ ಪ್ರಯತ್ನದಲ್ಲಿದ್ದಾಗ ಈಶಪ್ರಭು ಮರಾಠರಿಂದ ಗಾಯಗೊಂಡು, ವಿಹ್ವಲವಾಗಿ ಮೃತನಾದನು. ಅವನ 'ಪತ್ನಿ ಸಾವಿತ್ರಿಬಾಯಿಯು ಪರಮಚತುರೆ, ಬುದ್ಧಿವಂತೆ, ಪರಾಕ್ರಮಿಯಾಗಿದ್ದಳು."[೭]

ರಾಣಿ ಮಲ್ಲಮ್ಮಾಜಿಯು '೪೦೦-೫೦೦' ಜನ ಸೇನಾ ಸಮೂಹದೊಂದಿಗೆ ಬಂದು, ಯುದ್ಧ ಕೌಶಲ್ಯದಿಂದ, ಚಾತುರ್ಯದಿಂದ ಒಂದು ಪ್ರಹರದವರೆಗೆ ಹೋರಾಡಿದಳು. ಪತಿಯ ದುಃಖವನ್ನು ಮರೆತು ಖಡ್ಗ ಜಳಪಿಸಿದಳು. ಇದೇ ಸಂದರ್ಭವನ್ನು ಸಾಧಿಸಿ ಮರಾಠರ ದಂಡನಾಯಕನಾದ ದಾದಾಜಿ ಹಿಂದಿನಿಂದ ಬಂದು ಮಲ್ಲಮ್ಮ ಕುಳಿತ ಕುದುರೆಯ ಹಿಂಗಾಲುಗಳನ್ನು ಕತ್ತರಿಸಿದ. ಕುದುರೆಯ ಮೇಲಿಂದ ಕೆಳಗುರುಳಿದರೂ ಮಲ್ಲಮ್ಮ ಹೆದರದೆ ಭಾವಾವೇಶದಿಂದ ನಿಂತುಕೊಂಡೇ ಯುದ್ಧ ಮಾಡಿದಳು. ಮರಾಠ ಸೈನ್ಯವನ್ನು ಸೋಲಿಸಿದಳು. ಈ ವಿಜಯದಿಂದ ಆಶ್ಚರ್ಯ ವ್ಯಕ್ತಪಡಿಸಿದ ಆಂಗ್ಲ ವರ್ತಕನು "He shivaji is at present be sieging a fort where by relation of their own people came from him. he has suffered more disgrace then ever he did from all power of Moghal or the Deccanis(Bijapuries) he who hath conquered so many kingdoms is not able to reduce this woman Desai"[೮] ಎಂದು ರಾಜಾಪುರದಲ್ಲಿಯ ಇಂಗ್ಲಿಷ್ ವರ್ತಕನು ತಾ. ೨೮-೨-೧೬೭೮ನೇ ಇಸ್ವಿಯಲ್ಲಿ ಬರೆದ ಈ ಪತ್ರ ವಿಶಿಷ್ಟವಾದುದಾಗಿದೆ. ಅನೇಕ ರಾಜ್ಯಗಳನ್ನು ಗೆದ್ದು, ತನ್ನ ಪರಾಕ್ರಮವನ್ನು ಮೆರೆದ ಶಿವಾಜಿಯು ಒಬ್ಬ ಮಹಿಳಾ ಕಲಿಯನ್ನು ಗೆಲ್ಲಲಾಗದಿರುವುದು ಅವಮಾನದ ಸಂಗತಿಯೇ ಆಗಿದೆ.

ಮಲ್ಲಮ್ಮಾಜಿಯು ಮಹಿಳಾ ಸೈನಿಕರನ್ನು ಹೊಂದಿದ್ದಳು. ಒಬ್ಬ ಸೈನಿಕನು ಪುರುಷ ವೇಷದಲ್ಲಿಯ ಗೌರಮ್ಮನ ಮೇಲೆ ಪ್ರಹಾರ ಮಾಡಿದಾಗ, ಗೌರಮ್ಮ ವೀರಮರಣವನ್ನಪ್ಪಿದಳು. ರಾಣಿಯು ಆ ಸೈನಿಕನನ್ನು ಕೊಂದುಹಾಕಿದಳು. ರಾಣಿಯ ಯುದ್ಧಚಾಪಲ್ಯ ಅಲೌಕಿಕ ಹಾಗೂ ಭಯಂಕರವಾಗಿತ್ತು.[೯] ಛತ್ರಪತಿಯು "ಅವ್ವ ತಮ್ಮಂಥವರು ವೀರಪುರುಷರಲ್ಲಿ ಯಾರು ಇಲ್ಲ ನನ್ನನ್ನು ಕ್ಷಮಿಸು ತಾಯೆ"[೧೦] ಎನ್ನುವನು. ಇದು ರಾಣಿಯ ವೀರತ್ವದ ಸಂಕೇತವಾಗಿದೆ. ರಾಣಿ ಮಲ್ಲಮ್ಮಳಿಗೆ ಶಿವಾಜಿಯು ಶರಣಾಗತನಾದ ಸ್ಥಳ ಲೋಕೂರ ದ್ಯಾಮವ್ವಳ ಗುಡಿಯು ಇಂದಿಗೂ ಲೋಕೂರಿನಲ್ಲಿದೆ. "ಶಿವಾಜಿ-ಮಲ್ಲಮ್ಮಾಜಿ ಬಾಂಧವ್ಯದ ಸವಿನೆನಪಿಗಾಗಿ ಯಾದವಾಡದಲ್ಲಿ ಅಮೂಲ್ಯ ಶಿಲ್ಪವೊಂದು ನಿಂತಿದೆ."[೧೧] ಹೀಗೆ ಬೆಳವಡಿಯ ಸಮರ್ಥ ರಾಣಿಯಾದ ಮಲ್ಲಮ್ಮಾಜಿಯು ಸು.೩೫ ವರ್ಷಕಾಲ ಶಿವಾಜಿಯ ಯುದ್ಧಾನಂತರ ತುಂಬು ಬಾಳನ್ನು ಸಾಗಿಸಿದಳು. ಕ್ರಿ.ಶ.೧೭೧೩ರಲ್ಲಿ

ಆಕೆ ದಾನ ಕೊಟ್ಟ ಸನದಿನಿಂದ "ಈ ಹೊತ್ತಿಗೆ ನಾಗಭೂಷಣನಿಗೆ ೩೬ ವರ್ಷಗಳು. ಅವನ ತಾಯಿ ಮಲ್ಲಮ್ಮನಿಗೆ ೫೪ ವರ್ಷಗಳಾಗಿದ್ದವು. ಇದಾದ ೪ ವರ್ಷಗಳು ಅಂದರೆ ಕ್ರಿ.ಶ.೧೭೧೭ರಲ್ಲಿ ೫೮ನೇ ವಯಸ್ಸಿನಲ್ಲಿ ರಾಣಿಯು ಮರಣ ಹೊಂದಿದಳು."[೧೨]

ರಾಣಿ ಮಲ್ಲಮ್ಮಾಜಿಯ ತರುವಾಯ ಮಗನಾದ ನಾಗಭೂಷಣ ಕ್ರಿ.ಶ.೧೬೯೮ರಿಂದ ೧೭೨೮ರವರೆಗೆ ಆಳ್ವಿಕೆ ಮಾಡಿದನು. ರಾಣಿಯ ಕಾಲದಲ್ಲಿ ೩೨೦ ಹಳ್ಳಿಗಳಿದ್ದರೆ, ಇವನ ಕಾಲಕ್ಕೆ ೬೩ ಹಳ್ಳಿಗಳು ಮಾತ್ರ ಉಳಿದವು. ನಂತರ ಕ್ರಿ.ಶ.೧೭೨೮ರಲ್ಲಿ ನಾಗಭೂಷಣನ ಮಗ ಸಿದ್ಧಲಿಂಗ ನಾಯಕನ ಕಾಲಕ್ಕೆ ಕೇವಲ ೧೮ ಹಳ್ಳಿಗಳು ಮಾತ್ರ ಉಳಿದವು.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅನೇಕ ಸಣ್ಣಪುಟ್ಟ ಸಂಸ್ಥಾನಗಳು ಪ್ರವರ್ಧಮಾನಕ್ಕೆ ಬಂದವುಗಳಲ್ಲಿ ಸಿರಸಂಗಿ ಸಂಸ್ಥಾನವೂ ಒಂದು. ಸಿರಸಂಗಿ ಸಂಸ್ಥಾನದ ಒಡೆತನವನ್ನು ಸಮರ್ಥವಾಗಿ ಸಾಗಿಸಿಕೊಂಡು ಬಂದ ಸಮರ್ಥ ರಾಣಿ ಚೆನ್ನಮ್ಮ. ರಾಜಕೀಯ ಕ್ಷೇತ್ರಕ್ಕೆ ನೀಡಿದ ಕೊಡುಗೆ ವಿಶೇಷವಾದುದು. ಸಿರಸಂಗಿ ಸಂಸ್ಥಾನವನ್ನು ಕ್ರಿ.ಶ.೧೩೦೧ರಿಂದ ಕ್ರಿ.ಶ. ೧೯೦೬ರವರೆಗೆ ಒಟ್ಟು ಆಳಿದ ೩೨ ವ್ಯಕ್ತಿಗಳಲ್ಲಿ ೫ ಜನ ರಾಣಿಯರು ಆಳಿದುದು ವಿಶೇಷ ವಾದುದಾಗಿದೆ. ವಾರಸುದಾರನಿಲ್ಲದ ಸಂಸ್ಥಾನವನ್ನು ಕೊಕಟನೂರ ದೇಸಾಯಿಯು ಕಬಳಿಸಲು ಹೊಂಚುಹಾಕುತ್ತಿರುವ ವಿಷಮ ಸ್ಥಿತಿಯಲ್ಲೇ ರಾಣಿ ಅಧಿಕಾರ ವಹಿಸಿಕೊಂಡಳು. ರಾಣಿಯು ತನ್ನ ಪತಿಯಾದ ಲಿಂಗನಗೌಡನ ಆಡಳಿತಾವಧಿಯಲ್ಲಿಯೇ ಪತಿಗೆ ಆಡಳಿತದಲ್ಲಿ ಸಹಾಯ-ಸಹಕಾರ ನೀಡುತ್ತಿದ್ದಳು. ಕೊಣ್ಣೂರ ತರಫ್ ದೇಸಗತಿಯು ಆನುವಂಶಿಕವಾಗಿ ನವಿಲ್ಗುಂದ ದೇಸಾಯರಿಗೆ ದೊರೆತಿದ್ದು, ದೊರೆ ಲಿಂಗನಗೌಡ ದೇಸಾಯಿಯು ತೊಂದರೆಗೆ ಸಿಲುಕಿದಾಗ ಖಾನ ಆಜಂ ಕಿಲಿತ್‌ಖಾನನ ಕಾರ್ಯ ನಿರ್ವಾಹಕನಾಗಿದ್ದ "ಮಲ್ಹಾರ ಅಂಬಾಜಿ'ಯು ಪ್ರಯತ್ನಪಟ್ಟು ದೊರೆಯನ್ನು ರಕ್ಷಿಸಿದ ಕಾರಣವಾಗಿ ಚೆನ್ನವ್ವ ದೇಸಾಯಣಿಯು 'ಮಲ್ಹಾರ ಅಂಬಾಜಿ'ಗೆ ವೈಯಕ್ತಿಕವಾಗಿ ೫೦,೦೦೦ ರೂ. ಕೊಟ್ಟಳೆಂದು"[೧೩] ರಾಣಿಯು ಸಮಯೋಚಿತ ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ವತಂತ್ರವಿದ್ದಿತೆಂಬುದನ್ನು ಗ್ರಹಿಸಬಹುದು.

ಕೊಲ್ಲಾಪುರದ ಮಹಾರಾಜ ಸಂಭಾಜಿ ಹಾಗೂ ಸತಾರೆ ಶಾಹೂ ಮಹಾರಾಜನಿಗೂ 'ಮರಾಠಾ ಪ್ರತಿನಿಧಿತ್ವ' ಕುರಿತು ಉಂಟಾದ ಕಲಹ ಕ್ರಿ.ಶ.೧೭೩೦ರಲ್ಲಿ ಬಗೆಹರಿಸಿದಳು. ತೋರಗಲ್ಲಿನ ಒಡೆಯ ಮರಾಠರಿಗೆ ಕಪ್ಪ ಕೊಡಲು ನಿರಾಕರಿಸಿದಾಗ ಛತ್ರಪತಿ ಶಂಭು ಸಿರಸಂಗಿ ಚೆನ್ನಾಂಬೆಗೆ ನಿರೂಪ ಕಳಿಸಿ ನೆರವು ಕೇಳಿದ. ಆಗ ಚೆನ್ನಾಂಬೆ ಮರಾಠಾ ಸೈನ್ಯಕ್ಕೆ ತನ್ನ ಸಂಸ್ಥಾನದ ಸೈನಿಕರನ್ನು ಕಳುಹಿಸಿ, ತೋರಗಲ್ಲು ಕೋಟೆ ಮತ್ತು ಆ ಪ್ರದೇಶದ ಜನತೆಯ ರಕ್ಷಣೆಯ ಕಾರ್ಯದಲ್ಲಿ ಸಂಪೂರ್ಣ ಸಹಕಾರವಿತ್ತಳು. ಇದರ ಫಲವಾಗಿ ಸಂಭಾಜಿಯು "ಕ್ರಿ.ಶ.೧೭೩೦ರಲ್ಲಿ

ಪರಸಗಡ ತಾಲ್ಲೂಕಿನ ಸಂಗ್ರೇಶಕೊಪ್ಪ, ಬಸರಗಿ, ಬೆನಕಟ್ಟಿ ಗ್ರಾಮಗಳನ್ನು ಉಂಬಳಿಯಾಗಿತ್ತನು."[೧೪] ಚೆನ್ನಾಂಬೆ ತನ್ನ ನಿಷ್ಠಾವಂತ ಶೂರ ಸೈನಿಕ ಪಡೆಯನ್ನು ಕೂಡಿ, ಯಾವಗಲ್ಲನ್ನು ಮುತ್ತಿ, ವೆಂಕಟಗಿರಿಯ ದರೋಡೆಕೋರರ ಪುಂಡರ ಗುಂಪನ್ನು ಸದೆಬಡಿದಳು. "ತಾಯಿಯ ರುದ್ರರೂಪ ದಿಂದ ಜಾಯಗೊಂಡ ಪ್ರೇರಣೆ ಪಡೆದು ಪರಾಕ್ರಮದಿಂದ ಹೋರಾಡಿದನು. ವೆಂಕಟಗಿರಿಯು ಪಲಾಯನಗೈದು ಸೋಲೊಪ್ಪಿ ಶರಣಾಗತನಾದನು."[೧೫] ಹುಯಿಲಗೋಳದ ದೇಸಗತಿಯು ಸವಣೂರು ನವಾಬರಿಗೆ ನಿಷ್ಠರಾಗುವುದಿಲ್ಲವೆಂದಾಗ ಚೆನ್ನಾಂಬೆಯ ಸೈನಿಕರು ಜೊತೆಗೂಡಿ ನವಾಬನ ದಂಡು ಹುಯಿಲಗೊಳದ ದೇಸಗತಿಯ ಬೆಂಬಲಕ್ಕಿದ್ದ ಪುಂಡರ ಮೇಲೆ ದಾಳಿ ಮಾಡಿತು. ಹುಯಿಲಗೋಳದಲ್ಲಿ ನಡೆದ ಯುದ್ಧದಲ್ಲಿ ಚೆನ್ನಾಂಬೆ ಮತ್ತು ಜಾಯಗೊಂಡ ನೇರವಾಗಿ ಹೋರಾಡಿ ನವಾಬರ ಪ್ರತಿಷ್ಠೆಗೆ ಕಳಸವಿಟ್ಟರು. ನವಾಬನು ಸವದತ್ತಿ, ಕರಿಹಟ್ಟಿ, ಹಂಚಿನಾಳ, ಗುರ್ಲಹೊಸೂರು ಮುಂತಾದ ಗ್ರಾಮಗಳನ್ನು ಚೆನ್ನಾಂಬೆಗೆ ಕಾಣಿಕೆ ಕೊಟ್ಟನು.

ಜನತೆಯ 'ಭಾಗ್ಯದೇವತೆ' ಎನಿಸಿಕೊಂಡ ರಾಣಿಯು ಕ್ರಿ.ಶ.೧೭೩೪ರಲ್ಲಿ ಜಾಯಗೊಂಡನಿಗೆ ಪಟ್ಟಕಟ್ಟಿ ತಾನು ಬೆಂಬಲವಾಗಿ ನಿಂತಳು. ಮುಂದೆ ಸು.೧೦ ವರ್ಷದವರೆಗೂ ಸಂಸ್ಥಾನದ ಉಜ್ವಲ ಬೆಳವಣಿಗೆ ಕಂಡು ಸಂತೃಪ್ತ ಜೀವನ ಸಾಗಿಸಿದ ರಾಣಿಯು ಸು.೧೭೪೪ರಲ್ಲಿ ಕಣ್ಮರೆಯಾದಳು. ರಾಣಿಯ ತೇಜೋಮಯ ವ್ಯಕ್ತಿತ್ವ ಜಾಯಗೊಂಡನಿಗೆ ನಿರಂತರ ಸ್ಫೂರ್ತಿದಾಯಕವಾದುದಾಗಿದೆ.

ರಾಯವ್ವ, ಸಿದ್ಧಲಿಂಗವ್ವ ದೇಸಾಯಣಿಯರು ಕ್ರಿ.ಶ.೧೮೧೭ರಿಂದ ಕ್ರಿ.ಶ.೧೮೩೩ರವರೆಗೆ ಆಳಿದರೆಂದು, ಕ್ರಿ.ಶ.೧೮೩೮ರಿಂದ ೧೮೪೧–೧೮೫೪ರವರೆಗೆ ಸಿದ್ಧಲಿಂಗವ್ವ, ಚೆನ್ನಾಂಬೆಯರು ಆಳಿದರೆಂಬ ದಾಖಲೆಯ ಹೊರತಾಗಿ ಇವರ ಬಗೆಗೆ ಹೆಚ್ಚಿನ ವಿವರಗಳೇನೂ ಲಭ್ಯವಿಲ್ಲ.

ಉತ್ತರ ಕನ್ನಡ ಜಿಲ್ಲೆ ಸಿದ್ಧಾಪುರ ತಾಲ್ಲೂಕು ಪ್ರದೇಶವನ್ನೊಳಗೊಂಡ ಒಂದು ಪುಟ್ಟ ಅರಸೊತ್ತಿಗೆಯಾದ ಬಿಳಗಿ ಅರಸೊತ್ತಿಗೆಯೂ ಕೂಡ ಕನ್ನಡ ನಾಡು, ನುಡಿಗಾಗಿ ಶ್ರಮಿಸಿದೆ. ಕ್ರಿ.ಶ.೧೪೭೫ರಿಂದ ೧೭೯೯ರವರೆಗೆ ರಾಜ್ಯಭಾರ ನಡೆಸಿದ ಇವರು ರಾಜಕೀಯವಾಗಿ ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದಾರೆ.

ಮೌನಘಂಟೆಯ ರಾಣಿ ಚೆನ್ನಮ್ಮದೇವಿ ಇವರಿಗೆ ಮಕ್ಕಳಾಗಿರಲಿಲ್ಲ. ಇಂಥ ಸದವಕಾಶವನ್ನು ಕಾಯುತ್ತಿದ್ದ ಕೆಳದಿ ಶಿವಪ್ಪನಾಯಕನು ಬಿಳಗಿ ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಇಂಥ ಸಂದರ್ಭದಲ್ಲಿ "ಮೌನಘಂಟೆಯ ಸಹೋದರಿಯಾದ ಘಂಟಮ್ಮಾಜಿಯು ತಾನು ಅರಸು ಮನೆತನದ ಕುಡಿಯೆಂದು ತನಗೆ ರಾಜ್ಯ ಸಲ್ಲಿಸಬೇಕೆಂದು ಬಾಳ್ಗೋಡಿಗೆ ಬಂದು ಅಧಿಕಾರಕ್ಕೆ

ಸೆಣಸಿದ್ದನ್ನು ಶಾಸನವು ತಿಳಿಸುತ್ತದೆ.”[೧೬] ಈಕೆಯನ್ನು ಶಾಸನವೊಂದು ‘ಶಿವಾಚಾರ ಸಂಪನ್ನೆ’ ಎಂದು ಹೊಗಳುತ್ತದೆ.

> “ಕೆಳದಿ ಶಿವಪ್ಪನಾಯಕರಾದ ಶುಭ್ರಪುರ
> ದಿಳೆಗಧಿಕರಿಲ್ಲೆನೆ ಕುಮಾರತಿಯು ಘಂಟೆಮ್ಮ
> ಸಲುವುದೆಮಗೀ ರಾಜ್ಯಮೆಂದು ಬಾಳ್ಗೋಡಿಗೆ ಬಂದು ವಿಧಿದೇವಿಯಂತೆ
> ಪ್ರಳಯ ಕಾಲದ ದುರ್ಗೆಯಂತೆ ಬಾಧಿಸುತಿರಲ್
> ಚಳಕದಿಂ ಸಾಮಾಜಿಕಗರ್ಣಡಿ ಕ್ಯಾದಿಗೆಯ
> ನಿಳಯದಿಂ ಕುವರನಂ ತಂದು ಪಟ್ಟವಗಟ್ಟಿ ಮೈಯಿಕ್ಕಿ ಕಾಣ್ಕೆಯಿತ್ತು.
> ಸಲುವ ಶಿವಪ್ಪನಾಯಕರುಮೆಂಬಭಿಧಾನವಿಟ್ಟು”[೧೭]

ಎಂಬ ವಿಷಯವಿದೆ. ಅದೇ ಸಮಯಕ್ಕೆ ಪ್ರಜೆಗಳಲ್ಲಿ ಕ್ಯಾದಗೆ ಮನೆತನದ ಬಾಲಕನೊಬ್ಬನಿಗೆ ಶಿವಪ್ಪನಾಯಕನೆಂದು ಹೆಸರಿಟ್ಟು ಕ್ರಿ.ಶ.೧೬೩೧ರಲ್ಲಿ ಪಟ್ಟಗಟ್ಟಿದರೆಂದು, ಆ ಬಾಲಕನನ್ನು ದತ್ತು ತೆಗೆದುಕೊಳ್ಳಲು ರಾಣಿ ಘಂಟೆಮ್ಮಾಜಿ ಹಾಗೂ ರಾಣಿ ಚೆನ್ನಮ್ಮದೇವಿಯರಿಗೆ ಒಪ್ಪಿಗೆ ಇತ್ತೋ ಇಲ್ಲವೋ ಎಂಬ ವಿವರ ತಿಳಿದುಬರುವುದಿಲ್ಲ.

ಬಿಳಗಿ ಅರಸೊತ್ತಿಗೆಯಲ್ಲಿ ವಳಿತ ಅಥವಾ ಸೀಮಾ ಎಂಬ ವಿಭಾಗಗಳು ಇದ್ದವು. ನಾಡು ಎಂಬುದು ಪ್ರಾಚೀನ ಕರ್ನಾಟಕದಲ್ಲಿ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಒಂದು ‘ಸುಭೆ’ ಆಗಿರುವಂತೆ, ಹಲವಾರು ಸ್ಥಳಗಳನ್ನು ಒಳಗೊಂಡ ಪ್ರಾದೇಶಿಕ ವಿಭಾಗವೂ ಆಗಿತ್ತು. ‘ಗ್ರಾಮ’ ಪದ ಬಳಕೆ, ಬಿಳಗಿ ಸಂಸ್ಥಾನಿಕರ ಶಾಸನಗಳಲ್ಲಿ ಹಣ ಬಳಕೆ ಕಂಡುಬಂದರೂ ಟಂಕಶಾಲೆ ಇದ್ದ ಬಗ್ಗೆ ಹಾಗೂ ನಾಣ್ಯವನ್ನು ಟಂಕಿಸಿದ ಬಗ್ಗೆಯೂ ಆಧಾರಗಳು ದೊರೆಯುವುದಿಲ್ಲ. ಬಿಳಗಿ ಸಂಸ್ಥಾನಿಕರು ಸಾಂಬಾರು ಪದಾರ್ಥಗಳ ವ್ಯಾಪಾರ, ವಹಿವಾಟನ್ನು ಮಾಡುತ್ತಿದ್ದರು. ಇದನ್ನು ಕ್ರಿ.ಶ.೧೬೭೪ರ ಆಂಗ್ಲ ದಾಖಲೆ ತಿಳಿಸುತ್ತದೆ. ಕ್ರಿ.ಶ.೧೬೯೫ರಲ್ಲಿ ಬಂದ ಇಟಲಿ ದೇಶದ ಗ್ಯಾಮಿಲಿ, ಕ್ಯಾರಿ, ಇಂಗ್ಲಿಷ್ ಪ್ರವಾಸಿಗ ಹ್ಯಾಮಿಲ್ಟನ್ ಮತ್ತು ಕ್ಯಾಂಟೆಲ್ಲರು ಬಿಳಗಿ ದೇಶದ ಸಮೃದ್ಧಿಯನ್ನು ತಿಳಿಸಿದ್ದಾರೆ. ೧೯ನೇ ಶತಮಾನದ ಆರಂಭದಲ್ಲಿ ಬಿಳಗಿ ರಾಜ್ಯ ಸಂದರ್ಶಿಸಿದ ಬುಕಾನನ್ ಹಲವು ಸ್ವಾರಸ್ಯಕರ ಸಂಗತಿಗಳನ್ನು ತಿಳಿಸಿದ್ದಾನೆ.

ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಮನೆತನ ದಕ್ಷಿಣ ಕರ್ನಾಟಕದಲ್ಲಿ ಮುಖ್ಯವಾದುದು. ಇವರು ಕ್ರಿ.ಶ.೧೪೭೮ರಿಂದ ೧೭೭೮ರವರೆಗೆ ಸು.೩೦೦ ವರ್ಷಗಳ ಕಾಲ ಎರೆಕಟ್ಟೆ, ಚಿಕ್ಕನಾಯಕನಹಳ್ಳಿ, ಹಾಗಲವಾಡಿಗಳನ್ನು ಸಂದರ್ಭಕ್ಕನುಗುಣವಾಗಿ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಹಾಗಲವಾಡಿ ನಾಯಕರ ಮೂಲಪುರುಷ ‘ಯೆರೆಮಾದಿ

ನಾಯಕ' ಈತ ಆಂಧ್ರ ಮೂಲದ ತುಮ್ಮಳದಿಂದ ಬಂದವನು. ಕ್ರಿ.ಶ.೧೫೪೪ರಲ್ಲಿ ಸಾಲಿನಾಯಕನು ಮರಣ ಹೊಂದಿದಾಗ ಅವನ ಮಗ ಬೈರವನಾಯಕನು ಪಟ್ಟಾಭಿಷಿಕ್ತನಾದನು.

ಹಾಗಲವಾಡಿ ಅರಸರ ಬಗ್ಗೆ ಸವಿಸ್ತಾರವಾದ ಮಾಹಿತಿಗಳು ಲಭ್ಯವಿರುವಂತೆ ರಾಣಿಯರ ಬಗ್ಗೆ ಮಾಹಿತಿಗಳು ದೊರೆಯದಿರುವುದು ವಿಷಾದದ ಸಂಗತಿಯಾಗಿದೆ. ಕೆಲವೆಡೆಗಳಲ್ಲಿ ಮಾತ್ರ ರಾಣಿಯರ ಹೆಸರುಗಳು ಸಿಗುತ್ತವೆ ಹೊರತು ಹೆಚ್ಚಿನ ಮಾಹಿತಿಗಳು ಸಿಗುವುದಿಲ್ಲ.

ಹಾಗಲವಾಡಿ ಸಂಸ್ಥಾನದ ಆರನೇ ದೊರೆಯಾಗಿ 'ಮೊದಲನೇ ಚನ್ನಬಸಪ್ಪನಾಯಕನ ಪುತ್ರನಾದ ರಾಮಪ್ಪನಾಯಕನ ಪತ್ನಿ ಕಲ್ಲವ್ವಮ್ಮ 'ಗಳಿಗೆಕೆರೆ' ಎಂಬಲ್ಲಿ ಕೆರೆಯೊಂದನ್ನು ಕಟ್ಟಿಸಿದಳು. ಮುದ್ದುವೀರಪ್ಪನಾಯಕನ ರಾಣಿಯಾದ ರುದಿರಾಣಮ್ಮನವರಿಗೆ ಮಕ್ಕಳಿರಲಿಲ್ಲ. ಅದೇ ಸಂದರ್ಭದಲ್ಲಿ ಕ್ರಿ.ಶ.೧೭೬೧ರಲ್ಲಿ ಹೈದರಾಲಿಯು ಮೈಸೂರಿನ ಸರ್ವಾಧಿಕಾರಿಯಾದನು. ಹೀಗಾಗಿ ಕರ್ನಾಟಕದಲ್ಲಿ ರಾಜಕೀಯ ವ್ಯವಸ್ಥೆಯ ಚಿತ್ರಣವೇ ಬದಲಾಯ್ತು. ಮುದ್ದುವೀರಪ್ಪನಿಗೆ ಮಕ್ಕಳಿಲ್ಲದ ಕಾರಣವಾಗಿ ಆತನ ತಮ್ಮನಾದ ಪ್ರಸನ್ನ ರಾಮಪ್ಪ ಆಳ್ವಿಕೆ ನಡೆಸುತ್ತಿದ್ದನು. ೩ ವರ್ಷ ಆಳ್ವಿಕೆ ಮಾಡಿ ಕ್ರಿ.ಶ.೧೭೬೪ರಲ್ಲಿ ಮರಣ ಹೊಂದಿದನು. ದಾಯಾದಿಗಳ ಅಂತಃಕಲಹ ಪ್ರಾರಂಭವಾಯ್ತು. ಸಿರಾದಲ್ಲಿದ್ದ ಹೈದರಲಿಯು ಹಾಗಲವಾಡಿಯ ನಾಯಕನಿಗೆ ಪೊಗದಿ ಹಣ ನೀಡಲಿಲ್ಲವೆಂಬ ಕಾರಣಕ್ಕೆ ಕರಿಚನ್ನಬಸಪ್ಪನಾಯಕನನ್ನು ಮತ್ತು ಮೂರನೇ ಬಸಪ್ಪನಾಯಕನನ್ನು ಸೆರೆಹಿಡಿದು ಬಂಧನದಲ್ಲಿರಿಸಿದನು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಹಾಗಲವಾಡಿ ಸಂಸ್ಥಾನದ ಮುದ್ದುವೀರಪ್ಪ ನಾಯಕನ ಪತ್ನಿಯಾದ ರುದಿರಾಣಮ್ಮನವರು ಸಿರಾದ ನವಾಬನಾದ ಬಲಾಸತ್ ಜಂಗನ ಅಪ್ಪಣೆ ಪಡೆದು ಆಳ್ವಿಕೆ ಮಾಡಲಾರಂಭಿಸಿದಳು ಎಂಬ ಮಾಹಿತಿ ದೊರೆಯುವುದೇ ವಿನಾ ಇನ್ನಿತರ ಮಾಹಿತಿಗಳು ಯಾವುವೂ ದೊರೆಯುವುದಿಲ್ಲ. ಆದರೆ "ಯೆರೆಮಾದಿ ನಾಯಕ ಸಂತತಿ ವಿವರ ಇರುವ ಕಾಗದ ಸುರಳಿಯಲ್ಲಿ 'ರುದಿರಾಣಮ್ಮನವರು' ಆಳ್ವಿಕೆ ನಡೆಸಿದ ಮಾಹಿತಿ ಸಿಗುತ್ತದೆ."[೧೮]

ವಿಜಯನಗರದ ಆಡಳಿತ ವ್ಯವಸ್ಥೆಯಲ್ಲಿ ಹಾಗಲವಾಡಿ ಪಾಳೇಗಾರರು ಅಮರನಾಯಕ ರಾಗಿದ್ದರು. ಇವರ ಪಾಳೆಯಪಟ್ಟು ಪೂರ್ವದಲ್ಲಿ ಈಗಿನ ತುಮಕೂರು ತಾಲ್ಲೂಕಿನ ಬಹುಭಾಗವನ್ನು ಪಶ್ಚಿಮದಲ್ಲಿ ಚಿಕ್ಕನಾಯಕನಹಳ್ಳಿ, ತಿಪಟೂರು ತಾಲ್ಲೂಕುಗಳನ್ನು ಒಳಗೊಂಡು ನೆರೆಯ ಈಗಿನ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ನುಗ್ಗೇಹಳ್ಳಿಯವರೆಗೂ ವಿಸ್ತರಿಸಿದ್ದಿತು. ದಕ್ಷಿಣದಲ್ಲಿ ನಾಗಮಂಗಲ ತಾಲ್ಲೂಕಿನ ಬೆಳ್ಳೂರವರೆಗೂ, ಉತ್ತರದಲ್ಲಿ ಸಿರಾ ತಾಲ್ಲೂಕಿನ ಕೆಲಭಾಗಗಳಿಗೂ. ಈಶಾನ್ಯದಲ್ಲಿ ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಹರತಿಕೋಟೆಯು ಇವರ ಸಂಸ್ಥಾನದ ಭಾಗವಾಗಿತ್ತು. ಹಾಗಲವಾಡಿ ಸಂಸ್ಥಾನದಲ್ಲಿ ಅನೇಕ ಸೀಮೆಗಳಿದ್ದು, ಬಿದುರುಸೀಮೆ, ನೊಣಬನ

ಕೆರೆ ಸೀಮೆ, ಸೆಟ್ಟಿಕೆರೆ ಸೀಮೆ, ಕಂದಿಕೆರೆ ಸೀಮೆ, ಹೊನ್ನವಳ್ಳಿ ಸೀಮೆ ಇತ್ಯಾದಿ ಸೀಮೆಯನ್ನು ಒಳಗೊಂಡಿತ್ತು.

ಪ್ರಕೃತಿಯ ಬೆಡಗಿನಿಂದಾಗಿ ದಕ್ಷಿಣದ ಕಾಶ್ಮೀರವೆಂದೇ ಹೆಸರಾದ ಕೊಡಗನ್ನು ಕ್ರಿ.ಶ.೧೬೦೦ ರಿಂದ ಕ್ರಿ.ಶ.೧೮೩೪ರವರೆಗೆ ಆಳಿದ ಹಾಲೇರಿವಂಶ ರಾಜಕೀಯ ಕ್ಷೇತ್ರಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಹಾಲೇರಿ ರಾಣಿಯರ ಬಗ್ಗೆ ವಿಸ್ತಾರವಾದ ಮಾಹಿತಿಗಳು ಲಭ್ಯವಿಲ್ಲದಿದ್ದರೂ, ಪ್ರಾಸಂಗಿಕವಾಗಿ ಹಲವಾರು ರಾಣಿಯರ ಹೆಸರುಗಳು ಉಲ್ಲೇಖವಾಗಿರುವುದನ್ನು ಕಾಣುತ್ತೇವೆ. ಲಕ್ಷಮ್ಮಾಜಿ, ನಂಜಮ್ಮಾಜಿ, ಪಟ್ಟದಮಲ್ಲಮ್ಮ, ನಿಂಗ್ರಾಜಮ್ಮ, ದೇವಮ್ಮಾಜಿ, ನೀಲಮ್ಮಾಜಿ, ಪಟ್ಟದಸ್ತ್ರೀ, ಪಟ್ಟದರಾಣಿ, ದೇವಾಂಬಿಕೆ ಅಮ್ಮ, ಮುಂತಾದವರ ಉಲ್ಲೇಖವನ್ನು ಕಾಣುತ್ತೇವೆ.

ಕ್ರಿ.ಶ.೧೭೮೨ರ ಬಾದ್ರಪದದಲ್ಲಿ ಹೈದರಾಲಿಯು ಹಾಲೇರಿ ಮನೆತನದ ಅರಸರನ್ನು ಹಾಸನ ಜಿಲ್ಲೆ ಮಹಾರಾಜದುರ್ಗ ತಾಲ್ಲೂಕಿನ ಗೊರೂರಿನಲ್ಲಿ ಗೃಹಬಂಧನದಲ್ಲಿರಿಸಿದನು. ಅರಸರೊಂದಿಗೆ ದೊಡ್ಡವೀರರಾಜೇಂದ್ರನ ರಾಣಿಯರಾದ ನಂಜಮ್ಮಾಜಿ, ದೇವಮ್ಮಾಜಿಯರನ್ನು, ಅವನ ತಾಯಿಯಾದ ದೇವಾಂಬಿಕೆ ಅಮ್ಮನನ್ನು ಗೃಹಬಂಧನದಲ್ಲಿರಿಸಿದನು. ಕ್ರಿ.ಶ.೧೭೮೨ರಲ್ಲಿ ಹೈದರಾಲಿಯು ತೀರಿಕೊಂಡಾಗ, ಮಗನಾದ ಟಿಪ್ಪುವು ಪದವಿಗೇರಿದನು. ಈತನು ಹಾಲೇರಿ ರಾಜವಂಶದವರನ್ನು ಗೋರೂರಿನಿಂದ ಪಿರಿಯಾಪಟ್ಟಣಕ್ಕೆ ವರ್ಗಾಯಿಸಿದನು. ಈ ಸಂದರ್ಭದಲ್ಲಿ ದೇವಾಂಬಿಕೆಯಮ್ಮ ಅನಾರೋಗ್ಯದಿಂದ ತೀರಿಕೊಂಡಳು. ನಂತರದಲ್ಲಿ ದೇವಮ್ಮಾಜಿ ನಂಜಮ್ಮಾಜಿಯರು ದೊಡ್ಡವೀರ ರಾಜೇಂದ್ರನು ಹಾಲೇರಿಯ ಕೆಲವು ಶೂರ ನಾಯಕರ ನೆರವಿನಿಂದ ತಪ್ಪಿಸಿಕೊಂಡಾಗ, ಈ ರಾಣಿಯರೂ ಅವನೊಂದಿಗೆ ತಪ್ಪಿಸಿಕೊಂಡರು ಎಂಬ ಮಾಹಿತಿ ಮಾತ್ರ ಲಭ್ಯವಾಗುತ್ತದೆ.

ಹಾಲೇರಿ ಅರಸುಮನೆತನವನ್ನು ಸಮರ್ಥವಾಗಿ ಆಳಿದ ರಾಣಿ ದೇವಮ್ಮಾಜಿ. ದೇವಮ್ಮಾಜಿಯು ಕ್ರಿ.ಶ.೧೮೦೯ರಿಂದ ೧೮೧೧ರವರೆಗೆ ಮಡಿಕೇರಿಯನ್ನು ಆಳಿದಳು. ಆದರೆ ದೇವಮ್ಮಾಜಿಯು ಕೇವಲ ೧೦ ವರ್ಷದ ಚಿಕ್ಕಪ್ರಾಯದವಳಾದ್ದರಿಂದ ಆಕೆ ಪ್ರಾಯಕ್ಕೆ ಬರುವವರೆಗೆ ಆಕೆಯ ಪರವಾಗಿ ರಾಜಮ್ಮಾಜಿಯ ಪತಿಯಾದ ಸೋದೆ ಬಸವಲಿಂಗರಾಜನೇ ಕೊಡಗಿನ ರಾಜ್ಯಭಾರವನ್ನು ವಹಿಸಿಕೊಂಡನು. ದೇವಮ್ಮಾಜಿಯ ಆಡಳಿತಾವಧಿಯಲ್ಲಿ ದಿವಾನನಾಗಿದ್ದ ಮಾದಯ್ಯ ಎಂಬುವವನನ್ನು ಸೋದೆ ಬಸವಲಿಂಗ ರಾಜನು ಶಿಕ್ಷೆಯನ್ನು ವಿಧಿಸಿದ ಕಾರಣವಾಗಿ ಕೊಡಗಿನ ಜನರಲ್ಲಿ ಅಸಮಾಧಾನ ಮೂಡಿತು. ಇಂಥದ್ದೆ ಅವಕಾಶಕ್ಕಾಗಿ ಕಾಯುತ್ತಿದ್ದ ೨ನೇ ಲಿಂಗರಾಜೇಂದ್ರ ಒಡೆಯನು ರಾಣಿಯನ್ನು ಭಾವನಾತ್ಮಕವಾಗಿ ಬಂಧಿಸಿ, ಆಕೆ ತನ್ನ ಅಧಿಕಾರವನ್ನೆಲ್ಲ ತನಗೆ ಬಿಟ್ಟುಕೊಡುವಂತೆ ಮಾಡಿಕೊಂಡನು. ಅಲ್ಲದೆ ರಾಣಿಯ ಹೆಸರಿನಲ್ಲಿ ಬಾಂಬೆ ಮತ್ತು

ಮದ್ರಾಸು ಸರ್ಕಾರದಲ್ಲಿ ಇಟ್ಟಿದ್ದ ಎಂಟೂವರೆ ಲಕ್ಷ ರೂ.ಗಳ ಮೇಲಿನ ಬಡ್ಡಿಯೂ ಅವಳಿಗೆ ಒದಗಲಿಲ್ಲ. ಅದು ಹೇಗೋ ಲಿಂಗರಾಜೇಂದ್ರ ಒಡೆಯ ಹಾಗೂ ಅವನ ಮಗನ ಹೆಸರಿನಲ್ಲಿ ವರ್ಗಾವಣೆ ಆಗಿಯೇ ಬಿಟ್ಟಿತ್ತು.

ರಾಣಿ ತಂದೆಯ ಪ್ರೀತಿಯನ್ನುಂಡು ರಾಜಕೀಯ ಕುಟಿಲತೆ, ಮೋಸಗಾರಿಕೆ ಅರಿಯದವಳಾಗಿದ್ದಳು. ಜನತೆ ಸಾವು, ನೋವಿನಿಂದ ನರಳುತ್ತಿದ್ದರೂ ಪ್ರತಿಭಟನೆಯನ್ನು ತೋರದ ಮುಗ್ಧೆ ಆಗಿದ್ದಳು. ಅವಳ ಮುಗ್ಧತೆಯೇ ಆಕೆಯ ಬದುಕಿಗೆ ಮುಳುವಾಯ್ತು.

ಕೊಡಗಿನ ಹಾಲೇರಿ ಮನೆತನದ ರಾಜಪುತ್ರಿ ಗೌರಮ್ಮ, ಚಿಕ್ಕವೀರರಾಜೇಂದ್ರನ ಪ್ರೀತಿಯ ಪುತ್ರಿ, ಚಿಕ್ಕವೀರರಾಜೇಂದ್ರನ ಮಕ್ಕಳಾದ ವೀರಮ್ಮ, ಗಂಗಮ್ಮ, ಮುದ್ದಮ್ಮರ ಬಗ್ಗೆ ಯಾವುದೇ ಮಾಹಿತಿಗಳು ದೊರೆಯುವುದಿಲ್ಲ. ಆದರೆ ರಾಣಿ ಗೌರಮ್ಮನ ಬಗ್ಗೆ ಮಾಹಿತಿ ದೊರೆಯುತ್ತದೆಯಾದರೂ ಆಕೆ ರಾಜಕೀಯವಾಗಿ ಯಾವುದೇ ರೀತಿಯ ಕೊಡುಗೆಯನ್ನು ನೀಡಿಲ್ಲವೆನ್ನಬಹುದು.

ಹೀಗೆ ಕೊಡಗಿನ ಹಾಲೇರಿ ಮನೆತನದಲ್ಲಿ ಒಬ್ಬ ರಾಣಿ ಮಾತ್ರ ಆಡಳಿತದ ನೇರ ಚುಕ್ಕಾಣಿ ಹಿಡಿದುದು ಕಂಡುಬರುತ್ತದೆ. ಕೊಡಗಿನಲ್ಲಿ ಉತ್ತಮವಾದ ಸೈನಿಕ ವ್ಯವಸ್ಥೆ ಇತ್ತು. ಹಲವಾರು ಜನರನ್ನು ಆಡಳಿತವನ್ನು ನೋಡಿಕೊಳ್ಳಲು ನೇಮಿಸುತ್ತಿದ್ದರು. ದೇವಮ್ಮಾಜಿಯ ಆಡಳಿತದಲ್ಲಿ ಮಾದಯ್ಯ ಎಂಬುವವನು ದಿವಾನನಾಗಿದ್ದನು. ಅಲ್ಲದೆ ಅರಮನೆಯಲ್ಲಿ ಕರಣಿಕರು ಇದ್ದು, ಸುಬ್ಬಯ್ಯ ಎಂಬುವವನು ಕರಣಿಕನಾಗಿದ್ದನು. ಈತನ ತಂಗಿಯನ್ನು ವೀರರಾಜೇಂದ್ರನು ವಿವಾಹವಾದನು. ನೆರೆಯ ರಾಜ್ಯಗಳೊಡನೆ ವೈವಾಹಿಕ ಸಂಬಂಧವನ್ನು ಬೆಳೆಸಿ, ಮೈತ್ರಿಯನ್ನು ಇವರು ಸಾಧಿಸಿಕೊಳ್ಳುತ್ತಿದ್ದರು.

ದೊಡ್ಡವೀರರಾಜೇಂದ್ರನು ತನ್ನ ಮಗಳಾದ ರಾಜಮ್ಮಾಜಿಯನ್ನು ಸೋದೆಯ ಬಸವಲಿಂಗ ರಾಜರಿಗೆ ಕೊಟ್ಟು ವಿವಾಹ ಮಾಡಿದನು. ದೊಡ್ಡವೀರರಾಜೇಂದ್ರನ ಪತ್ನಿಯಾದ ಮಹಾದೇವಮ್ಮಾಜಿಯು ರಾಜನ ಕಠಿಣ ಸ್ವಭಾವವನ್ನು ಪರಿವರ್ತನೆಗೊಳಿಸಿದಷ್ಟೇ ಅಲ್ಲದೆ ರಾಜನೀತಿಯಲ್ಲಿ ಸಲಹೆ, ಸೂಚನೆಗಳನ್ನು ನೀಡುತ್ತಿದ್ದಳು. ದೊಡ್ಡವೀರರಾಜೇಂದ್ರನು ತನ್ನ ಹಿರಿಯ ಮಗಳಾದ ದೇವಮ್ಮಾಜಿಯನ್ನು ಕೊಡಗನೊಬ್ಬನಿಗೆ ಲಿಂಗಧಾರಣೆ ಮಾಡಿಸಿ 'ಮಲ್ಲಪ್ಪ' ಎಂಬ ಹೆಸರಿನಿಂದ ಮದುವೆ ಮಾಡಿಸಿ, ಒಂದು ಲಕ್ಷ ಚಿನ್ನದ ವರಹ, ಆಭರಣ, ಬೆಲೆ ಬಾಳುವ ಎಂಟು ವಸ್ತ್ರಗಳನ್ನು ಉಡುಗೊರೆಯಾಗಿ ನೀಡಿದನು. ಅಲ್ಲದೆ ತನ್ನ ರಾಜ್ಯಕ್ಕೆ ವಾರಸುದಾರನು ದೇವಮ್ಮಾಜಿಯಲ್ಲಿ ಹುಟ್ಟಿಬರಲೆಂದು. ಆತನಿಗೆ ತನ್ನ ಹೆಸರನ್ನು ಇಟ್ಟು ರಾಜಮುದ್ರೆ ಹಾಗೂ ಖಡ್ಗವನ್ನು ನೀಡಿ, ಅವನನ್ನು ಪಟ್ಟದಲ್ಲಿ ಕೂಡಿಸಬೇಕೆಂದು, ಹಾಗೆ ಹುಟ್ಟದಿದ್ದಲ್ಲಿ ಅವಳ ತಂಗಿಯರಾದ ಮುದ್ದಮ್ಮಾಜಿ, ಚಿಕ್ಕರಾಜಮ್ಮಾಜಿ, ಮಹದೇವಮ್ಮಾಜಿಯರಲ್ಲಿ ಯಾರಾದರೊಬ್ಬರಿಗೆ ಜನಿಸಿದ ಗಂಡು ಮಗು

ಅಧಿಕಾರಕ್ಕೆ ಬರಬೇಕೆಂದು, ಅವರಿಗೂ ಮಕ್ಕಳಾಗದಿದ್ದರೆ, ಸಾಮಾನ್ಯ ಸ್ತ್ರೀಯರಲ್ಲಿ ಜನಿಸಿದ ಗಂಡು ಮಕ್ಕಳಿಗೆ ಜ್ಯೇಷ್ಠತೆ ಅನುಸರಿಸಿ ಪಟ್ಟವನ್ನು ಕಟ್ಟಬೇಕೆಂದು ಮರಣಶಾಸನವನ್ನು ಬರೆದನು. ಇಲ್ಲಿ ಸಾಮಾನ್ಯ ಸ್ತ್ರೀಯೆಂಬುದು ಅರಮನೆಯ ಪರಿಸರದಲ್ಲಿ ಕೆಲಸ ಮಾಡುವ ದಾಸಿಯರ ಮಕ್ಕಳೂ ಆಗಿರಬಹುದು. ಹೀಗೆ ಒಂದು ಸಾಮ್ರಾಜ್ಯದ ವಾರಸುದಾರಿಕೆಯ ಪ್ರಶ್ನೆಯು ಅಂದಿನ ಜ್ವಲಂತ ಸಮಸ್ಯೆಗಳಲ್ಲಿ ಒಂದಾಗಿತ್ತು ಎನ್ನಬಹುದು.

ಭಾರತೀಯ ಸಂಸ್ಕೃತಿ ಶ್ರೀಮಂತವೂ, ವೈವಿಧ್ಯಮಯವೂ, ಆಗಿರುವುದಕ್ಕೆ ಅನೇಕ ಸಣ್ಣಪುಟ್ಟ ಸಂಸ್ಥಾನಿಕರು ನೀಡಿದ ಕೊಡುಗೆ ಅನನ್ಯವಾದುದು. ಇಂಥ ಸಂಸ್ಥಾನಗಳಲ್ಲಿ ಕಳಲೆ ಸಂಸ್ಥಾನವೂ ಒಂದು. ಸಂಸ್ಥಾನದ ರಾಜಕೀಯ, ಆಡಳಿತದಲ್ಲಿ ನೇರವಾಗಿ ಪಾಲ್ಗೊಂಡ ರಾಣಿಯರು ಹಲವರಿದ್ದರೆ, ಇನ್ನು ಕೆಲವು ರಾಣಿಯರು ಆಡಳಿತದಲ್ಲಿ ಪರೋಕ್ಷವಾಗಿ ಪಾಲ್ಗೊಂಡಿರುವವರು ಇದ್ದಾರೆ. ಅವರಲ್ಲಿ ದೇವೀರಮ್ಮಣ್ಣಿ, ಗೌರಮ್ಮಣ್ಣಿ, ದೊಡ್ಡಮ್ಮಣ್ಣಿ, ಸಿದ್ಧಾಜಮ್ಮಣ್ಣಿ, ದೊಡ್ಡಮಲ್ಲಾಜಮ್ಮಣ್ಣಿ, ಚಿಕ್ಕಮಲ್ಲಾಜಮ್ಮಣ್ಣಿ ಮುಂತಾದವರ ಹೆಸರುಗಳ ಉಲ್ಲೇಖ ದೊರೆಯುವುದೇ ವಿನಾ ಹೆಚ್ಚಿನ ಮಾಹಿತಿಗಳು ದೊರೆಯುವುದಿಲ್ಲ.

ರಾಜಗದ್ದುಗೆಗಾಗಿ ಹೊಡೆದಾಟ ಇಂದು ನಿನ್ನೆಯದಲ್ಲ. ಇದಕ್ಕೆ ಸಾಕ್ಷಿ ಮಹಾಭಾರತ. ರಾಣಿಯರು ಮನಸ್ಸು ಮಾಡಿದರೆ ಎಂಥ ವೈಪರೀತ್ಯಗಳು ಜರುಗಬಹುದೆಂಬುದಕ್ಕೆ ದ್ರೌಪದಿಯೇ ಸಾಕ್ಷಿಯಾಗಿದ್ದಾಳೆ. ಇಂಥದೇ ಸಾಲಿಗೆ ಸೇರುತ್ತಾಳೆ ಕಳಲೆಯ ರಾಣಿ ಚೆನ್ನಾಜಮ್ಮಣ್ಣಿ. ಈಕೆ ಕ್ರಿ.ಶ.೧೫೨೮ರಿಂದ ಕ್ರಿ.ಶ.೧೫೪೭ರವರೆಗೆ ಆಳ್ವಿಕೆ ನಡೆಸಿದ ತಿಮ್ಮರಾಜ ಒಡೆಯರ ದ್ವಿತೀಯ ಪತ್ನಿ. ಹಾಗೂ ತಗಡೂರು ಮಲ್ಲರಾಜ ಒಡೆಯರ ಪುತ್ರಿ. "ತಿಮ್ಮರಾಜ ಒಡೆಯರ ಹಿರಿಯ ಪತ್ನಿಯಾದ ದೊಡ್ಡಮ್ಮಣ್ಣಿಯವರಿಗೆ ಜನಿಸಿದ ಲಕ್ಷ್ಮೀಕಾಂತ ಒಡೆಯರಿಗೆ ಪಟ್ಟಗಟ್ಟಿದುದು ಚೆನ್ನಾಜಮ್ಮಣ್ಣಿಯ ಕೋಪವನ್ನು ಕೆರಳಿಸಿತು. ರಾಜ್ಯವು ತನ್ನ ಮಕ್ಕಳಿಗೆ ದೊರೆಯಲಿಲ್ಲವೆಂಬ ಕಾರಣಕ್ಕೆ ಲಕ್ಷ್ಮೀಕಾಂತ ಒಡೆಯರನ್ನು ಕೊಲ್ಲಿಸಿದಳು."[೧೯] ಇದಕ್ಕೂ ತೃಪ್ತಿಪಡದೇ ತಿಮ್ಮರಾಜ ಒಡೆಯರ ೪ನೇ ಪತ್ನಿಯಾದ ದೇವಮ್ಮಣ್ಣಿಯನ್ನು ಬಂಧನದಲ್ಲಿರಿಸಿದಳು. ಈಕೆಗೆ ಜನಿಸಿದ ಕರಿಕಾಲ ಮಲ್ಲರಾಜ ಒಡೆಯನನ್ನು ಕೊಲ್ಲಲು ಹುಡುಕಿಸಿದಳು. ಆದರೆ ಸುದೈವದಿಂದ ಕರಿಕಾಲ ಮಲ್ಲರಾಜ ಒಡೆಯರಿಗೆ ಬಂದ ಕಂಟಕ ಪಾರಾಯ್ತು. ಆತ ಮೈಸೂರಿನಲ್ಲಿಯೇ ಬೆಳೆದನು.

ಹೀಗೆ ಕ್ರೂರಿಯಾದ ಚೆನ್ನಾಜಮ್ಮಣ್ಣಿಯು ತನ್ನ ೩ ಜನ ಮಕ್ಕಳಲ್ಲಿ ಚಂದ್ರಶೇಖರ ಒಡೆಯರಿಗೆ ಪಟ್ಟ ಕಟ್ಟಿದಳು. ಹೀಗೆ ಚೆನ್ನಾಜಮ್ಮಣ್ಣಿ ನೇರವಾಗಿ ರಾಜಗದ್ದುಗೆ ಏರಲಿಲ್ಲವಾದರೂ ಅತಿಯಾದ ಮಮಕಾರದಿಂದಲೂ, ರಾಜ್ಯದಾಸೆಯಿಂದಲೂ ಕ್ರೂರ ಕೆಲಸಕ್ಕೆ ಕೈ ಹಾಕಿದ್ದು ಐತಿಹಾಸಿಕ ಸತ್ಯವಾಗಿ ಉಳಿದಿದೆ.

ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ವಿಜಯನಗರದಂಥ ಪ್ರಮುಖ ಅರಸೊತ್ತಿಗೆಗಳ ನಂತರ ತಲೆ ಎತ್ತಿದ ಚಿಕ್ಕಪುಟ್ಟ ಸಂಸ್ಥಾನಗಳಲ್ಲಿ ಕಿತ್ತೂರು ಸಂಸ್ಥಾನವೂ ಒಂದು. ಕಿತ್ತೂರನ್ನು ಆಳಿದ ರಾಣಿಯರಲ್ಲಿ ಮಲ್ಲವ್ವ, ರುದ್ರವ್ವ, ಚೆನ್ನವ್ವ ಈರವ್ವರು ಪ್ರಮುಖರಾಗಿದ್ದಾರೆ.

ಕಿತ್ತೂರಿನ ಮಾಳವರುದ್ರಗೌಡ ದೊರೆಯ ರಾಣಿ ಮಲ್ಲವ್ವ ಕ್ರಿ.ಶ.೧೭೩೪ರಿಂದ ಕ್ರಿ.ಶ.೧೭೪೯ ರವರೆಗೆ ಸು.೧೫ ವರ್ಷಗಳ ಕಾಲ ಕಿತ್ತೂರನ್ನು ಆಳಿದ ಮೊದಲ ಆಡಳಿತಗಾರ್ತಿ. "ದೊರೆ ಮಾಳವಗೌಡ ವಿಲಾಸಪ್ರಿಯನಾಗಿದ್ದನು."[೨೦] ಅಲ್ಲದೆ ಆಡಳಿತದಲ್ಲಿ ಅನಾಸಕ್ತಿಯಿಂದ ವರ್ತಿಸುತ್ತಿದ್ದ. ಹೀಗಾಗಿ ರಾಣಿ ಮಲ್ಲವ್ವ ಈತನ ಅವಧಿಯಲ್ಲಿಯೇ ಸಮರ್ಥವಾಗಿ ಆಡಳಿತವನ್ನು ನಿರ್ವಹಿಸಿದ್ದು ವಿಶೇಷವಾದುದಾಗಿದೆ. ದೊರೆ ಮಾಳವರುದ್ರಗೌಡನು 'ರಂಜನಿ' ಎಂಬ ಮುಸಲ್ಮಾನ ಜಾತಿಯ ಪಾತ್ರದವಳನ್ನು ಮೋಹಿಸಿದ್ದು ಅಲ್ಲದೆ "ಒಕ್ಕುಂದದ ಪಡದಪ್ಪನವರಿಂದ ಲಿಂಗದೀಕ್ಷೆಯನ್ನು ಕೊಡಿಸಿ, ಮತಾಂತರಿಸಿ, 'ನಿರಂಜನಿ' ಎಂದು ಹೆಸರು ಬದಲಾಯಿಸಿ ವಿವಾಹವಾದನು."[೨೧] ಇದರಿಂದ ಸಂಪ್ರದಾಯ ಶರಣನಾದ ಸೋದರ ಮಲ್ಲಪ್ಪ ಹಾಗೂ ಸಮಾಜದಲ್ಲಿ ಹಲವರಿಗೆ ಇದು ಸರಿ ತೋರಲಿಲ್ಲ. ಇದರಿಂದ ಬೇಸತ್ತ ಮಾಳವರುದ್ರಗೌಡನು ರಾಜ್ಯಭಾರ ಮತ್ತು ಅಧಿಕಾರದ ಆಸೆಯನ್ನು ತೊರೆದು ತನ್ನ ಪ್ರೇಯಸಿಯೊಂದಿಗೆ ದೇಸನೂರನ್ನು ಸೇರಿದನು. ಇಂಥ ಸಂದಿಗ್ಧ ಸ್ಥಿತಿಯನ್ನು ಎದುರಿಸಿದ ರಾಣಿ ಮಲ್ಲವ್ವ ರಾಜಕಾರಣ ಚತುರೆಯಾಗಿದ್ದಾಳೆ.

ಕಿತ್ತೂರಿನಲ್ಲಿ ಆಳಿದ ಮತ್ತೊಬ್ಬ ಸಮರ್ಥ ರಾಣಿ ರುದ್ರಮ್ಮ. ಕಿತ್ತೂರಿನ ಮಲ್ಲಸರ್ಜ ದೊರೆಯ ಹಿರಿಯರಾಣಿ. "ಶಾಂತ ಸ್ವಭಾವದವಳಾದ ಈಕೆ ವೀರತನ, ವ್ರತ, ನಿಷ್ಠೆ ಹಾಗೂ ಸಂಕಲ್ಪಗಳಿಂದ ಚೆನ್ನಮ್ಮನಿಗಿಂತ ಒಂದು ಗುಂಜಿ ಹೆಚ್ಚುಗಾರಿಕೆಯಿಂದ ಬದುಕಿದ್ದಳೆಂದು ವಿದ್ವಾಂಸರಾದ ಡಾ.ಕೆ.ರವೀಂದ್ರನಾಥರು ಅಭಿಪ್ರಾಯಪಡುತ್ತಾರೆ. ಈ ಮಾತಿಗೆ ಪೂರಕವೆಂಬಂತೆ "ಕ್ರಿ.ಶ.೧೭೮೫ರಲ್ಲಿ ಕಿತ್ತೂರಿನ ಅರಸರ ಅಧೀನದಲ್ಲಿದ್ದ ದೇಸನೂರ ಕೋಟೆಯನ್ನು ವಶಪಡಿಸಿ ಕೊಳ್ಳಲು ಟಿಪ್ಪುಸುಲ್ತಾನನು ಹೊಂಚುಹಾಕುತ್ತಿದ್ದ. ಆಗ ಮಲ್ಲಸರ್ಜನನ್ನು ಸೆರೆಮನೆಯಲ್ಲಿರಿಸಿದನು. ಆ ಸಮಯದಲ್ಲಿ ಮಲ್ಲಸರ್ಜನ ಹಿರಿಯ ಪತ್ನಿಯಾದ ರುದ್ರಮ್ಮ, ಯುದ್ಧದಲ್ಲಿ ನೇರವಾಗಿ ಭಾಗವಹಿಸಿ ಮಲ್ಲಸರ್ಜನನ್ನು ಬಿಡಿಸಿಕೊಂಡು ಬಂದಳು"[೨೨] ಎಂಬ ಮಾಹಿತಿಯನ್ನು ಬಿಟ್ಟರೆ ಇನ್ನುಳಿದ ಮಾಹಿತಿಗಳು ಲಭ್ಯವಿಲ್ಲ. ಸಮರ್ಥ ರಾಣಿಯಾದ ರುದ್ರಮ್ಮ ತನ್ನ ಕೊನೆಯ ದಿನಗಳನ್ನು ತಲ್ಲೂರಿನಲ್ಲೇ ಕಳೆದಳು. "ಮಲ್ಲಸರ್ಜನಿರುವಾಗಲೇ ರಾಣಿ ಕಣ್ಮುಚ್ಚಿದಳು."[೨೩] ಇಂದಿಗೂ ರುದ್ರಮ್ಮನ ಸಮಾಧಿ ಸಂಗೊಳ್ಳಿ ಹತ್ತಿರದ ಮಲಪಹಾರಿ ನದಿಯ ದಂಡೆಯ ಮೇಲಿದೆ.

ಭಾರತದ ಸ್ವತಂತ್ರ ಸೌದಾಮಿನಿಯಾದ ಕಿತ್ತೂರ ಚೆನ್ನಮ್ಮ ಬ್ರಿಟಿಷರನ್ನು ಪ್ರತಿಭಟಿಸಿದ ಪ್ರಪ್ರಥಮ ರಾಣಿ. ಈಕೆ ಆಡಳಿತರಂಗದಲ್ಲಿ ದೊರೆ ಮಲ್ಲಸರ್ಜನಿಗೆ ಸಹಕಾರಿಯಾಗಿದ್ದಳು. ಅಲ್ಲದೆ ಸಭೆ, ಸಮಾರಂಭಗಳಲ್ಲೂ ಭಾಗವಹಿಸುತ್ತಿದ್ದಳು. ರಾಣಿಯು ಒಬ್ಬ ಸ್ನೇಹಿತೆಯಾಗಿ ತತ್ವಜ್ಞಾನಿಯಂತೆ, ಮಾರ್ಗದರ್ಶಿಯಂತೆ ಮಲ್ಲಸರ್ಜನಿಗೆ ಸಲಹೆ-ಸೂಚನೆ ನೀಡುತ್ತಿದ್ದಳು. ಪತಿ ಮಲ್ಲಸರ್ಜನ ನಂತರ ಸಿಂಹಾಸನಕ್ಕೆ ಶಿವಲಿಂಗರುದ್ರ ಸರ್ಜನು ಅಧಿಕಾರಕ್ಕೆ ಬಂದನಾದರೂ ಈತ ಅನಾರೋಗ್ಯದಿಂದ ಬಹುಕಾಲ ಉಳಿಯಲಿಲ್ಲ. ಹಾಗಾಗಿ ರಾಣಿಯು 'ಸವಾಯಿ ಮಲ್ಲಸರ್ಜನನ್ನು ದತ್ತು ಸ್ವೀಕರಿಸಿದಳು. ಆದರೆ ಈ ದತ್ತಕವನ್ನು ಥ್ಯಾಕರೆಯು ಅನೂರ್ಜಿತ ಗೊಳಿಸಿದನು. ಅಲ್ಲದೆ ಕಿತ್ತೂರಿನ ಖಜಾನೆಗೆ ಬೀಗಮುದ್ರೆಯನ್ನು ಹಾಕಿದನು. ಇದರಿಂದ ರಾಣಿ ಹಾಗೂ ಅವಳ ಅನುಯಾಯಿಗಳು ಬೇಸತ್ತರು. ಇದರ ಬಗ್ಗೆ ಮುಂಬೈ ಸರ್ಕಾರಕ್ಕೆ ದೂರನ್ನು ಕೊಟ್ಟಿದ್ದಾಯ್ತು.

ಥ್ಯಾಕರೆಯು ಅಕ್ಟೋಬರ್ ೨೧ರ ಬೆಳಗ್ಗೆ ಸ್ಟೀವನ್‌ಸನ್ ಹಾಗೂ ಇಲಿಯಟ್ಟರನ್ನು ಒಂದು ಕರಾರುಪತ್ರಕ್ಕೆ ಸಹಿ ಹಾಕಿಸಲು ಕಿತ್ತೂರಿಗೆ ಕಳಿಸಿದನು. ಆ ಪತ್ರವು ಕಿತ್ತೂರಿನ ಎಲ್ಲಾ ಪ್ರಮುಖರು ಹಾಗೂ ಎಲ್ಲ ಅಧಿಕಾರಿಗಳಿಂದ ಕಿತ್ತೂರು ಖಜಾನೆಯ ಸುರಕ್ಷತೆಗೆ ಬದ್ಧರಾಗುವ, ಅದಕ್ಕೆ ತಪ್ಪಿದರೆ ಜುಲ್ಮಾನೆ ಕೊಡಬೇಕು ಎಂಬುದಾಗಿತ್ತು. ಇದಕ್ಕೆ ಗುರುಸಿದ್ಧಪ್ಪನಂಥ ಸ್ವಾಭಿಮಾನಿ ಅಧಿಕಾರಿಗಳು ಒಪ್ಪಲಿಲ್ಲ. ಥ್ಯಾಕರೆಯು ರಾಣಿಯ ಏಕಾಂತ ಭೇಟಿಗೆ ಪ್ರಯತ್ನಿಸಿದಾಗ ಅದು ಕೈಗೂಡಲಿಲ್ಲ. ಆಗ ಯುದ್ಧವನ್ನು ಘೋಷಿಸಿದನು.

ಚೆನ್ನಮ್ಮ ರಾಣಿ ನಾಡಿನ ರಕ್ಷಣೆಯ ಪ್ರಶ್ನೆ ಬಂದಾಗ ಕಿತ್ತೂರಿನ ವೀರರಿಗೆ ಸ್ಫೂರ್ತಿಯನ್ನು ತುಂಬಿದಳು. ದಂಡನಾಯಕ ಗುರುಸಿದ್ದಪ್ಪ ರಾಣಿಯ ಆಜ್ಞೆಯಂತೆ ಸೈನ್ಯವನ್ನು ವ್ಯವಸ್ಥೆಗೊಳಿಸಿದನು. ಕ್ರಿ.ಶ.೧೮೨೪ಳ ಅಕ್ಟೋಬರ್ ೨೩ರಂದು ರಾಣಿಯ ಅಂಗರಕ್ಷಕ ಅಮಟೂರ ಬಾಳಾ ಸಾಹೇಬನು ರಾಣಿಯ ಆಜ್ಞೆಯಂತೆ ಥ್ಯಾಕರೆಯನ್ನು ನೆಲಕ್ಕುರುಳಿಸಿದನು. ಅಲ್ಲದೆ ಕ್ಯಾಪ್ಟನ್ ಬ್ಲಾಕ್, ಲೆಫ್ಟಿನೆಂಟ್ ಡಿಗ್ಬನ್‌ರು ಅಸುನೀಗಿದ್ದರು. ಥ್ಯಾಕರೆಯ ಸಹಾಯಕರಾದ ಸ್ಟೀವನ್‌ಸನ್ ಹಾಗೂ ಇಲಿಯಟ್ಟರನ್ನು ಹಿಡಿದು ರಾಣಿಯು ಬಂಧನದಲ್ಲಿರಿಸಿದಳು.

ಈ ಯುದ್ಧದಲ್ಲಿ ಚೆನ್ನಮ್ಮಾಜಿಯು ತೆಗೆದುಕೊಂಡ ಅಚಲ ನಿರ್ಧಾರ ಹಾಗೂ ಶೌರ್ಯವನ್ನು ಕುರಿತು, "Chennavva alone had to make a final decision, she was not prepared to stepdown. she valued kitturs freedom more then her life, she had tried her best"[೨೪] ಅಂದರೆ ರಾಣಿಯು ತನ್ನ ಜೀವದ ಹಂಗು ತೊರೆದು, ಕಿತ್ತೂರು ರಾಜ್ಯದ ಸ್ವಾತಂತ್ರ್ಯಕ್ಕೆ ಶ್ರಮಿಸಿದಳೆನ್ನಬಹುದು.

ರಾಣಿ ಚೆನ್ನಮ್ಮನ ದಿಟ್ಟ ನಿರ್ಧಾರದಿಂದ ಬ್ರಿಟಿಷ್ ಸೈನ್ಯ ತತ್ತರಿಸಿ ಹೋಗಿತ್ತೆಂದು, ಆಂಗ್ಲರು ನಿಸ್ಸಹಾಯಕ ಸ್ಥಿತಿಯಲ್ಲಿ ನಿಂತಿದ್ದಾರೆಂಬುದಕ್ಕೆ ಬ್ರಿಟಿಷ್ ಅಧಿಕಾರಿ ವಾಕರ್ ಘುಲ್ಲರ್‌ಟನ್‌ರು ಕ್ರಿ.ಶ.೧೮೨೪ರ ಅಕ್ಟೋಬರ್ ೨೩ ರಾತ್ರಿ ೮ ಗಂಟೆಗೆ ಧಾರವಾಡದ ಅಸಿಸ್ಟಂಟ್ ಕಲೆಕ್ಟರನಾದ ಕರ್ನಲ್ ಪಿಯರ್‌ಸನ್‌ನಿಗೆ ತಮ್ಮ ಸೈನ್ಯ ಸಂಕಷ್ಟದಲ್ಲಿರುವುದಾಗಿಯೂ "ಕೂಡಲೇ ಕಿತ್ತೂರಿಗೆ ಸೈನ್ಯ ಕಳಿಸಿರಿ, ಥ್ಯಾಕರೆ, ಕ್ಯಾಪ್ಟನ್‌ಬ್ಲಾಕ್‌ರು ಕೊಲ್ಲಲ್ಪಟ್ಟಿದ್ದಾರೆ. ಸಿವೆಲ್ ಇಷ್ಟರಲ್ಲೇ ಪ್ರಾಣ ಬಿಡುವನು. ಇಲಿಯಟ್ ಹಾಗೂ ಸ್ಟೀವನ್‌ಸನ್‌ರು ಏನಾಗಿದ್ದಾರೋ ಗೊತ್ತಿಲ್ಲ, ಬೇಗನೆ ಸೈನ್ಯ ಕಳಿಸಿಕೊಡಿರಿ"[೨೫] ಎಂದು ಬರೆದ ಪತ್ರವು ರಾಣಿಯ ಶೌರ್ಯದ ಸಾಕ್ಷಿಯಾಗಿದೆ.

ಅಕ್ಟೋಬರ್ ೨೪, ನವೆಂಬರ್ ೩೦ರಂದು ಚೆನ್ನಮ್ಮ ಚಾಪ್ಲಿನ್‌ರಿಗೆ "ಸಂಸ್ಥಾನದ ವಿಷಯದಲ್ಲಿ ನೀವು ಕಟುವಾಗಿ ವ್ಯವಹರಿಸುತ್ತಿದ್ದೀರಿ, ನಮ್ಮ ಸಂಸ್ಥಾನಕ್ಕೆ ಒಳಿತಾಗುವಂತೆ ನೀವು ಕಂಪನಿ ಸರ್ಕಾರಕ್ಕೆ ನೀವೇದಿಸಿರಿ" ಎಂದು ಬರೆದ ಪತ್ರದ ಮನವಿಯನ್ನು ಚಾಪ್ಲಿನ್ ಕೇಳಲಿಲ್ಲ. ಚಾಪ್ಲಿನ್‌ನು ಡಿಸೆಂಬರ್ ೧ರ ಒಳಗೆ ಬಂದು ಶರಣಾಗದಿದ್ದರೆ, ಯುದ್ಧ ಸಾರುವುದಾಗಿ ಘೋಷಿಸಿದನು. ಸ್ವಾಭಿಮಾನಿಯಾದ ರಾಣಿಯು ಶರಣಾಗಲಿಲ್ಲ. ಹಾಗಾಗಿ ಡಿಸೆಂಬರ್ ೩ರಂದು ಚಾಪ್ಲಿನ್ನನು ಸೇನಾನಿ ಡಿಕ್ಸನ್ನನಿಗೆ ಕೋಟೆ ಮೇಲೆ ದಾಳಿ ಮಾಡಲು ಆಜ್ಞೆಯಿತ್ತನು. ಡಿಸೆಂಬರ್ ೩, ೧೮೨೪ರಲ್ಲಿ ಯುದ್ಧವು ಪ್ರಾರಂಭವಾಯ್ತು. ರಾಣಿ ಹಾಗೂ ಆಕೆಯ ಅನುಯಾಯಿಗಳು ಧೀರತನದಿಂದ ಹೋರಾಟ ನಡೆಸಿದರು. "ಚೆನ್ನವ್ವನ ಮದ್ದಿಗೆ ಎಣ್ಣೆಯ ಉಗ್ಯಾರೊ ತಣ್ಣಾಗಾದವು ತೋಪುಗಳೆಲ್ಲ"[೨೬] ಎಂಬಂತೆ ಕಿತ್ತೂರಿನ ಮದ್ದಿನ ಕೋಣೆಯಲ್ಲಿ ಪಿತೂರಿ ನಡೆದು, 'ಮಹಾಂತವ್ವ ಗೆಜ್ಜೆ' ಎಂಬುವಳ ಸಹಾಯದಿಂದ ಮೋಸ ನಡೆದುಹೋಗಿತ್ತು. ಮದ್ದು, ಗುಂಡುಗಳು ಹಾರಲೇ ಇಲ್ಲ. ಬ್ರಿಟಿಷರ 'ಒಡೆದು ಆಳುವ ನೀತಿಯು ಫಲಿಸಿತು. ಬ್ರಿಟಿಷ್ ಅಧಿಕಾರಿಗಳು ಕೋಟೆಯೊಳಗೆ ನುಗ್ಗಿದರು. ಕಿತ್ತೂರಿನ ಹಲವಾರು ಮುಂದಾಳುಗಳನ್ನು ಸೆರೆಹಿಡಿದರು. ಚೆನ್ನಮ್ಮ ರಾಣಿ ಸಂಗೊಳ್ಳಿ ಮಾರ್ಗವಾಗಿ ಹೋಗುವಾಗ ಬ್ರಿಟಿಷರು ರಾಣಿಯನ್ನು ಬೆನ್ನಟ್ಟಿ ಬಂಧಿಸಿದರು. ಕಿತ್ತೂರಿನ ಕೋಟೆ ಬ್ರಿಟಿಷರ ವಶವಾಯ್ತು. ಚೆನ್ನವ್ವ ರಾಣಿಯನ್ನು ಬೈಲಹೊಂಗಲದಲ್ಲಿ ಸೆರೆಮನೆಯಲ್ಲಿಡಲಾಯ್ತು. "ದೇಶದೊಳು ಕಿತ್ತೂರಿಗೆ ಮೋಸವಾಯಿತು.

ಈಶ್ವರ ಮುನಿದಾನು ಚೆನ್ನವ್ವಗ।
ಬಾಲೆ ಚೆನ್ನವ್ವನು ಬಲದೊಳಗೆ ಸಿಕ್ಕಳು
ಕಿಲ್ಲೇಕ ಕೊಟ್ಟರು ಫರಂಗಿರಿಂದು"[೨೭]

ಹೀಗೆ ಬ್ರಿಟಿಷ್ ಕರ್ನಲ್ ಡೀಕನ್ ಮತ್ತು ಕರ್ನಲ್ ವಾಕರ್ ನೇತೃತ್ವದಲ್ಲಿ ಕಿತ್ತೂರು ಕೋಟೆ ಸ್ವಾಧೀನಪಡಿಸಿಕೊಂಡರು.

ಕಿತ್ತೂರ ರಾಣಿ ಚೆನ್ನಮ್ಮ ಹಾಗೂ ಸೊಸೆ ಈರವ್ವನನ್ನು ಕಿತ್ತೂರಿನಿಂದ ಹೊರಹಾಕುವ ಸಂದರ್ಭವನ್ನು ದೊಡ್ಡ ಭಾವೆಪ್ಪ ಮೂಗಿಯವರು ದಾಖಲಿಸಿದ್ದಾರೆ.

"ಕಿತ್ತೂರ ಚೆನ್ನವ್ವ ಕಿತ್ತೂರ ಬಿಡವಳ್ಳು
ಏಳನೂರ ಎಮ್ಮೆ ಎಳಗರ ಹೊಡಕೊಂಡು
ಹೊಂಗಲದ ಹಾದಿ ಹಿಡಿದಾಳಯ್ಯು
ಹೊಂಗಲ ಬಂದು ಹೊಗತಾಳವ್ವ"[೨೮]

ಹೀಗೆ ಸ್ವಾತಂತ್ರವೆಂಬ ದೀಪವನ್ನು ಕಿತ್ತೂರಿನಲ್ಲಿ ಹೊತ್ತಿಸಿದ ರಾಣಿ ಚೆನ್ನಮ್ಮ ಐದು ವರ್ಷಗಳ ಕಾಲ ಸೆರೆಮನೆಯಲ್ಲಿದ್ದು, ನಂತರ ಶಿವಾಧೀನಳಾದಳು. 'ಅಳಿವುದು ಕಾಯವು ಉಳಿಯುವುದಲ್ಲವೇ ಕೀರ್ತಿ ಇಳೆಯೊಳು' ಎಂಬಂತೆ ರಾಣಿಯ ಕೀರ್ತಿಯು ಇಂದಿಗೂ ಅಮರವಾಗಿ ಉಳಿದಿದೆ.

ಕೋಲಾರ ಜಿಲ್ಲೆಯ ಬಹುಭಾಗ, ಬೆಂಗಳೂರು ಜಿಲ್ಲೆಯ ಆಗ್ನೇಯ ಭಾಗ ಹಾಗೂ ಅದಕ್ಕೆ ಹೊಂದಿಕೊಂಡಂತೆ ಇರುವ ಇಂದಿನ ತಮಿಳುನಾಡಿನ ಧರ್ಮಗಿರಿ ಜಿಲ್ಲೆಯ ಹೊಸೂರು ಮತ್ತು ಡೆಂಕಣಿಕೋಟೆ ತಾಲೂಕಿನ ಹಲವು ಭಾಗಗಳು ಹಾಗೂ ಈಗಿನ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಪುಂಗನೂರು ಪ್ರದೇಶಗಳನ್ನು ಒಳಗೊಂಡ ಸುಗಟೂರು ಸಂಸ್ಥಾನದ ರಾಣಿಯರು ರಾಜಕೀಯ ಕ್ಷೇತ್ರಕ್ಕೆ ವಿಶೇಷ ಕೊಡುಗೆಗಳನ್ನು ನೀಡಿರುವುದು ಗಮನಾರ್ಹವಾದುದಾಗಿದೆ. ಸುಗಟೂರನ್ನು ಆಳಿದ ಚಿಕ್ಕರಾಯ ಚಿಕ್ಕ ತಮ್ಮೇಗೌಡನ ರಾಣಿ ವೀರಾಂಬಿಕೆ, ಇಮ್ಮಡಿ ತಮ್ಮೇಗೌಡನ ರಾಣಿ ವೆಂಕಟಾಂಬೆ, ಈತನಿಗೆ ಕೆಂಪಮ್ಮನೆಂಬ ಮಗಳೂ, ಹಲಸರ ಎಂಬ ಸೋದರಿಯೂ ಇದ್ದರೆಂಬ ಮಾಹಿತಿ ಮಾತ್ರ ದೊರೆವುದು. ಕ್ರಿ.ಶ.೧೪೭೮ರಿಂದ ೧೫೪೨ರ ವರೆಗೆ ಚಿಕ್ಕರಾಜ ಚಿಕ್ಕತಮ್ಮೇಂದ್ರನು ಸುಗಟೂರನ್ನು ಆಳಿದನು. ಆ ನಂತರದಲ್ಲಿ ಅವನ ಮಕ್ಕಳಿಂದಾಗಿ ರಾಜ್ಯವು ಇಬ್ಭಾಗವಾಯ್ತು. ಕ್ರಿ.ಶ.೧೫೬೦ರಲ್ಲಿ ಇಬ್ಭಾಗವಾದ ರಾಜ್ಯದ ಒಂದು ಭಾಗವಾದ ಕೋಲಾರ, ಮುಳಬಾಗಿಲು ಪ್ರದೇಶಗಳನ್ನು ಕಿರಿಯ ಮಗನಾದ ಚಿಕ್ಕರಾಯ ತಿಮ್ಮಯ್ಯಗೌಡನಾಳಿದರೆ, ಹೊಸಕೋಟೆ, ಆನೇಕಲ್ಲು ಪ್ರದೇಶಗಳನ್ನು ಹಿರಿಯ ಮಗನಾದ ಇಮ್ಮಡಿ ಚಿಕ್ಕರಾಯ ಆಳಿರುವನು. ಚಿಕ್ಕರಾಯ ತಿಮ್ಮಯ್ಯಗೌಡನು ಮೃತನಾದಾಗ ಮಗನಾದ ಚಿಕ್ಕರಾಯ ಬಸವಗೌಡನು ಆರು ವರ್ಷದ ಚಿಕ್ಕ ಬಾಲಕನಾದ ಕಾರಣವಾಗಿ ಆತನ ಸೋದರತ್ತೆಯಾದ ಹಲಸಮ್ಮ ಆತನ ಪೋಷಕಳಾಗಿ ನಿಂತಿದ್ದೂ ಅಲ್ಲದೆ, ಸಮರ್ಥ ಆಡಳಿತವನ್ನು ನಡೆಸಿದಳೆಂಬ ಮಾಹಿತಿ ದೊರೆಯುತ್ತದೆ. ಆಕೆಯ ಆಡಳಿತಾವಧಿಯಲ್ಲಿ ಬಿಜಾಪುರದ ರಣದುಲ್ಲಾಖಾನ ಮತ್ತು ಮರಾಠ ಸರದಾರ ಷಹಜಿಯರು ಆಕ್ರಮಣ ಮಾಡಿ ಬೆಂಗಳೂರು, ಹೊಸಕೋಟೆ, ಕೋಲಾರವನ್ನು

ಆಕ್ರಮಿಸಿದರು. ಆಗ ರಾಣಿ ಹಲಸಮ್ಮ ಚಿಕ್ಕರಾಯ ಬಸವಗೌಡನನ್ನು ಕರೆದುಕೊಂಡು ಕೋಲಾರವನ್ನು ಬಿಟ್ಟು 'ಆವಲಪಲ್ಲಿಯಲ್ಲಿ' ಬಂದು ನೆಲೆಸಿದಳೆಂಬ ಮಾಹಿತಿ ತಿಳಿದುಬರುತ್ತದೆ.

"ಕ್ರಿ.ಶ.೧೮೪೧ರಲ್ಲಿ ಇಮ್ಮಡಿ ಚಿಕ್ಕರಾಯನು ಮರಣ ಹೊಂದಿದಾಗ, ಆತನ ಮಗನಾದ ಇಮ್ಮಡಿ ಶಂಕರರಾಯನಿಗೆ ಕೇವಲ ಹನ್ನೊಂದು ವರ್ಷವಾದುದರಿಂದ ಅವನ ತಾಯಿ ರಾಣಿ ಚೆನ್ನಮ್ಮಾಜಿ ಮಗನ ರಕ್ಷಕ ಪ್ರಭುವಾಗಿ ಕ್ರಿ.ಶ.೧೮೪೭ರವರೆಗೆ ಆಳಿದಳೆಂಬ"[೨೯] ಮಾಹಿತಿ ದೊರೆಯುವುದು. ಈಕೆ ಸೋಂದೆಯ ಬಸವರಾಜನ ಕೊನೆಯ ಮಗಳು ಹಾಗೂ ನೆಲ್ಯಾಳದ ಚೌಡಮ್ಮಣ್ಣಿಯವರ ಮೊಮ್ಮಗಳು. ಈಕೆಯ ತಾಯಿ ಕೊಡಗಿನ ದೊಡ್ಡ ವೀರರಾಜ(ಕ್ರಿ.ಶ.೧೭೮೦–೧೮೦೯)ನ ಮಗಳಾದ ಚೆನ್ನಮ್ಮಾಜಿ ಎಂಬುದಾಗಿ ತಿಳಿದುಬರುತ್ತದೆ. ಹೀಗೆ ಸುಗಟೂರು ಸಂಸ್ಥಾನವು ಸೋದೆ, ನೆಲ್ಯಾಳ, ಕೊಡಗಿನೊಂದಿಗೆ, ಬದಾಮಿಯ ಕೂಳಗೇರಿ, ಸಿಂಧನೂರು ತಾಲ್ಲೂಕಿನ ಜವಳಗೆರೆಗಳೊಂದಿಗೆ ವೈವಾಹಿಕ ಸಂಬಂಧವನ್ನಿಟ್ಟುಕೊಂಡಿದ್ದರೆಂಬ ಮಾಹಿತಿ ತಿಳಿದುಬರುತ್ತದೆ.

ಶಂಕರರಾಯನ ನಂತರ ವೀರಬಸವರಾಜನು ಅಧಿಕಾರಕ್ಕೆ ಬಂದನು. ಈತನ ನಂತರ ಕ್ರಿ.ಶ.೧೯೧೧ರಿಂದ ಮಗನಾದ ಸಾಂಬಸದಾಶಿವರಾಯನು ಅಧಿಕಾರಕ್ಕೆ ಬಂದನು. ಈತ ತನ್ನ ಮಗಳನ್ನು ಕೂಳಗೇರಿಯ ಜಮೀನ್ದಾರನಿಗೆ ಕೊಟ್ಟು ವಿವಾಹ ಮಾಡಿದ್ದನು. ಈತನ ನಂತರ ಕ್ರಿ.ಶ.೧೯೨೫ರಲ್ಲಿ 'ಸೋಮಶೇಖರರಾಜನು' ಅಧಿಕಾರಕ್ಕೆ ಬಂದನು. "ಈತನನ್ನು ಸಿಂಧನೂರ ತಾಲ್ಲೂಕಿನ ಜವಳಗೆರೆ ಸಂಸ್ಥಾನದ ರಾಣಿ ಉಮನಾಬಾಯಿಯು ದತ್ತು ತೆಗೆದುಕೊಂಡಿದ್ದಳು. ಆದರೆ ನಿಜಾಮ ಸರ್ಕಾರವು ಕ್ರಿ.ಶ.೧೯೦೯–೧೦ರಲ್ಲಿ ಜವಳಗೆರೆ ನಾಡಗೌಡಕಿಯ ಅಧಿಕಾರವನ್ನು ರದ್ದುಗೊಳಿಸಿತು."[೩೦] ಹೀಗಾಗಿ "ಸೋಮಶೇಖರರಾಜನು ಕ್ರಿ.ಶ.೧೯೨೫ರಲ್ಲಿ ಅಧಿಕಾರಕ್ಕೆ ಬಂದನು. ಸಾಂಬಸದಾಶಿವರಾಯನು ಕ್ರಿ.ಶ.೧೯೨೫ರಲ್ಲಿ ಅಧಿಕಾರಕ್ಕೆ ಬಂದನು. ಸಾಂಬಸದಾಶಿವರಾಯನ ನಂತರ ಅಧಿಕಾರಕ್ಕೆ ಸೋಮಶೇಖರ ರಾಜನು ಬರಬೇಕೆಂದು ರಾಣಿ ಉಮನಾಬಾಯಿಯು ಪುಂಗನೂರು ಸಂಸ್ಥಾನದ ಪ್ರಸಿದ್ಧ ದಿವಾನನಾದ ಸೀತಾರಾಮರಾಯನ ಮೂಲಕ ಪ್ರಯತ್ನಿಸಿದ ವಿವರಗಳು ದಾಖಲಾಗಿವೆ."[೩೧]

ವಿಜಯನಗರ ಸಾಮ್ರಾಜ್ಯದ ಪತನಾನಂತರ ಕರ್ನಾಟಕದಲ್ಲಿ ಭಾರತೀಯ ಧರ್ಮ, ಭಾಷೆ, ಸಂಸ್ಕೃತಿಗಳು ನಾಶವಾಗುತ್ತಿರುವ ಕಠಿಣ ಪರಿಸ್ಥಿತಿಯಲ್ಲಿ ಅವುಗಳನ್ನು ರಕ್ಷಿಸಲು ಅನೇಕ ಸಣ್ಣಪುಟ್ಟ ದೇಸಗತಿ. ನಾಡಗೌಡಕಿ ಮೊದಲಾದ ದೇಶೀಯ ಸಂಸ್ಥಾನಗಳು ಹುಟ್ಟಿಕೊಂಡವು. ಅವುಗಳಲ್ಲಿ ರಾಯಚೂರು ಜಿಲ್ಲೆಯ ಗೆಜ್ಜಲಗಟ್ಟೆ ಸಂಸ್ಥಾನ, ಜವಳಗೆರೆ ಸಂಸ್ಥಾನ, ಮಾನ್ವಿ ಸಂಸ್ಥಾನಗಳು ವಿಷಮ ಸ್ಥಿತಿಯಲ್ಲಿ ಹಿಂದೂಧರ್ಮವನ್ನು ರಕ್ಷಿಸಲೆಂದೇ ಜನ್ಮ ತಾಳಿದವು. ಈ

ಸಂಸ್ಥಾನಗಳಲ್ಲಿ ವಿಶೇಷವಾಗಿ ಗೆಜ್ಜಲಗಟ್ಟೆ ಲಕ್ಷ್ಮೀದೇವಿ, ಜವಳಗೆರೆ ಉಮನಾಬಾಯಿಯರು ರಾಜಕೀಯ ಕೊಡುಗೆಗಳನ್ನು ನೀಡಿದ್ದಾರೆ.

ರಾಯಚೂರು ಜಿಲ್ಲೆಯ ಲಿಂಗಸೂಗೂರಿನಿಂದ ಆಗ್ನೇಯಕ್ಕೆ ೩೦ ಕಿ.ಮೀ. ದೂರದಲ್ಲಿರುವ ಗೆಜ್ಜಲಗಟ್ಟೆ ಸಂಸ್ಥಾನವು ಒಂದು ವಿಶಿಷ್ಟವಾದ ಸಾಂಸ್ಕೃತಿಕ ಹಿನ್ನೆಲೆಯನ್ನು ಪಡೆದಿದೆ. ಕ್ರಿ.ಶ.೧೮೭೪ರಲ್ಲಿ ಮಾನಪ್ಪ ನಾಡಗೌಡರ ಮಡದಿಯಾಗಿ ಗೆಜ್ಜಲಗಟ್ಟೆ ಮನೆತನಕ್ಕೆ ಬಂದ ರಾಣಿ ಲಕ್ಷ್ಮೀದೇವಿಯ ತವರುಮನೆ ಗದುಗಿನ ಹತ್ತಿರದ ಹಡಗಲಿ. ತಂದೆಯ ಹೆಸರು ಶಂಕರಗೌಡ ಬಹುಪತ್ನಿತ್ವವೆಂಬುದು ಅಂದು ಪ್ರತಿಷ್ಠೆಯ ವಿಷಯವಾದುದರಿಂದ ಮಾನಪ್ಪನಾಡಗೌಡರ ನಾಲ್ಕನೆಯ ಪತ್ನಿಯಾಗಿದ್ದ ಲಕ್ಷ್ಮೀದೇವಿಯು 'ವಜ್ರಾದಪಿ ಕಠೋರರಾಣಿ' ಎಂದು ಯುದ್ಧಕಲೆಯಲ್ಲೂ ಪಳಗಿದವಳಾಗಿದ್ದಳು. ಪತಿಯ ಮರಣದ ನಂತರ ತೆರವಾದ ಸಿಂಹಾಸನಕ್ಕೆ ಅಧಿಪತಿ ಇಲ್ಲದಾಗ "ರಾಣಿ ಲಕ್ಷ್ಮೀದೇವಿಯೇ ಆಡಳಿತ ಸೂತ್ರವನ್ನು ವಹಿಸಿಕೊಂಡಳು."[೩೨] ರಾಣಿ ಕತ್ತಿವರಸೆ, ಕುದುರೆಸವಾರಿಯಲ್ಲಿ ನಿಪುಣಳಾಗಿದ್ದಳು. ದರ್ಬಾರನ್ನು ನಡೆಸುತ್ತಿದ್ದಳು. ಗಂಡು ದಿಕ್ಕಿಲ್ಲದ ಸಂಸ್ಥಾನವನ್ನು ವಶಪಡಿಸಿಕೊಳ್ಳಲು ಗುಡಗುಂಟಿಯ ದೊರೆಗಳು ಪ್ರಯತ್ನಿಸಿದಾಗ, ರಾಣಿ ಲಕ್ಷ್ಮೀಬಾಯಿಯು ದೂರಾಲೋಚನೆಯನ್ನು ಮಾಡಿ, ಶತ್ರುಗಳ ದಂಡು ತಮ್ಮತ್ತ ಸಾಗಿ ಬರುವುದನ್ನು ಕಂಡು ರಾತ್ರಿಯಲ್ಲಿ ಹೊತ್ತಿಸಿದ ಪಂಜುಗಳನ್ನು ಹಿಡಿದು, ಶತ್ರುಗಳ ಸೈನ್ಯದೆದುರಿಗೆ ಸಾಗಿದರು. ಅದನ್ನು ಕಂಡ ಶತ್ರುಗಳು ಗೆಜ್ಜಲಗಟ್ಟೆಯ ಸೈನ್ಯವು ತಮ್ಮ ಸೈನ್ಯಕ್ಕಿಂತ ಹಿರಿದಾದುದೆಂದು ತಿಳಿದು ಅವರು ಓಡಿ ಹೋದರು. ಹೀಗೆ ರಾಣಿಯ ಸಮಯಪ್ರಜ್ಞೆಯಿಂದ ಬಂದೊದಗಿದ ಆಪತ್ತು ಹೂವಿನಂತೆ ಹಗುರವಾಯ್ತು. ಅಲ್ಲದೆ ರಾಣಿ ಲಕ್ಷ್ಮೀದೇವಿಯು ತನ್ನ ತವರುಮನೆಯಾದ ಗದುಗಿನ ಹತ್ತಿರದ ಹಡಗಲಿಯಿಂದ ಗದಗ, ರೋಣ, ಇಳಕಲ್ ಮಾರ್ಗವಾಗಿ ನಂದವಾಡಿಗೆ ಬಂದಾಗ, ಮೇನೆಯಲ್ಲಿದ್ದ ರಾಣಿಯನ್ನು ನಿಜಾಮ ಅಧಿಕಾರಿಗಳು ತಡೆದರು. ಇದರಿಂದ ತನ್ನ ಸ್ವಾಭಿಮಾನಕ್ಕೆ ಧಕ್ಕೆಯಾಯಿತೆಂದು ರಾಣಿಯು ಗೆಜ್ಜಲಗಟ್ಟೆಯ ಅಧಿಕಾರಿಗಳಿಗೆ ಅವರಿಗೆ ಪಾಠ ಕಲಿಸಲು ತಿಳಿಸಿದಳು. ಹೀಗೆ ರಾಣಿಯು ಸಮಯೋಚಿತವಾಗಿ ದಿಟ್ಟ ನಿರ್ಧಾರಗಳನ್ನು ತೆಗೆದುಕೊಂಡು ರಾಜ್ಯದ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ರಂಗದಲ್ಲಿ ತನ್ನ ಛಾಪನ್ನು ಬೀರಿದಳು.

ತನಗೆ ಮಕ್ಕಳಿಲ್ಲದಿರುವುದರಿಂದ ಲಕ್ಷ್ಮೀಬಾಯಿಯು ನಿಲೋಗಲ್ ಮನೆತನದ ಅಣ್ಣತಮ್ಮಂದಿರ ಸಂಬಂಧಿಗಳಾದ ಪಿಡ್ಡನಗೌಡ, ನಾಡಗೌಡರ ಮನೆತನದ ವೆಂಕಟರಾವರ ಮಗ ದೊಡ್ಡ ಬಸಂತರಾವ್‌ನನ್ನು ದತ್ತಕ ತೆಗೆದುಕೊಂಡು ಪಟ್ಟಕ್ಕೆ ಕೂಡಿಸಿದಳು. ಹೀಗೆ ರಾಣಿಯ ಸಮಯೋಚಿತ ಸೂಕ್ಷ್ಮಬುದ್ಧಿಯು ಗೆಜ್ಜಲಗಟ್ಟ ಸಂಸ್ಥಾನದ ಹಿರಿಮೆ ಹೆಚ್ಚಳಕ್ಕೆ ಕಾರಣವಾಯ್ತು.

ರಾಜಾ ವೆಂಕಟಮಹಿಪಾಲನ ಪತ್ನಿಯಾದ ಉಮನಾಬಾಯಿಯು ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಕೋಲಾಲಂಪುರದವಳು. ವಿದ್ಯಾವಂತೆಯೂ ಕುಶಲಮತಿಯೂ ಆಗಿದ್ದಳು. ರಾಜಾವೆಂಕಟ ಮಹಿಪಾಲನ ಮರಣದ ನಂತರ ಹಿರಿಯ ರಾಣಿ ನೀಲಮ್ಮಾಜಿ ಹಾಗೂ ಕಿರಿಯರಾಣಿ ಉಮನಾಬಾಯಿಯರ ನಡುವೆ ದತ್ತು ಸ್ವೀಕಾರದ ಬಗ್ಗೆ ವ್ಯಾಜ್ಯಗಳು ಪ್ರಾರಂಭವಾದವು. ಹಿರಿಯರಾಣಿ ನೀಲಮ್ಮಾಜಿಯು ಜವಳಗೆರೆ ಸಂಸ್ಥಾನದ ಮೂಲ ರಾಜಾ ಅಮರಪ್ಪ ನಾಡಗೌಡನ ವಂಶದವನಾದ ರಾಜ ಸಂಗಮೇಶ್ವರನನ್ನು ದತ್ತು ಸ್ವೀಕರಿಸಿದಳು. ರಾಣಿ ಉಮನಾಬಾಯಿಯು ತನ್ನ ಪತಿಯ ತಾಯಿ ರಾಣಿ ವಿಶಾಲಾಕ್ಷಮ್ಮನ ಸಂಬಂಧಿ ಪುಂಗನೂರಿನ ಸದಾಶಿವರಾಜನ ಅಣ್ಣನಾದ ಸೋಮಶೇಖರ ರಾಯನನ್ನು ದತ್ತು ಸ್ವೀಕರಿಸಿದಳು. ರಾಜಗದ್ದುಗೆಗಾಗಿ ಪ್ರಾರಂಭಗೊಂಡ ಇವರ ವ್ಯಾಜ್ಯ ಹೈದರಾಬಾದಿನಲ್ಲಿ ನಡೆದು ಕೇಸು ನೀಲಮ್ಮಾಜಿಯ ಕಡೆಗೆ ತೀರ್ಪಾಗಿ ರಾಜಾ ಸಂಗಮೇಶ್ವರನೇ ಅಧಿಕಾರ ವಹಿಸಿಕೊಂಡನು. ಆದರೆ ನೀಲಮ್ಮಾಜಿ ಬಹುಕಾಲ ಬಾಳಲಿಲ್ಲ. ಅದೇ ವರ್ಷ ತೀರಿಕೊಂಡಳು. ಅಲ್ಲದೆ ರಾಜಾ ಸಂಗಮೇಶ್ವರನು ತೀರಿಕೊಂಡನು. ಹೀಗಾಗಿ ಮತ್ತೆ ತೆರವಾದ ಸಿಂಹಾಸನಕ್ಕೆ ರಾಣಿ ಉಮನಾಬಾಯಿ ಅಧಿಕಾರ ವಹಿಸಿಕೊಂಡಳು. ಸ್ವತಃ ದರ್ಬಾರನ್ನು ನಡೆಸಿ, ಪುರುಷರಲ್ಲಿ ಕಂಪನ ಮೂಡಿಸಿದ ರಾಣಿಯ "ಮಸೀದಿ ಪ್ರಕರಣವನ್ನು ಗಂಭೀರವಾಗಿ ಪರಿಗಣಿಸಿದ ಹೈದರಾಬಾದ್ ಸರ್ಕಾರವು ಕ್ರಿ.ಶ.೧೯೪೯–೧೦ರಲ್ಲಿ ಜವಳಗೆರೆ ಸಂಸ್ಥಾನವನ್ನು ರದ್ದುಗೊಳಿಸಿತು."[೩೩] ಹೀಗಾಗಿ ರಾಣಿ ಉಮನಾಬಾಯಿಯು ದತ್ತು ಸ್ವೀಕರಿಸಿದ ಸದಾಶಿವರಾಜನು ಪುಂಗನೂರಿನಲ್ಲಿ ಕ್ರಿ.ಶ.೧೯೨೫ರಲ್ಲಿ ಆಡಳಿತ ವಹಿಸಿಕೊಂಡನು. ವಿರೂಪನ ಗೌಡನ ಪ್ರಯತ್ನದಿಂದಾಗಿ ರಾಣಿಯು 'ಚೌರಸ್' ಅಧಿಕಾರ ಅಂದರೆ ಜವಳಗೆರೆಯ ಕಂದಾಯ ಸಂಗ್ರಹಿಸುವ ಹಕ್ಕನ್ನು ಪಡೆದಳು. ಹೀಗೆ ಸಾರ್ಥಕ ಬದುಕನ್ನು ಸಾಗಿಸಿದ ರಾಣಿ ಉಮನಾಬಾಯಿ ಕ್ರಿ.ಶ.೧೯೩೬ರಲ್ಲಿ ಶಿವಸಾನ್ನಿಧ್ಯವನ್ನು ಪಡೆದಳು.

ಒಂದು ದೊಡ್ಡ ಸಾಮ್ರಾಜ್ಯದ ಅಳಿವು, ಉಳಿವುಗಳಿಗೆ ಆ ಸಾಮ್ರಾಜ್ಯದಲ್ಲಿನ ಸಾಮಂತ– ಮಾಂಡಲಿಕರ ನಿಷ್ಠೆಯನ್ನು ಅವಲಂಬಿಸಿರುತ್ತದೆ. ಕರ್ನಾಟಕ ಸಂಸ್ಕೃತಿಯ ಹಿರಿಮೆ–ಗರಿಮೆಯನ್ನು ನೆರೆಯ ಆಂಧ್ರದವರೆಗೂ ವಿಸ್ತರಿಸಿದ ಕೀರ್ತಿ ಹಂಡೆ ರಾಣಿಯರಿಗೆ ಸಲ್ಲುತ್ತದೆ.

ಹಂಡೆಯ ಚಿಕ್ಕನಾಯಕ ಸಾಹೇಬನ ರಾಣಿಯಾದ ಸಂಗನಾಗರಿ ನಾಗತಿಯು ಆನೆಗೊಂದಿ ಅರಸರ ಅಪ್ಪಣೆ ಪಡೆದು ಯುದ್ಧ ಮಾಡಿ, ಬಳ್ಳಾರಿಯನ್ನು ವಶಪಡಿಸಿಕೊಂಡು, ತನ್ನ ಮಗ [illegible] ಕ್ರಿ.ಶ.[illegible]ರಲ್ಲಿ ಪಟ್ಟಗಟ್ಟಿದಳು. ಈತ ಸಮರ್ಥ ಆಡಳಿತ ನಡೆಸಿದನೆಂಬ ಅಂಶ ತಿಳಿಯುವುದಲ್ಲದೆ ಇನ್ನಿತರ ಮಾಹಿತಿಗಳು ದೊರೆಯುವುದಿಲ್ಲ.

ದ್ಯಾವಪ್ಪ ನಾಯಕನ ಕಿರಿಯ ಹೆಂಡತಿಯೂ ಚಿಕ್ಕರಾಮಪ್ಪನಾಯಕನ ತಾಯಿಯಾದ ಈಕೆ ಹಂದರಹಾಳಿಗೆ ಬಂದು, ಸಿದ್ಧಪ್ಪನಾಯಕನ ಮಕ್ಕಳಾದ ದೊಡ್ಡತಲೆ ರಾಮಪ್ಪನಾಯಕನಿಗೆ ಪಟ್ಟಗಟ್ಟಿದಳು. ಹೀಗೆ ಪಟ್ಟಗಟ್ಟುವಾಗ "ಸಿದ್ಧಪ್ಪನಾಯಕ ಆತನ ತಮ್ಮ ಪ್ರಸನ್ನನಾಯಕ ಇವರಿಬ್ಬರೂ ಇದ್ದರೆ ತನ್ನ ಅಧಿಕಾರ ಸಾಗದೆಂದು ತಿಳಿದು ಅವರಿಬ್ಬರನ್ನು ಶಿರಚ್ಛೇದನ ಮಾಡಿಸಿದಳೆಂಬ ಸಂಗತಿ ಕೈಫಿಯತ್ತುಗಳಿಂದ ತಿಳಿದುಬರುತ್ತದೆ."[೩೪] "ದೊಡ್ಡ ತಲೆ ರಾಮಪ್ಪನಾಯಕನು ಅಪ್ರಾಪ್ತ ವಯಸ್ಸಿನವನಾದ್ದರಿಂದ ಅವನನ್ನು ಮುಂದಿಟ್ಟುಕೊಂಡು ಶಕ ೧೬೫೩ ವಿರೋಧಿಕೃತ ಸಂವತ್ಸರದಿಂದ ೧೬೫೬ನೇ ಆನಂದ ಸಂವತ್ಸರದವರೆಗೆ ಸು.ನಾಲ್ಕು ವರ್ಷ ಕಾಲ ರಾಜ್ಯ ಆಳಿದಳು. ಅಲ್ಲದೆ ಶಿವಾಜಿಯ ಅಂಗರಕ್ಷಕನನ್ನು ಕೊಲ್ಲಿಸಿದಳು. ದೊಡ್ಡತಲೆ ರಾಮಪ್ಪನಾಯಕನು ಪ್ರಾಪ್ತ ವಯಸ್ಕನಾದಾಗ ರಾಣಿಗೂ, ಈತನಿಗೂ ಮನಸ್ತಾಪವುಂಟಾಗಿ ತಾಯಿಯಾದ ನೀಲಮ್ಮನನ್ನು ಕೊಲ್ಲಿಸಿದನೆಂಬ ಅಂಶ ತಿಳಿದುಬರುತ್ತದೆ."[೩೫]

ಹನಮಪ್ಪನಾಯಕನು ಕೆಂಚನಗುಡ್ಡದಲ್ಲಿರುವಾಗ ಸಿದ್ಧರಾಮವ್ವ ಎಂಬ ಬ್ರಾಹ್ಮಣಳನ್ನು ಪ್ರೀತಿಸಿದ್ದ. ಅಲ್ಲದೆ ಆಕೆಗೆ ಒಂದು ಅನಾಥ ಗಂಡುಮಗುವನ್ನು ತಂದುಕೊಟ್ಟಿದ್ದ. ಆ ಮಗುವೇ ದೊಡ್ಡಪ್ಪನಾಯಕ. ಹನುಮಪ್ಪನಾಯಕನ ನಂತರ ಅವನ ಹೆಂಡತಿಯಾದ ಪದ್ದಮ್ಮ ತನ್ನ ಅಣ್ಣ ಚೆನ್ನಬಸಪ್ಪ ಒಂದು ವರ್ಷದ ಮಗುವಿಗೆ ದ್ಯಾವಪ್ಪನಾಯಕನೆಂದು ಹೆಸರಿಟ್ಟು, ಅವನಿಗೆ ಪಟ್ಟಗಟ್ಟಿದಳು. ಅಷ್ಟೇ ಅಲ್ಲದೇ ದೊಡ್ಡಪ್ಪನಾಯಕನನ್ನು ಕೊಲ್ಲಲು ಪ್ರಯತ್ನಿಸಿದಳು. ಆದರೆ ಆ ಪ್ರಯತ್ನವನ್ನು ವಿಫಲಗೊಳಿಸಿ, ದೊಡ್ಡಪ್ಪನಾಯಕನ ಪ್ರಾಣ ಉಳಿಸಿದ್ದಲ್ಲದೇ ಅವನಿಗೆ ರಾಜ್ಯಾಧಿಕಾರವನ್ನು ಕೊಟ್ಟ ಕೀರ್ತಿ ದೊಡ್ಡತಲೆ ರಾಮಪ್ಪನ ರಾಣಿ ಸಿದ್ಧವ್ವನಿಗೆ ಸಲ್ಲುತ್ತದೆ.

ತೆಕ್ಕಲಕೋಟೆ ಹತ್ತಿರವಿರುವ ಕಾಂಚನಗಡವು ಬಾಲದ ಹನುಮಪ್ಪನಾಯಕನಿಗೆ ಬಿಜಾಪುರದ ಸುಲ್ತಾನನಿಂದ ಕೊಡುಗೆಯಾಗಿ ಬಂದಿತ್ತು. ತೆಕ್ಕಲಕೋಟೆ ಅರಸ ಪಂಪಾವತಿಗೌಡನ ಪತ್ನಿಯಾದ ತಂಗಮ್ಮ ಪತಿಯು ಕಾಲವಾದ ನಂತರ ರಾಜಗದ್ದುಗೆಯನ್ನೇರಿದಳು. ರಾಣಿ ತಂಗಮ್ಮಳ ಇಬ್ಬರು ಮಕ್ಕಳನ್ನು ಟಿಪ್ಪು ಸುಲ್ತಾನನು ಸೆರೆಹಿಡಿದನು. ಒಬ್ಬ ಮಗನನ್ನು ಕೊಂದು, ಮತ್ತೊಬ್ಬ ಮಗನನ್ನು ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸಿ ಬಿಡುಗಡೆಗೊಳಿಸಿದನು. ಹಿಂತಿರುಗಿ ರಾಜ್ಯಕ್ಕೆ ಬಂದ ಮಗನನ್ನು ರಾಣಿ ತಂಗಮ್ಮ ಸ್ವೀಕರಿಸದೆ ಇಸ್ಲಾಂ ಧರ್ಮ ಸ್ವೀಕರಿಸಿದ ನೀನು ತನ್ನ ಮಗನೇ ಅಲ್ಲವೆಂದು ತಿರಸ್ಕರಿಸಿ ಹಿಂದೂ ಧರ್ಮದ ಏಳ್ಗೆಗೆ ಶ್ರಮಿಸಿದಳು. ಕೆಲ ಕಾಲಾನಂತರ ರಾಣಿಯು ತನ್ನ ರಾಜ್ಯವನ್ನು ಬ್ರಿಟಿಷರಿಗೆ ಒಪ್ಪಿಸಿ, ಜೀವಾವಧಿ ವೃತ್ತಿಯನ್ನು ಪಡೆದಳೆಂಬ ಮಾಹಿತಿ ತಿಳಿದುಬರುತ್ತದೆಯಾದರೂ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ.

### ೪.೧೧. ರಾಣಿಯರ ಆಡಳಿತ ವ್ಯವಸ್ಥೆ

ಹಿಂದಿನಿಂದಲೂ ಬೆಳೆದು ಬಂದ ರಾಜಪದ್ಧತಿಯಲ್ಲಿ ರಾಜನೇ ಸರ್ವತಂತ್ರ ಸ್ವತಂತ್ರ ಸರ್ವಾಧಿಕಾರಿ ಎಂಬುದು ಸತ್ಯವಾದರೂ ಕರ್ನಾಟಕ ಇತಿಹಾಸದಲ್ಲಿ ರಾಣಿಯರೂ ರಾಜನಂತೆ ಸ್ವತಂತ್ರ ಆಳ್ವಿಕೆ ಮಾಡಿದ ಉಲ್ಲೇಖವಿದೆ. ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಭಾಗಗಳನ್ನು ಆಳಲು ನೇಮಿಸುತ್ತಿದ್ದನು. ರಾಣಿಯರು "ಅಸೂರ್ಯಂ ಪಶ್ಯೆ"ಯರಾಗಿರಲಿಲ್ಲ. ಅಂದರೆ ಸೂರ್ಯನ ಬೆಳಕನ್ನೇ ಕಾಣದಷ್ಟು ಸುರಕ್ಷಿತವಾಗಿ ಅಂತಃಪುರದಲ್ಲೇ ಇರುವಂಥವರಾಗಿರಲಿಲ್ಲ"[೩೭] ವೆಂದು ಡಾ.ಎಂ.ಚಿದಾನಂದಮೂರ್ತಿಯವರು ದಾಖಲಿಸಿದ್ದಾರೆ. ಹೀಗಾಗಿ ಅಂದು ರಾಣಿಯರು ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು.

ಕಲ್ಯಾಣ ಚಾಲುಕ್ಯರಸ ಆರನೇ ವಿಕ್ರಮಾದಿತ್ಯನು ತನ್ನ ಆಡಳಿತದ ಅನುಕೂಲತೆಗಾಗಿ ರಾಜಕೀಯ ಸೂತ್ರವನ್ನು ರಾಣಿಯರಿಗೆ ವಹಿಸಿಕೊಟ್ಟಿದ್ದನು. ಅವರಲ್ಲಿ ರಾಣಿ ಲಕ್ಷ್ಮೀದೇವಿ ಪ್ರಮುಖಳು. ಈತನ ಆಳ್ವಿಕೆಯ ಐದನೇ ವರ್ಷದಲ್ಲಿ ಅಂದರೆ ಕ್ರಿ.ಶ.೧೦೮೦ರಲ್ಲಿಯೆ ದೋಣಿಯನ್ನು, ಕ್ರಿ.ಶ.೧೦೮೪ರಲ್ಲಿ ಕಲ್ಯಾಣವನ್ನು, ೧೯೫–೯೬ರಲ್ಲಿ ಹದಿನೆಂಟು ಅಗ್ರಹಾರ ಮತ್ತು ಡಂಬಳವನ್ನು ೧೧೧೦–೧೧ರಲ್ಲಿ ನಿಡಸಿಂಗಿಯನ್ನು, ೧೧೧೧–೧೨ರಲ್ಲಿ ಬೆಡಗಿಯನ್ನು ಆಳಿದಳು."[೩೮] ಸು.೩೦ ವರ್ಷಗಳವರೆಗೆ ಅವಿರತವಾಗಿ ಬೇರೆ ಬೇರೆ ಪ್ರದೇಶಗಳಿಂದ ರಾಜ್ಯಾಡಳಿತ ನಡೆಸಿದಳು.

ಗ್ರಾಮಗಳ ಒಕ್ಕೂಟವೇ ರಾಜ್ಯ. ರಾಜ್ಯದ ಒಡೆಯ ರಾಜ. ಒಂದು ರಾಜ್ಯದ ಜನತೆ ಸುಖವಾಗಿರಲು ಪ್ರೇರಕ ಶಕ್ತಿ ರಾಜ್ಯದ ಒಡೆಯನೇ ಆಗಿದ್ದಾನೆ. ಒಂದು ರಾಜ್ಯದ ಒಡೆತನವನ್ನು ರಾಜನಂತೆಯೇ ರಾಣಿಯರೂ ದಕ್ಷವಾಗಿ ನಿರ್ವಹಿಸಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಕೆಳದಿ ರಾಣಿ ಚೆನ್ನಮ್ಮಾಜಿಯು ಆಡಳಿತ ನಿರ್ವಹಣೆಯಲ್ಲಿ ವಿಜಯನಗರದ ಅರಸರನ್ನೇ ಅನುಕರಿಸಿದ್ದಾಳೆ. ಒಂದು ರಾಜ್ಯದ ಸಂಪೂರ್ಣ ನಿರ್ವಹಣೆ ಏಕವ್ಯಕ್ತಿಯಿಂದ ಅಸಾಧ್ಯವಾದುದು. ಹೀಗಾಗಿಯೇ ಅಧಿಕಾರ ವಿಕೇಂದ್ರೀಕರಣ ಪದ್ಧತಿ ಹುಟ್ಟಿದೆ ಎನ್ನಬಹುದು.

ಆಡಳಿತದ ಸೌಕರ್ಯಕ್ಕಾಗಿ ದೇಶ, ಪ್ರಾಂತ, ನಾಡು, ವಿಷಯ, ಭುಕ್ತಿ, ಮಂಡಲ, ಅಗ್ರಹಾರ ಮುಂತಾಗಿ ವಿಂಗಡಿಸಿದ್ದರು. ಕೆಳದಿಯ ಹಲವು ದಾಖಲೆಗಳಲ್ಲಿ ರಾಜ್ಯ, ವೇಠೆ, ಸೀಮೆ, ಕಂಪಣ ನಾಡು, ಮಂಡಲ, ಹೋಬಳಿ ಪದಗಳು ಬಳಕೆಯಾಗಿವೆ. ಹರತಾಳ ಸೀಮೆ, ಬಯಲಸೀಮೆ, ದಾನಿವಾಸದ ಸೀಮೆ, ಮುಂನಿನಾಡ ಸೀಮೆ, ಮದುವಂಕನಾಡ ಸೀಮೆ, ಕಲುಸೆಸೀಮೆ, ಆಲುಮನೆ ಸೀಮೆ ಇತ್ಯಾದಿ ಸೀಮೆಗಳ ಬಗ್ಗೆಯೂ ಉಲ್ಲೇಖವಿದೆ. ಕ್ರಿ.ಶ.೧೫೫೭ರ ಶಾಸನದಲ್ಲಿ ಆರಗ ರಾಜ್ಯದಲ್ಲಿ ೫೦ ನಾಡುಗಳಿದ್ದವೆಂದು, ಅಲ್ಲದೆ ಕ್ರಿ.ಶ.೧೫೯ರ ಕೆಳದಿ ಶಾಸನ

೩೬ ಕಂಪಣಗಳು, ಬಿದರೂರಿನ ೧೫೫೨ರ ಶಾಸನ ಆರಗದಲ್ಲಿ ೧೮ ಕಂಪಣಗಳು ಇದ್ದವೆಂದು ಉಲ್ಲೇಖವಿದೆ. ಅಂದಿನ ಕಾಲದಲ್ಲಿ ನಾಡು ಕಂಪಣ ಪದಗಳು ಬಳಕೆಯಲ್ಲಿದ್ದವು. ಆರಗ, ಗುತ್ತಿ, ಬಾರಕೂರು, ಮಂಗಳೂರು, ತುಳು ರಾಜ್ಯಗಳು ಕೆಳದಿಯ ಪ್ರಧಾನ ಭಾಗಗಳಾಗಿದ್ದವು.

**ಅಮರಮಾಗಣಿ**

'Estate given to an Amara Nayak' ಸೈನಿಕ ನಿರ್ವಹಣೆಗಾಗಿ ಅಮರನಾಯಕ ತನ್ನ ರಾಜನಿಂದ ಪಡೆದ ಜಹಗೀರು ಆಗಿದೆ. ಸ್ವಾದಿ ಸಂಸ್ಥಾನಿಕರು ತಮ್ಮ ರಾಜ್ಯವನ್ನು ಅನೇಕ ಭಾಗಗಳಾಗಿ ವಿಂಗಡಿಸಿದ್ದರು. ವಿಜಯನಗರದ ಅರಸರಿಂದ ವರದಿಕೊಪ್ಪವನ್ನು ಸ್ವಾದಿ ಅರಸರು ಅಮರಮಾಗಣಿಯಾಗಿ ಪಡೆದರು. ಇವರು ವಿಜಯನಗರದ ಅರಸರೊಂದಿಗೆ ನಿಕಟ ಸಂಬಂಧ ವನ್ನಿರಿಸಿಕೊಂಡು ನಿಷ್ಠೆಯಿಂದ ನಡೆದುಕೊಂಡುದುದರಿಂದ "ವಿಜಯನಗರದ ಅರಸು ವೆಂಕಟಪತಿ ರಾಯ ತನ್ನ ಅರಮನೆಯಲ್ಲಿ ಪೂಜಿಸುತ್ತಿದ್ದ ರಾಮ ಮತ್ತು ಸೀತೆಯ ವಿಗ್ರಹವನ್ನು ಶಕ ೧೫೨೫ರಲ್ಲಿ ರಾಮಚಂದ್ರನಾಯಕನಿಗೆ ಕೊಟ್ಟುದನ್ನು ತಾಮ್ರಶಾಸನವು ತಿಳಿಸುತ್ತದೆ.[೩೮]

ವಳಿತ ಅಥವಾ ಸೀಮಾವಿಭಾಗವು ಮಂಡಲ, ರಾಜ್ಯಭಾಗ, ಸಾಮಂತ ಮಂಡಲವೆಂಬ ಆಡಳಿತ ವಿಭಾಗಗಳು ಸೋದೆ ಅರಸರ ಕಾಲದಲ್ಲೂ ಕಂಡುಬರುತ್ತವೆ. ನಾಡು, ಸೀಮೆ, ಸುಭೆ ಎಂಬ ಪದಗಳು ಕೆಳದಿ, ಸೋದೆ, ಬಿಳಗಿ ಪ್ರದೇಶದಲ್ಲೂ ಬಳಕೆಯಲ್ಲಿದ್ದವು. ಸ್ವಾದಿ ಸಂಸ್ಥಾನದಲ್ಲಿ ರಾಜನಿಗೆ ಸಹಾಯಕರಾಗಿ ಮಂತ್ರಿ ಸೇನಾಪತಿ, ನಿಯೋಗಿ, ರಾಯಸದವ, ಕರಣಿಕ, ದಂಡನಾಯಕ, ಜೋತಿಷಿ, ವೈದ್ಯ, ಪುರೋಹಿತ, ವಿದ್ವಾಂಸ, ಭರತಜ್ಞ, ಪಾಠಕ, ಗಾಯಕ, ಪರಿಹಾಸಕ, ಕವೀಶ್ವರ ಮುಂತಾದವರು ಇರುತ್ತಿದ್ದರು. ಸಂಸ್ಥಾನದಲ್ಲಿ ೫೨ ಹಳ್ಳಿಗಳಿದ್ದು ಪ್ರತಿ ಹಳ್ಳಿಗಳ ಸೀಮೆಗೆ ಸೀಮೆ(ಹೆಗ್ಡೆ) ಮುಖ್ಯಸ್ಥ ಇರುತ್ತಿದ್ದನು.

ಹಾಗಲವಾಡಿ ನಾಯಕರು ಅಮರ ನಾಯಕರಾಗಿದ್ದು 'ದೇಶ' ಎಂಬ ಪ್ರಾದೇಶಿಕ ವಿಭಾಗವನ್ನು ಮಾಡಿದ್ದರು. ಈ ದೇಶವು ಅನೇಕ ರಾಜ್ಯಗಳು, ಮಂಡಲಗಳನ್ನು ಹೊಂದಿರುತ್ತಿತ್ತು. ಇವರು ಕೂಡ ರಾಜ್ಯವನ್ನು ಹಲವು ವಿಭಾಗಗಳಾಗಿ ವಿಂಗಡಿಸುತ್ತಿದ್ದರು. ಅನೇಕ 'ಸೀಮೆ'ಗಳನ್ನು ಇವರು ಹೊಂದಿದ್ದರು. ಬಿದುರೆ ಸೀಮೆ, ನೊಣಬನಕೆರೆ ಸೀಮೆ, ಶೆಟ್ಟಿಕೆರೆ ಸೀಮೆ, ಕಂದಿಕೆರೆ ಸೀಮೆ, ಹೊನ್ನವಳ್ಳಿ ಸೀಮೆ ಇತ್ಯಾದಿಗಳು ಪ್ರಮುಖ ಸೀಮೆಗಳಾಗಿದ್ದವು.

ಕಳಲೆ ದಳವಾಯಿಗಳು ರಾಜ್ಯವನ್ನು ಹಲವು ವಿಭಾಗಗಳಾಗಿ ವಿಂಗಡಿಸಿದ್ದರು. ಜಾಂಬಳ್ಳಿ, ನಗರವನಂತಗಿರಿ, ನುಗ್ಗೆಹಳ್ಳಿ, ಕಡಲೂರು, ಶಕಪುರ, ಡೆಂಕಣಿಕೋಟೆ, ಕಡಬ, ಹೆಬ್ಬೂರು, ಮದ್ದೂರು, ಮಾಗಡಿ, ಚಿಕ್ಕನಾಯಕನ ಹಳ್ಳಿ, ಸೂಲಗಿರಿ, ಬಳ್ಳಪುರ, ಬೆಳ್ಳೂರು, ಹರದಳ್ಳಿ, ಸಿಂಹಾಸನಪುರ, ಫಣಿಪುರ, ಬೇಲೂರು, ನರಸಿಂಹಪುರ, ಕಿಕ್ಕೇರಿ, ಹಾರ್ನಹಳ್ಳಿ, ಅರಕಲಗೂಡು,

ದೋರಾಂಬುಧಿ, ತುರುಗೆರೆ, ದೇವರಾಯ ದುರ್ಗ, ತುಮಕೂರು, ಚನ್ನಪಟ್ಟಣ, ಕುಣಿಗಲ್, ಮದ್ದಗಿರಿ, ಹೊಸೂರು, ಯಳಂದೂರು, ಹುಲಿಯೂರುದುರ್ಗ, ವಿಂಡಕಲ್ಲು, ಸತ್ಯಮಂಗಲ, ಕಂಡಿಕೆರೆ, ಹೊನ್ನುವಳ್ಳಿ, ಧಾರಾಪುರ, ಶಾಲ್ಯ, ನಾಮಕಲ್ಲು, ಪಿರಿಯಾಪಟ್ಟಣ, ಮುತ್ತೂರು ಇವು ಪ್ರಮುಖ ಆಡಳಿತ ಸ್ಥಳಗಳಾದ್ದವು.

ಕಿತ್ತೂರಿನ ರಾಣಿ ಚೆನ್ನಮ್ಮಾಜಿಯು ರಾಜ್ಯವನ್ನು ಹಲವು ವಿಭಾಗಗಳಾಗಿ ವಿಂಗಡಿಸಿದ್ದಳು. ಒಕ್ಕುಂದ, ಬೆಳವಡಿ, ದೇಮಟ್ಟಿ, ಎಡಾಲ, ಸಾಣಿಕೊಪ್ಪ, ನಾವಲಗಟ್ಟಿ, ತಪಗುಂದ, ಕಾದ್ರೊಳ್ಳಿ, ಕರ್ಚಲಗಟ್ಟಿ, ಹಣ್ಣಿಕೇರಿ, ಬನ್ನಿಕೊಪ್ಪ, ಅಂಬಡಗಟ್ಟೆ, ಸವಣೂರು, ಶಿರಹಟ್ಟಿ, ಸೀಗಿಹಟ್ಟಿ, ಹೂಲಿ ಕಟ್ಟಿ, ಮೇಟ್ಯಾಲ, ಖೋದಾನಪುರ, ನಂದಿಹಳ್ಳಿ, ದೇಸನೂರು ಇವು ಪ್ರಮುಖ ಗ್ರಾಮಗಳಾಗಿದ್ದವು.

**ಅಧಿಕಾರಿವರ್ಗ**

'ಯಥಾ ರಾಣಿ ತಥಾ ಪ್ರಜಾ' ಎಂಬಂತೆ ಸಮರ್ಥ ಒಡತಿ ತನ್ನ ಆಡಳಿತದಲ್ಲಿ ಸಮರ್ಥ ಅಧಿಕಾರಿವರ್ಗವನ್ನು ಹೊಂದಿರಲು ಸಾಧ್ಯ. ದಕ್ಷ ಅಧಿಕಾರಿಯನ್ನು ನೇಮಿಸುವ ಹಾಗೂ ಅದಕ್ಷ ಅಧಿಕಾರಿಯನ್ನು ತೆಗೆದುಹಾಕುವ ಸ್ವತಂತ್ರವಾದ ಅಧಿಕಾರ ರಾಣಿಯದಾಗಿತ್ತು. ಹಾವಿನಹಾಳ ನರಸಪಯ್ಯನನ್ನು ಪ್ರಧಾನಿ ಸ್ಥಾನದಿಂದ ಕಿತ್ತೊಗೆದು ಗುರುಬಸಪ್ಪ ದೇವನನ್ನು ಪ್ರಧಾನಿಯಾಗಿ ನೇಮಿಸಿದಳು. ಅದರಂತೆ ತಿಮ್ಮಣ್ಣ ಎಂಬ ಪ್ರಧಾನಿಯು ತನ್ನ ಅಧಿಕಾರ ದುರುಪಯೋಗಪಡಿಸಿಕೊಂಡ ಕಾರಣವಾಗಿಯೇ ರಾಣಿ ಹಾಗೂ ತಿಮ್ಮಣ್ಣರಲ್ಲಿ ವೈಮನಸ್ಸು ಉಂಟಾದುದಾಗಿ ವಿದೇಶಿ ಪ್ರವಾಸಿ ಜಾನ್ ಪ್ರಾಯರ್‌ನು 'Timi naig that from a Toddy man' ಎಂದು ಉಲ್ಲೇಖ ಮಾಡುತ್ತಾನೆ. ಆಹುಬಲರಾಯನು 'ಮಕ್ಕರನಾಡು ಸೀಮೆಗೆ ಕ್ರಿ.ಸ.೧೬೬೧ರಲ್ಲಿ ಕಂದಾಯ ಅಧಿಕಾರಿಯಾಗಿದ್ದನು. ತಿಮ್ಮಯ್ಯನು ಲೆಕ್ಕ ಪತ್ರ ಪರಿಶೋಧನೆ, ಶ್ರೀನಿವಾಸಯ್ಯ ಹಣಕಾಸು ಸಂಸ್ಥೆಯನ್ನು, ವೆಂಕಟಪ್ಪಯ್ಯನು ಕರಣಿಕ, ಬೊಕ್ಕಸದ ಸಿದ್ಧಬಸವಯ್ಯ ಖಜಾನೆ ಅಧಿಕಾರಿಯೂ, ಭದ್ರಪ್ಪ ದಳವಾಯಿಯಾಗಿಯೂ, ಕಾಸರಗೋಡು ತಿಮ್ಮಪ್ಪ ರಕ್ಷಕನಾಗಿಯೂ ಕೊಳ್ಳಾಲದ ವೆಂಕಪ್ಪಯ್ಯ ರಾಯಭಾರಿಯಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು.

ರಾಣಿ ವೀರಮ್ಮಾಜಿಯ ಕಾಲದಲ್ಲಿ ನಾರಾಯಣ ಮುಳಿಯ, ಶೀನಪ್ಪಯ್ಯ ಮತ್ತು ಗೋವಿಂದಭಟ್ಟರು ಅಧಿಕಾರಿಗಳಾಗಿದ್ದರು. ರಾಣಿಯು ಅದಕ್ಷರಿಗೆ ಶಿಕ್ಷಿಸುವ ಅಧಿಕಾರವನ್ನು ಹೊಂದಿದ್ದಳು. ರಾಣಿ ವೀರಮ್ಮಾಜಿಯು ಮೊದಲು ಪ್ರಧಾನಿಯಾಗಿದ್ದ ಲಿಂಗಣ್ಣನನ್ನು ಬಂದಿಖಾನೆಯಲ್ಲಿರಿಸಿ ನಿರ್ವಾಣಯ್ಯನನ್ನು ಪ್ರಧಾನಿಯಾಗಿಸಿಕೊಂಡಳು. ಹೀಗೆ ಒಂದು ಬೃಹತ್ ಸಂಸ್ಥಾನವನ್ನು ಸಮರ್ಥವಾಗಿ ನಿರ್ವಹಿಸಲು ಪ್ರಬಲ ಅಧಿಕಾರವರ್ಗವನ್ನು ರಾಣಿಯು ಹೊಂದಿದ್ದಳು.

ಬಿಳಗಿ ಆಡಳಿತ ವ್ಯವಸ್ಥೆಯಲ್ಲೂ ಹಲವಾರು ಅಧಿಕಾರಿವರ್ಗ ಇದ್ದುದು ಕಂಡುಬರುತ್ತದೆ. ಕಾಸರಗೋಡು ತಿಮ್ಮಣ್ಣನು ಕೆಳದಿಯಲ್ಲಿ ತನಗೆ ಸೇನಾಪತಿ ಹುದ್ದೆ ದೊರೆಯಲಿಲ್ಲವಾದ ಕಾರಣ ಬಿಳಗಿಗೆ ಬಂದು ಸೇನಾಪತಿಯ ಹುದ್ದೆ ಗಿಟ್ಟಿಸಿಕೊಂಡನೆಂಬುದಾಗಿ ಡಾ.ಎಲ್.ಆರ್. ಹೆಗಡೆಯವರು ಊಹಿಸಿದ್ದಾರೆ.

ರಾಜಕೀಯ ವ್ಯವಹಾರಗಳಿಗಾಗಿ, ರಾಜ-ರಾಣಿಯರಿಗೆ ಸಹಾಯಕರಾಗಿ ಒಂದು ಮಂತ್ರಿ ಮಂಡಲವೇ ಇತ್ತು. ಇಲ್ಲಿ ಪ್ರಧಾನಿ, ಆಪ್ತ ಸಲಹಾಧಿಕಾರಿಗಳು, ಸಚಿವ ಸಂಪುಟ ಮತ್ತು ಸದಸ್ಯರು ಇದ್ದರು. ಇವರು ಆಡಳಿತ ವ್ಯವಹಾರಗಳಲ್ಲಿ ಸಕ್ರಿಯವಾದ ನೆರವು ನೀಡುತ್ತಿದ್ದರು. ಅವರಲ್ಲಿ ಸರ್ವಾಧಿಕಾರಿ, ದಳವಾಯಿ, ಸಬ್ನೀಸ್, ಸುಬೇದಾರ, ಜಮಾದಾರ, ಇವು ಪ್ರಮುಖ ಸೈನಿಕ ಹುದ್ದೆಗಳಾಗಿದ್ದವು. ರಾಜಗುರು, ಮುಖ್ಯಮಂತ್ರಿ, ಕೋಶಾಧ್ಯಕ್ಷ, ಸೇನಾಪತಿ, ಮುಖ್ಯಸರದಾರರು, ಶಾಖಾರಹಿತ ಮಂತ್ರಿಗಳು ಇರುತ್ತಿದ್ದರು. ಕರಣಿಕರು, ಜೋಯಿಸರು, ಆಸ್ಥಾನದ ವ್ಯಾಪಾರಿಗಳು, ಸುಂಕದ ಅಧಿಕಾರಿಗಳು, ರಾಯಭಾರಿಗಳು ಇದ್ದರು. ಮಂತ್ರಿಗಳನ್ನು ಅವರ ಅರ್ಹತೆಯ ಆಧಾರದ ಮೇಲೆ ಆರಿಸಿಕೊಳ್ಳಲಾಗುತ್ತಿತ್ತು.

ಮಧ್ಯಕಾಲೀನ ರಾಜ್ಯಾಡಳಿತದಲ್ಲಿ ಬಾಹತ್ತರ ಅಂದರೆ ೧೨ ಜನ ನಿಯೋಗಿಗಳ ಅಧಿಕಾರಿ ವರ್ಗವಿತ್ತು. "ಸದಾಶಿವರಾಯನ ಸ್ವರವಚನದಲ್ಲಿ ಅಧಿಕಾರಿಗಳ ಸಂಖ್ಯೆ ೧೦೮ ಆಗಿತ್ತು."[೩೯] ಬಿಳಗಿಯಲ್ಲೂ ರಾಜಸಭೆಗಳು ನಡೆಯುತ್ತಿದ್ದವು. ಕಿತ್ತೂರು, ಬೆಳವಡಿ, ಶಿರಸಂಗಿ, ಸುಗಟೂರು, ಹಾಗಲವಾಡಿ, ರಾಯಚೂರು ಸಂಸ್ಥಾನಗಳಲ್ಲಿ ಮಂತ್ರಿಗಳಿದ್ದರು.

**ಸಂಧಿವಿಗ್ರಹಿ**

ಮಂತ್ರಿಮಂಡಲದಲ್ಲಿ ಅತಿ ಪ್ರಮುಖ ಪಾತ್ರ ವಹಿಸುವ ವ್ಯಕ್ತಿ ಸಂಧಿವಿಗ್ರಹಿ. ಯುದ್ಧ ಹಾಗೂ ಒಪ್ಪಂದವನ್ನು ನಿಶ್ಚಯಿಸುವ ಕಾರ್ಯ ಈತನದು. ಸಂಧಿವಿಗ್ರಹಿಯಾಗಿ ಶ್ರೀ ಕೃಷ್ಣಪರಮಾತ್ಮನೇ ದುರ್ಯೋಧನನಲ್ಲಿಗೆ ಹೋಗಿದ್ದನ್ನು ಇಲ್ಲಿ ಸ್ಮರಿಸಬಹುದು. ಮಹಾಭಾರತದಂಥ ಯುದ್ಧ ನಡೆದರೆ ಮುಂದಾಗುವ ಅನಾಹುತ ಎಂಥದ್ದು ಎಂಬ ಚಿಂತನೆಯಿಂದಲೇ ಶ್ರೀಕೃಷ್ಣನು ಸಂಧಿವಿಗ್ರಹಿ ಯಾಗಿದ್ದನು. ಅದೇ ರೀತಿಯಾಗಿ ಪ್ರತಿಯೊಂದು ರಾಜ್ಯವು ತನ್ನ ನೆರೆಯ ರಾಜ್ಯಗಳೊಡನೆ ಮೈತ್ರಿಯುತ ಬಾಂಧವ್ಯ ಹೊಂದಲು ಸಂಧಿವಿಗ್ರಹಿ ಆಡಳಿತದ ಒಂದು ಭಾಗವಾಗಿದ್ದನು. ಈತನು ಬಹುಭಾಷಾ ಪರಿಣತ, ಭಾಷಾನಿಪುಣನಾಗುವ ಅವಶ್ಯಕತೆಯಿದೆ. ದೇಶ ವಿದೇಶಗಳ ಬಾಂಧವ್ಯ ನಿಂತಿರುವುದೆ ಸಂಧಿವಿಗ್ರಹಿಯಿಂದ ನೆರೆಯ ರಾಜರಿಗೆ ಪತ್ರಗಳನ್ನು ಬರೆದು ಸಿದ್ಧಪಡಿಸುವುದು, ನೆರೆಯ ರಾಜ್ಯದಿಂದ ಬಂದ ಪತ್ರಗಳನ್ನು ಓದುವ ಹಾಗೂ ಸಮರ್ಥವಾಗಿ ಉತ್ತರಿಸುವ ನೈಪುಣ್ಯತೆ ಸಂಧಿವಿಗ್ರಹಿಗೆ ಇರಬೇಕಾಗಿತ್ತು.

ರಾಣಿ ವೀರಮ್ಮಾಜಿಯು ಕಾಲದಲ್ಲಿ ಸಂಧಿವಿಗ್ರಹಿಯಾಗಿ ಶಂಕರ ನಾರಾಯಣಯ್ಯನನ್ನು ಹೈದರ್‌ನೊಡನೆ ಶಾಂತಿ ಒಪ್ಪಂದವನ್ನು ಮಾಡಿಕೊಂಡು ಯುದ್ಧ ನಿಲ್ಲಿಸಲು ಕಳಿಸಿದುದನ್ನು ಇಲ್ಲಿ ಸ್ಮರಿಸಬಹುದು.

"ಕೆಳದಿ ಸಂಸ್ಥಾನದಲ್ಲಿ 'ಸಂಧಿವಿಗ್ರಹಿ'ಯನ್ನು ಸರ್ವಾಧಿಕಾರಿ ಹಾಗೂ ದಳವಾಯಿಗಳು ಎಂದು ಕರೆಯುತ್ತಿದ್ದರು."[೪೦] ಕೆಳದಿ, ಸ್ವಾದಿ, ಬಿಳಗಿ ಸಂಸ್ಥಾನಗಳಿಗೆ ಭೇಟಿ ನೀಡಿದ ವಿದೇಶಿಗರ ವರದಿಗಳಿಂದ ಇವರ ವಿದೇಶಾಂಗ ನೀತಿ, ವಿದೇಶಿ ದೂತರೊಂದಿಗೆ ವ್ಯವಹಾರ ನಡೆಸುತ್ತಿದ್ದರೆಂಬ ಅಂಶ ತಿಳಿದುಬರುತ್ತದೆ. ಕ್ರಿ.ಶ.೧೬೩೭ರಲ್ಲಿ ಪೀಟರ್‌ಮಂಡಿಯು ಇಕ್ಕೇರಿ, ಬಿಳಗಿ ಸಂಸ್ಥಾನಗಳ ನಡುವೆ ಸಾಂಬಾರು ಪದಾರ್ಥಗಳ ವ್ಯಾಪಾರ ನಡೆದುದನ್ನು ದಾಖಲಿಸಿದ್ದಾನೆ.

ರಾಣಿ ಚೆನ್ನಮ್ಮಾಜಿಯು ರಾಜತಾಂತ್ರಿಕ ನೈಪುಣ್ಯತೆ ಹೊಂದಿದ್ದಳು. ನೆರೆಯ ರಾಜರೊಡನೆ ಮೈತ್ರಿಯುತ ಬಾಂಧವ್ಯ ಇಟ್ಟುಕೊಂಡಿದ್ದಳು. ಇದಕ್ಕೆ ನಿದರ್ಶನವಾಗಿ ಕೆಳದಿಗೆ ಸೇರಿದ "ಮಲಬಾರಿನ ತೀರದ ದಕ್ಷಿಣ ಭಾಗವನ್ನು ಒತ್ತಿಕೊಂಡು ಬರದಂತೆ ನಾಯರುಗಳೊಡನೆ ಒಪ್ಪಂದ ಮಾಡಿಕೊಂಡಳು"[೪೧] ಎಂಬ ಅಂಶ ತಿಳಿದುಬರುತ್ತದೆ. ಕ್ರಿ.ಶ.೧೬೭೮ರಿಂದ ೧೬೯೫ರವರೆಗೆ ಪೋರ್ಚುಗೀಸರೊಂದಿಗಿನ ಚೆನ್ನಮ್ಮಾಜಿಯ ಸಂಬಂಧ ಉತ್ತಮವಾಗಿದ್ದಿತು. "ದಿ ೧೫-೧೨-೧೬೭೮ರ ಒಪ್ಪಂದದ ಪ್ರಕಾರ ರಾಣಿ ಚೆನ್ನಮ್ಮಾಜಿಯು ಪೋರ್ಚುಗೀಸರಿಗೆ ೩೦,೦೦೦ ಕ್ಷೆರಾಫಿನ ಯುದ್ಧದ ವೆಚ್ಚಕ್ಕೆ ಕೊಡಬೇಕಾಗಿತ್ತೆಂದು ಹೇಳಲಾಗಿದೆ."[೪೨] "ಚೆನ್ನಮ್ಮಾಜಿ ಕಾಲದಲ್ಲಿ ಪೋರ್ಚುಗೀಸರಿಗೆ ಪ್ರತಿವರ್ಷ ೧೫೦೦ ಚೀಲ ಅಕ್ಕಿ ಕೊಡಲು ಕ್ರಿ.ಶ.೧೬೮೦ರಲ್ಲಿ ಒಪ್ಪಂದ ನಡೆಯಿತೆಂದು ಬಿ.ಎಸ್.ರಾಮಭಟ್ಟರು ದಾಖಲಿಸಿದ್ದಾರೆ."[೪೩]

ಕ್ರಿ.ಶ.೧೬೭೪ರಲ್ಲಿ ಕೆಂಪುಸಮುದ್ರಕ್ಕೆ ಹೋಗಿದ್ದ ರಾಣಿಯ ೨ ಹಡಗುಗಳನ್ನು ಪೋರ್ಚುಗೀಸರು ಸ್ವಾಧೀನಪಡಿಸಿಕೊಂಡು ಅವುಗಳ ಸರಕನ್ನು ಮಾರಿ ರಾಣಿಯನ್ನು ಕೆರಳಿಸಿದರು. ಇದರಿಂದ ರಾಣಿಯು ಆಹಾರ ಧಾನ್ಯಕ್ಕಾಗಿ ಕನ್ನಡ ಕರಾವಳಿಗೆ ಹೋಗಿದ್ದ ಪೋರ್ಚುಗೀಸರ ನೌಕಾಪಡೆಯನ್ನು ನಿರ್ಬಂಧದಲ್ಲಿರಿಸಿದಳು. ಆಗ ಪರಿಹಾರವನ್ನು ಕೊಟ್ಟು ತಮ್ಮ ನೌಕಾದಳವನ್ನು ಪೋರ್ಚುಗೀಸರು ಬಿಡುಗಡೆ ಮಾಡಿಕೊಂಡರು.

ಕ್ರಿ.ಶ.೧೬೭೭ರಲ್ಲಿ ಮತ್ತೆ ಪೋರ್ಚುಗೀಸರು ಹಾಗೂ ಚೆನ್ನಮ್ಮಾಜಿ ನಡುವೆ ಘರ್ಷಣೆಯಾಯ್ತು. ಚೆನ್ನಮ್ಮಾಜಿ ಅರಬ್ಬರಿಗೆ ಕುಂದಾಪುರ, ಹೊನ್ನಾವರ, ಮಂಗಳೂರುಗಳಿಂದ ಅಕ್ಕಿ ಸಾಗಿಸಲು ಹಾಗೂ ಆ ಬಂದರುಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ಕೊಟ್ಟಳು. ಇದರಿಂದ ಕ್ರಿ.ಶ.೧೬೭೧ರ ಒಪ್ಪಂದದ ಉಲ್ಲಂಘನೆಯಾಯ್ತೆಂದು ಪೋರ್ಚುಗೀಸರು ಆರೋಪಿಸಿದರು.

ಅರಬ್ಬರನ್ನು ಕರಾವಳಿಯಿಂದ ಹೊಡೆದೋಡಿಸಲು ನೌಕಾದಳವೊಂದನ್ನು ಕಳಿಸಿದರು. ಆದರೆ ಕುಂದಾಪುರದಲ್ಲಿಯ ಚೆನ್ನಮ್ಮಾಜಿಯ ಸ್ಥಳೀಯ ಅಧಿಕಾರಿಗಳು ಯುಕ್ತಿಯುತವಾಗಿ ಆ ನೌಕಾದಳವನ್ನು ಎರಡು ದಿನಗಳ ಮಟ್ಟಿಗೆ ಅಲ್ಲಿಯೇ ತಂಗುವಂತೆ ಮಾಡಿದರು. ಇದರಿಂದ ಒಂದೆರಡು ದಿನಗಳ ಹಿಂದೆ ಅಲ್ಲಿಯೇ ಅಕ್ಕಿ ತುಂಬಿಸಿಕೊಂಡಿದ್ದ ಅರಬ್ಬರ ಎರಡು ಹಡಗುಗಳು ತೊಂದರೆಯಿಲ್ಲದೇ ಅರಬ್‌ದತ್ತ ಹೋದವು. ಕ್ರಿ.ಶ.೧೬೭೪ರ ಡಿಸೆಂಬರ್ ೧೦ರಂದು ಗೋವೆಯ ಮಂತ್ರಾಲೋಚನ ಸಭೆಯ ಗೋಷ್ಠಿಯಾದ ಬಳಿಕ ಅದೇ ತಿಂಗಳ ೧೫ರಂದು "ಶಾಶ್ವತ ಶಾಂತಿ, ಮೈತ್ರಿ ವ್ಯಾಪಾರ ಗಳ ಒಪ್ಪಂದಕ್ಕೆ ಚೆನ್ನಮ್ಮಾಜಿಯ ಪರವಾಗಿ ಬಸಪ್ಪನಾಯಕನು ಸಂಧಾನ ಮಾಡಿಕೊಂಡನು."[೪೪]

### ೪.೧.೨. ಪೌರ ಮತ್ತು ನ್ಯಾಯಾಡಳಿತ

ಪೌರಾಡಳಿತವನ್ನು ನೋಡಿಕೊಳ್ಳಲು ಒಂದು ಅಧಿಕಾರಿವರ್ಗವೇ ಇದ್ದು, ಆಡಳಿತವು ಸುಗಮವಾಗಿ ನಡೆಯಲು ಇದು ಸಹಕಾರಿಯಾಗಿದ್ದಿತು. ಕರಣಿಕ ಕಂದಾಯದ ಆಡಳಿತವನ್ನು, ಬೊಕ್ಕಸದ ಅಧಿಕಾರಿ ಖಜಾನೆಯನ್ನು, ಠಾಣಾದಾರರು ವಿಭಾಗೀಯ ಪೌರ ಮತ್ತು ಸೈನ್ಯ ಇಲಾಖೆಯನ್ನು ನೋಡಿಕೊಳ್ಳುತ್ತಿದ್ದರು. ಸುಂಕದ ಅಧಿಕಾರಿ ಇದ್ದರು. ಇವರೆಲ್ಲರೂ ರಾಜನಿಗೆ ಅಧೀನರಾಗಿದ್ದು, ರಾಜನ ಆಜ್ಞೆಯನ್ನು ಪಾಲಿಸುತ್ತಿದ್ದರು. ಕೇಂದ್ರ ಸ್ಥಾನದಲ್ಲಿ ಎಲ್ಲ ಅಧಿಕಾರ ಕೇಂದ್ರೀಕರಣಗೊಂಡಿದ್ದರೂ, ಆಯಾ ವಿಭಾಗದಲ್ಲಿ ಅಧಿಕಾರಿಗಳಾದವರಿಗೆ ಅವರವರ ಅಧಿಕಾರ ನಿರ್ವಹಣೆಗೆ ಅಗತ್ಯವಾದ ಅಧಿಕಾರವನ್ನು ನೀಡಿದ್ದರು.

ಕೆಳದಿ ಸಂಸ್ಥಾನದಲ್ಲಿ ಸಚಿವಾಲಯವಿದ್ದು, ಅದಕ್ಕೆ ಒಬ್ಬ ಕಾರ್ಯದರ್ಶಿ, ಅವನ ಕೈಕೆಳಗೆ ಅನೇಕ ಅಧಿಕಾರಿಗಳು, ನೌಕರರು, ಇರುತ್ತಿದ್ದರು. ಸ್ವಾದಿ ಸಂಸ್ಥಾನದಲ್ಲಿಯೂ ಅನೇಕ ಜನ ಅಧಿಕಾರಿಗಳು ಇದ್ದರು. ಕಳಲೆ ಸಂಸ್ಥಾನದಲ್ಲೂ ದಳವಾಯಿಗಳಿದ್ದು, ದಳವಾಯಿ ನಂಜರಾಜನು 'ಅಮೀಲರು' ಎಂಬ ಕಂದಾಯ ಅಧಿಕಾರಿಗಳನ್ನು ನೇಮಕ ಮಾಡಿದ್ದನು. ಚಿಕ್ಕ ಕೃಷ್ಣರಾಜ ಒಡೆಯರು ಎಂಟು ಲಕ್ಷ ರೂಪಾಯಿಗಳನ್ನು ಸರ್ಕಾರದ ಖಜಾನೆಗೆ ಒಪ್ಪಿಸಿ, ಎರಡು ಲಕ್ಷ ರೂಪಾಯಿಗಳನ್ನು ಮಕ್ಕಳಿಲ್ಲದ ತನ್ನ ಹೆಂಡತಿಗೆ ನೀಡಿದನೆಂಬ ಅಂಶ"[೪೫] ತಿಳಿದುಬರುತ್ತದೆ. 'ಸಾಮಂತ' ಎಂಬ ಅಧಿಕಾರಿಗಳು, ಫೌಜುದಾರರು ಇದ್ದರು.

#### ದಳವಾಯಿಗಳು

ಕೆಳದಿ ಅರಸರ ಕಾಲದಲ್ಲಿ ಪ್ರಮುಖ ಅಧಿಕಾರಿಗಳಲ್ಲಿ ದಳವಾಯಿಗಳು ಒಬ್ಬರು. ಕೆಳದಿ ಚೆನ್ನಮ್ಮಾಜಿಯ ಕಾಲದಲ್ಲಿ ಭದ್ರಪ್ಪ ಹಾಗೂ ಚೆನ್ನಬಸವಸೆಟ್ಟಿಯರು, ರಾಣಿ ವೀರಮ್ಮಾಜಿಯ ಕಾಲದಲ್ಲಿ ದಳವಾಯಿಯಾಗಿ ಅಂಗಡಿ ವೀರಭದ್ರಯ್ಯರು ಪ್ರಮುಖ ಪಾತ್ರ ವಹಿಸಿದ್ದರು.

ಶ್ರೇಣೀಕೃತವಾಗಿ ದಳವಾಯಿಗಳು ಒಡೆಯನ ನಂತರದ ಸರ್ವಾಧಿಕಾರಿಯಾಗಿದ್ದರು. ದಳವಾಯಿಗಳು ಬಹುಕಾಲವಿದ್ದರೆ ಅವರಿಂದ ರಾಜನ ಗದ್ದುಗೆಗೆ ಸಂಚಕಾರ ಬರುವುದೆಂಬ ವಿಚಾರದಿಂದ ಕಳಲೆ ಕಂಠೀರವ ನರಸರಾಜ ಒಡೆಯರು ಎರಡು ವರ್ಷಕ್ಕೊಮ್ಮೆ ದಳವಾಯಿಗಳನ್ನು ಬದಲಾಯಿಸುತ್ತಿದ್ದರು. ಹಾಗಾಗಿ ಈತನ ಕಾಲದಲ್ಲಿ ಎಂಟು ಜನ ದಳವಾಯಿಗಳು ಆಡಳಿತದ ಮುಖ್ಯಸ್ಥರಾಗಿದ್ದರು.

**ಸಬನೀಸ್**

ಸೈನ್ಯದಲ್ಲಿಯ ಲೆಕ್ಕಪತ್ರಾಧಿಕಾರಿ. ಕೆಳದಿ ಸಂಸ್ಥಾನದಲ್ಲಿ ಸಬನೀಸ್‌ರಾಗಿ ಕೃಷ್ಣಪ್ಪಯ್ಯ, ಕೋಳಿವಾಡದ ಬೊಮ್ಮಯ್ಯರು ಕಾರ್ಯ ನಿರ್ವಹಿಸಿರುವರು. ಸಬನೀಸ್ ಎಂಬ ಪದವು ಅಧಿಕಾರ ಸೂಚಕ ಪದವಾಗಿದ್ದು ಕಾಲಾಂತರದಲ್ಲಿ ಇದು ಸಬನೀಸ್ ಕೃಷ್ಣಪ್ಪಯ್ಯ, ಸಬನೀಸ್ ಕೋಳಿವಾಡದ ಬೊಮ್ಮಯ್ಯ ಎಂಬುದಾಗಿದೆ. "ಕೇಳ್ದು ಸಬನೀಸು ಕೋಳಿವಾಡದ ಬೊಮ್ಮಯ್ಯ"[೪೬] ಎಂದು 'ಬೊಮ್ಮ ಬರೆಪಮೆನೆ ಬ್ರಹ್ಮಲಿಖಿತವೆಂದು' ಎಂಬುದನ್ನು ನೋಡಿದಾಗ ಲೆಕ್ಕಪತ್ರಾಧಿಕಾರಿಗಳು ತಪ್ಪು ಬರೆಯಲು ಸಾಧ್ಯವೇ ಇಲ್ಲ. ಅವರು ಬರೆದುದೆ ಬ್ರಹ್ಮಲಿಖಿತವೆಂಬ ನಂಬಿಕೆ ನಮ್ಮ ಜನರಲ್ಲಿತ್ತು. ಕೆಳದಿ ರಾಣಿ ಚೆನ್ನಮ್ಮಾಜಿಯ ಕಾಲದಲ್ಲಿ ಸಬುನೀಸ್, ಕೃಷ್ಣಪ್ಪಯ್ಯ, ಸಬನೀಸ್ ಲಕ್ಷ್ಮಣಯ್ಯ, ಶರಜಾಶಂಕರ ನಾರಾಯಣ, ಕೋಳಿವಾಡದ ಬೊಮ್ಮರಸ ಪ್ರಮುಖರಾಗಿದ್ದರು. ಇವರು ಸೇನೆಯ ನಾಲ್ಕು ವಿಭಾಗದ ಪ್ರತಿಯೊಬ್ಬ ಸೈನಿಕನ ಹೆಸರು, ವಿಳಾಸಕ್ಕೆ ಸಂಬಂಧಿಸಿದ ವಿವರವನ್ನು ಬರೆದಿಡುತ್ತಿದ್ದರು.

**ನ್ಯಾಯಾಡಳಿತ**

'ದುಷ್ಟ ಜನರ್ಕಳ ಶಿಕ್ಷಿಸಿ ಶಿಷ್ಟರನುರೆ ಪೊರೆದು' ಎಂಬಂತೆ ದುಷ್ಟಶಕ್ತಿಯ ಸಂಹಾರಕ್ಕೆ ಕಾಲಕಾಲಕ್ಕೆ ಯುಗಪುರುಷರ ಜನನವಾಗುತ್ತದೆ ಎಂಬ ನಂಬಿಕೆಯು ನಮ್ಮಲ್ಲಿ ಬೇರೂರಿರುವ ಹಿನ್ನೆಲೆಯಲ್ಲಿ, ರಾಜನೇ ನಮಗೆ ಪ್ರತ್ಯಕ್ಷ ದೇವತೆ. ರಾಜನ ಅತೀ ಪ್ರಮುಖ ಕರ್ತವ್ಯಗಳಲ್ಲಿ ಸಾಮಾಜಿಕ ಶಾಂತಿ, ನೆಮ್ಮದಿಯನ್ನು ಕಾಪಾಡುವುದೂ ಒಂದಾಗಿದೆ. ಪ್ರಜಾಪ್ರಭುತ್ವದ ಸೌಧಕ್ಕೆ ನ್ಯಾಯಾಂಗವೇ ಬಹುಪ್ರಮುಖ ಅಂಗ. ನ್ಯಾಯಾಂಗವು ಕುಸಿದರೆ ಇಡೀ ಜನರ ಶಾಂತಿ-ನೆಮ್ಮದಿಯೇ ಕುಸಿದಂತೆ. ಹೀಗಾಗಿ ಕೆಳದಿ ಅರಸರು ಜನರ ಶಾಂತಿ-ನೆಮ್ಮದಿಯನ್ನು ಕಾಪಾಡಲು ಶ್ರಮಿಸುತ್ತಿದ್ದರು.

"ಘುಸಿ ಲಕ್ಕ ಲೇಖ ಚೌರ್ಯಂ
ಪಿಸುಣನ್ಯಾಯಂ ವಿರೋಧಮಪಹತಿ ಭಯಮು

ಬ್ಬಸ ಮೋಸ ಪಾದರಂಗಳ

ಪೆಸರುಸಿರಲಿಕ್ಕಿಲ್ಲಮೆನಿಸಿ ಪೊರೆದಂ ಧರೆಯಂ"[೪೭]

ಎಂಬ ಕೆಳದಿನೃಪವಿಜಯದ ಉಲ್ಲೇಖವನ್ನು ಗಮನಿಸಿದಾಗ ಸುಳ್ಳು ದರೋಡೆ, ಕೊಲೆ, ಸುಲಿಗೆಗಳಂಥ ಕ್ರೌರ್ಯಗಳು ಇಲ್ಲದೇ ಕೆಳದಿ ರಾಜ್ಯ ಸುಖ ಸಮೃದ್ಧಿಯಿಂದ ಕೂಡಿತ್ತೆಂಬುದನ್ನು ಗಮನಿಸಬಹುದು. ಇದೇ ಮಾತಿಗೆ ವಿದೇಶಿ ಪ್ರವಾಸಿ ಅಲೆಕ್ಸಾಂಡರ್ ಹ್ಯಾಮಿಲ್ಟನ್ ಸಮರ್ಥನೆಯನ್ನು ಒದಗಿಸುತ್ತಾನೆ. ಕೆಳದಿ ರಾಜ್ಯದಲ್ಲಿ ದರೋಡೆ, ಕೊಲೆ, ಸುಲಿಗೆಗಳನ್ನು ಕೇಳಿಯೇ ಇಲ್ಲ; ಜನರ ಕಾನೂನುಪಾಲನೆ ಮಾದರಿಯಾದುದು... ಕೆಳದಿ ರಾಜ್ಯದ ಹೆದ್ದಾರಿಯಲ್ಲಿ ಒಬ್ಬ ಅಪರಿಚಿತ ಬೇಕಾದಷ್ಟು ಹಣ ಇಟ್ಟುಕೊಂಡು ರಸ್ತೆ ಬದಿಯಲ್ಲಿ ಮರದ ನೆರಳಿನಲ್ಲಿ ಮಲಗಬಹುದು. ಅವನ ಹಣವನ್ನು ಯಾರೂ ದೋಚಲಾರರು. ಅವನಿಗೆ ಹಿಂಸಿಸಲಾರರೆಂದೂ ವಿವರಣೆಯನ್ನು ಒದಗಿಸುತ್ತಾನೆ.

ಕೇಂದ್ರಸ್ಥಾನದಲ್ಲಿ ಅರಸನೇ ಮುಖ್ಯ ನ್ಯಾಯಾಧೀಶ. ಅರಸನಿಗೆ ನೆರವಾಗಲು ಹಾಗೂ ಪ್ರತಿಯೊಂದು ಭಾಗಗಳ ಆಡಳಿತವನ್ನು ನಡೆಸಲು ನಾಳ್ಗಾವುಂಡರು, ಗಾವುಂಡರು ಮುಖ್ಯ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಸಣ್ಣಪುಟ್ಟ ವ್ಯಾಜ್ಯಗಳನ್ನು, ತಂಟೆ, ತಕರಾರುಗಳನ್ನು ಗ್ರಾಮದ ಹಿರಿಯರೇ ನಿರ್ಧರಿಸುತ್ತಿದ್ದರು. ಅವರಿಗೆ ನಿರ್ಧರಿಸಲಾಗದ ವ್ಯಾಜ್ಯಗಳನ್ನು ಗಾವುಂಡರು, ನಾಳ್ಗಾವುಂಡರು ನಿರ್ಧರಿಸುತ್ತಿದ್ದರು. ಇದರಿಂದಲೂ ನಿರ್ಧರಿಸಲಾಗದ ಗಂಭೀರ ಸಮಸ್ಯೆಗಳನ್ನು ರಾಜನೇ ನಿರ್ಧರಿಸುತ್ತಿದ್ದನು. ಇದು ನಮ್ಮ ಇಂದಿನ ಗ್ರಾಮ ಪಂಚಾಯಿತಿ, ಹೈಕೋರ್ಟು, ಸುಪ್ರಿಂಕೋರ್ಟು ನ್ಯಾಯಾಧೀಶರನ್ನು ನೆನಪಿಸುತ್ತದೆ. ನ್ಯಾಯನಿರ್ಣಯದಲ್ಲಿ ರಾಜನದೇ ಅಂತಿಮ ತೀರ್ಪು. ರಾಜನು ತಜ್ಞರೊಂದಿಗೆ ಸಮಾಲೋಚನೆಯನ್ನು ಮಾಡಿ ರಾಜದ್ರೋಹ, ವಿಶ್ವಾಸಘಾತಗಳಿಗೆ ಸಂಬಂಧಪಟ್ಟ ಶಿಕ್ಷೆಗಳನ್ನು ವಿಧಿಸುತ್ತಿದ್ದರು.

ಕೆಳದಿ ಇಮ್ಮಡಿ ವೆಂಕಟಪ್ಪನಾಯಕನು ಭದ್ರಪ್ಪನಾಯಕನಿಗೆ ನ್ಯಾಯಾಲಯದ ವ್ಯವಹಾರವನ್ನು ಕುರಿತು ಬೋಧನೆ ಮಾಡಿದುದು

ವ್ಯವಹಾರಾನ್ನೃಪಃ ಪಶ್ಯೇದ್ವಿದ್ವಿದ್ಭಿಃ ಬ್ರಾಹ್ಮಣೈಃ ಸಹ।

ಧರ್ಮಶಾಸ್ತ್ರಾನುಸಾರೇಣ ಕ್ರೋಧಲೋಭವಿವರ್ಜಿತಃ॥

ಈ ರೀತಿ ವ್ಯವಹಾರದಿಂದ ಆರಂಭಿಸಿ, ನ್ಯಾಯನಿರ್ಣಯ ಅಭಿಯೋಗ, ಸಲಹೆಗಾರರು, ವ್ಯವಹಾರಪದ, ಆಪಾದಿತನ ಆಪಾದನೆಯ ಅಭಿಯೋಗ, ಅಭಿಯೋಗ ಹೂಡಿದಾಗ ಮಾಡಿದ ಆಪಾದನೆ, ಬರಹದಲ್ಲಿ ದಾಖಲು, ಕೊಲೆ ಇತ್ಯಾದಿಗಳ ಆರೋಪ-ಪ್ರತ್ಯಾರೋಪ ವಿವರಣೆಗಳು, ಸ್ತ್ರೀಯರು ತಂದ ವಿವಾದಗಳು, ಸಾಕ್ಷಿಗಳ ವಿಚಾರಗಳು, ಸುಳ್ಳು ಸಾಕ್ಷಿ, ಸಾಲಗಳು, ದಾಖಲೆ ಪತ್ರಗಳು, ದಿವ್ಯಗಳು, ನಾಗದಿವ್ಯ, ಅಗ್ನಿದಿವ್ಯ ಇತ್ಯಾದಿಗಳ ಬಗ್ಗೆ ಶಿವತತ್ವರತ್ನಾಕರವು ದಾಖಲಿಸುತ್ತದೆ.

ಈ ದಿವ್ಯಗಳು ನ್ಯಾಯ ನಿರ್ಣಯಿಸಲು ಸಹಾಯಕ ಮಾನದಂಡಗಳಾಗಿದ್ದವು. ವ್ಯವಹಾರ(Legal procedure), ಋಣದಾನ(Recovery of Debts), ಉಪನಿಧಿ(Deposit), ದಾಯವಿಭಾಗ (partition of Heritage), ಸೀಮಾ ವಿವಾದ(Boundary Dispute), ವಾಕ್ಪಾರುಷ್ಯ(Abuse etc), ದಂಡ ಪಾರುಷ್ಯ(Assault), ಸಾಹಸ(Crimes of violence), ಸ್ತೇಯ(Theft), ಸ್ತ್ರೀಸಂಗ್ರಹ (Adultery), ಅಪಹರಣ, ಮೋಸ, ವಂಚನೆ, ಜೂಜು ಮುಂತಾದ ನ್ಯಾಯ ವಿವರಣೆಗಳ ಬಗ್ಗೆ ಉಲ್ಲೇಖವಿರುವುದನ್ನು ಕಾಣುತ್ತೇವೆ.

ಕೆಳದಿ ಅರಸರ ನ್ಯಾಯದೃಷ್ಟಿ, ಶಾಂತಿ-ಕಾನೂನು ಸುವ್ಯವಸ್ಥೆಗಳ ಪಾಲನೆ ಉತ್ಕಟವಾಗಿದ್ದಿತು. ದುಷ್ಟ ಜನರನ್ನಲ್ಲದೆ, ದುಷ್ಟಪ್ರಾಣಿಗಳನ್ನು ಶಿಕ್ಷಿಸುತ್ತಿದ್ದರು. ಜನರಿಗೆ ಸೇರಿದ ವಸ್ತುವನ್ನು ಕದಿಯುವ, ಜನರನ್ನು ಹಿಂಸಿಸುವ, ಒಂದು ನರಿಯನ್ನು ಹಿಡಿಸಿ ಶಿವಪ್ಪನಾಯಕನು ಶಿಕ್ಷಿಸಿದನು. ಸಾಮಾನ್ಯವಾಗಿ ಅಪರಾಧಿಗಳಿಗೆ ಅಂಗಚ್ಛೇದ, ಕಾರಾಗೃಹವಾಸ, ಗಡಿಪಾರು, ದಂಡಗಳು ಮತ್ತು ಮರಣದಂಡನೆ ಇವು ವಿಧಿಸುತ್ತಿದ್ದ ಶಿಕ್ಷೆಗಳಾಗಿದ್ದವು.

ಕ್ರಿ.ಶ.೧೬೫೯ರಲ್ಲಿ ಪ್ರಸಿದ್ಧ ಶಿವಪ್ಪನಾಯಕನು ಹೊಸಂಗಡಿಯಲ್ಲಿ ಚೆನ್ನಣ್ಣನು ಕಟ್ಟಿಸಿದ ಮಹತ್ತು ಮಠಕ್ಕೆ ಮಠಾಧಿಪತಿಗಳ ನೇಮಕದಲ್ಲಿ ಕೆಲವು ಬುದ್ಧಿವಂತರು ಮತ್ತು ಬಣಕಾರರ ಸಲಹೆ ಕೇಳಿ ತೀರ್ಮಾನ ಕೈಗೊಂಡಿರುವುದು, "೧೫೦೬ರಲ್ಲಿ ಚೌಡಗೌಡನು ಕಲ್ಲುಕುಟಿಗ ವೀರಪ್ಪನ ಮಕ್ಕಳಿಗೆ ಭೂದಾನವಿತ್ತಿದ್ದು, ಈ ಆಸ್ತಿಯನ್ನು ಗಂಡಸರು ಹೆಣ್ಣುಮಕ್ಕಳ ಮುಖಾಂತರ ವಾರಸು ಪಡೆಯಬೇಕೆಂದು ಹೇಳಿದೆ."[೪೮] ಇದು ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣುಮಕ್ಕಳಿಗೆ ಸ್ಥಾನಮಾನಗಳಿದ್ದವೆಂಬುದನ್ನು ಗ್ರಹಿಸಬಹುದಾಗಿದೆ.

ತಮಿಳು ದಾಖಲೆಯಲ್ಲಿ ಉಲ್ಲೇಖವಾಗಿರುವ ಕೆಳದಿ ರಾಣಿ ವೀರಮ್ಮಾಜಿಯ ವಕೀಲರ ಬಗೆಗಿನ ಮಾಹಿತಿಯನ್ನು ಕ್ರಿ.ಶ.೧೯೨೨ರಲ್ಲಿ ಮದ್ರಾಸ್ ಸರ್ಕಾರದ ಪತ್ರಾಗಾರದ ಬ್ರಿಟಿಷ್ ಅಧಿಕಾರಿ ಎಚ್.ಡಾಡ್‌ವೆಲ್‌ರು ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ. ಮದ್ರಾಸಿನ ರಾಜ್ಯಪಾಲರಾಗಿದ್ದ ಆನಂದರಂಗ ಪಿಳ್ಳೆಯು ದಿನಾಂಕ ೩೧-೮-೧೭೫೨ರಂದು ತಮಿಳು ದಿನಚರಿಯಲ್ಲಿ ಕೆಳದಿ ರಾಣಿಯ ವಕೀಲನ ಬಗ್ಗೆ ಉಲ್ಲೇಖಿಸಿದೆ. ಈ ಕಾಲ ನಿರ್ದೇಶನವು ಕೆಳದಿಯ ೨ನೇ ಬಸಪ್ಪನಾಯಕನ ಪತ್ನಿಯಾದ ವೀರಮ್ಮಾಜಿಯನ್ನು ಸೂಚಿಸುತ್ತದೆ. "He then said that tomorrow some one must receive the Bednur(KELADI) Vakil. bring him in and arrange a lodging for him. I observed that it was not fitting for me to go out to meet him, but that Madanananda pandit, or some one else might be sent. He than told Madanananda pandit to go. He replied, "KELADI" is a large state & should

be treated with as much respect as tha Raja of Mysore." So he told me to receive and bring him in, being in willing to oppose him, I agreed and come home."[೪೯] ಎಂಬ ದಾಖಲೆಯಿದೆ. ಹೀಗೆ ರಾಣಿಯರು ತಮಗೆ ನ್ಯಾಯ ಪಡೆದುಕೊಳ್ಳಲು ವಕಿಲರನ್ನು ನೇಮಿಸಿ ಕೊಳ್ಳುತ್ತಿದ್ದರೆಂಬ ಅಂಶ ತಿಳಿದುಬರುತ್ತದೆ.

ಹೀಗೆ ವಿವಾದವನ್ನು ನಿರ್ಣಯಿಸಲು ರಾಜರು, ಹಿರಿಯ ಅಧಿಕಾರಿಗಳು, ನ್ಯಾಯವಾದಿಗಳು, ಮಠಸ್ಥರು, ಹಿರಿಯರು ಗ್ರಾಮದ ಮುಖಂಡರು ಅಧಿಕಾರವನ್ನು ಹೊಂದಿದ್ದರು. ಸ್ವಾದಿ ಅರಸರು ನ್ಯಾಯ ಪಕ್ಷಪಾತಿಗಳೂ ಧರ್ಮನಿಷ್ಠರೂ ಆಗಿದ್ದರು. ಕ್ರಿ.ಶ.೧೭೫೨ರಲ್ಲಿ ಶಿವೇಶ್ವರದಲ್ಲಿ ಸ್ವಾದಿ ಮತ್ತು ಪೋರ್ಚುಗೀಸರ ನಡುವೆ ಒಂದು ಸಂಘರ್ಷವಾಗಿ ಇಗರ್ಜಿಗೆ ಧಕ್ಕೆಯಾದಾಗ ಕ್ರಿ.ಶ.೧೭೫೫ರ ಒಡಂಬಡಿಕೆಯಲ್ಲಿ ಸ್ವಾದಿ ಅರಸನು ತನ್ನ ಸ್ವಂತ ಖರ್ಚಿನಲ್ಲಿ ಪುನಃ ನಿರ್ಮಾಣಕ್ಕೆ ಅವಕಾಶ ಕೊಟ್ಟನು. "ಸ್ವಾದಿ ಸಂಸ್ಥಾನಿಕರು ಅಪರಾಧಿಗಳನ್ನು ನಿರ್ಜನ ಪ್ರದೇಶದಲ್ಲಿರುವ ಹೊಲತಿ ಕೋಟೆಗೆ ತಂದು ಅವರನ್ನು ಕೋಟೆಯ ಬುರುಜಿನ ಮೇಲಿಂದ ಕಂದಕಕ್ಕೆ ತಳ್ಳಿ ಕೊಲ್ಲುತ್ತಿದ್ದರಂತೆ."[೫೦]

ಬೆಳವಡಿ ರಾಣಿ ಮಲ್ಲಮ್ಮ ನ್ಯಾಯ ನಿರ್ಣಯದಲ್ಲಿ ಪಂಚರನ್ನು ನಿಯಮಿಸುವ ಮೂಲಕ ನ್ಯಾಯ ನಿರ್ಣಯವನ್ನು ಕೈಗೊಳ್ಳುತ್ತಿದ್ದಳು. ಕೋಟೆಯ ದೊಡ್ಡ ಮತ್ತು ಚಿಕ್ಕ ದ್ವಾರಗಳ ಕಾವಲುಗಾರರನ್ನು, ಜಡ್ಡಿಗಳ ಕೆಲಸಗಾರರನ್ನು, ಇನ್ನುಳಿದ ಅಧಿಕಾರಿಯನ್ನು ನಿಯಮಿಸಿಕೊಂಡು ಸಂಬಳಕ್ಕೆ ಬದಲಾಗಿ ಉಂಬಳಿ ಹಾಕಿಕೊಟ್ಟಳು. ನ್ಯಾಯ ನಿರ್ಣಯದಲ್ಲಿ ಗೌಡ, ಹಿರೇಮನಿ, ಸಾವಿ, ರೊಟ್ಟಿ, ಹುಂಬಿ ಎಂಬ ಪಂಚರ ಮೂಲಕ ನ್ಯಾಯ ನಿರ್ಣಯ ತೆಗೆದುಕೊಳ್ಳುತ್ತಿದ್ದಳು. ಜಮೀನಿನ ಕರ ತೆರಿಗೆ ವಸೂಲಿಗಳಿಂದ ಜನತೆಗೆ ಅನ್ಯಾಯವಾಗದಂತೆ "ತಾಶೀಲದಾರ, ದೊಡ್ಡಮನಿ ಮತ್ತು ರೊಡಸಿ ಎಂಬ ನಾಲ್ಕು ಅಧಿಕಾರಿ ವರ್ಗಗಳಿದ್ದವು"[೫೧] ಎಂಬ ಅಂಶ ತಿಳಿದುಬರುತ್ತದೆ.

ಸಿರಸಂಗಿ ರಾಣಿ ಚೆನ್ನಮ್ಮಾಜಿಯು ಉತ್ತಮ ನ್ಯಾಯನಿಷ್ಠುರಿಯಾಗಿದ್ದು, ತಪ್ಪುದಾರಿಯಲ್ಲಿ ನಡೆಯುವವರಿಗೆ ಶಿಕ್ಷಿಸುತ್ತಿದ್ದಳು. ಯಾವಗಲ್ಲ ವೆಂಕಟಗಿರಿಯು ನರಗುಂದದ ಒಳಪ್ರದೇಶದಲ್ಲಿ ನುಗ್ಗಿ ಲೂಟಿ ಮಾಡಿಸುವುದು, ಜನರಿಗೆ ಉಪದ್ರವ ಕೊಡುತ್ತಿದ್ದನು. ದುರಹಂಕಾರಿ, ನಯ ವಂಚಕನಾಗಿದ್ದ ಈತ ಸವಣೂರು ನವಾಬ ಅಬ್ದುಲ್ ಗಫಾರಖಾನರಿಗೆ ವಿಧೇಯರಾಗಿರಲು ಒಪ್ಪದೇ, ಕಪ್ಪ ಕಾಣಿಕೆ ಕೊಡಲು ನಿರಾಕರಿಸಿದ. ಆಗ ರಾಣಿಯು ವೆಂಕಟಗಿರಿಯನ್ನು ಸದೆಬಡಿದು ಶಿಕ್ಷಿಸಿದಳು. ಸಮಾಜದಲ್ಲಿ ನೆಮ್ಮದಿ ಸ್ಥಾಪಿಸಿದಳು.

ಬಿಳಗಿ ಸಂಸ್ಥಾನದಲ್ಲಿ ಅರಸರು ಮತ್ತು ಪ್ರಜೆಗಳು ಶೃಂಗೇರಿ ಮಠವನ್ನು ಮತ್ತು ಜಗದ್ಗುರುಗಳನ್ನು ಭಕ್ತಿಯಿಂದ ಕಾಣುತ್ತಿದ್ದರು. ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಸಂದಿಗ್ಧತೆ ತಲೆದೋರಿದಾಗ

ಅಂದಿನ ಆಳರಸರ ವಿನಂತಿ ಮೇರೆಗೆ ಶೃಂಗೇರಿ ಜಗದ್ಗುರುಗಳು ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಅಂತಿಮ ನಿರ್ಣಯ ನೀಡುತ್ತಿದ್ದರು. ಜಾತಿಯ ಕಟ್ಟುಪಾಡುಗಳು ಸಾಕಷ್ಟು ಬಿಗಿಯಾಗಿದ್ದವು.

ಕಿತ್ತೂರು ಸಂಸ್ಥಾನದಲ್ಲಿ ಆ ನಾಡಿನ ಹಿರಿಯರಿಗೂ ಮತ್ತು ಸಂಸ್ಥಾನದ ಗುರುಗಳಾದ ಕಲ್ಮಠದ ಶ್ರೀಗಳಿಗೂ ನ್ಯಾಯಾಧಿಕಾರವಿದ್ದಿತು. ಸಂಸ್ಥಾನದ ೯ನೇ ದೊರೆಯಾಗಬೇಕಾದ ವ್ಯಕ್ತಿ ಫಕೀರ ರುದ್ರಸರ್ಜ ಮತ್ತು(ನಿ)ರಂಜನಿ ಪ್ರೇಮ ಪ್ರಸಂಗದಲ್ಲಿ ತೀರ್ಪು ತೆಗೆದುಕೊಂಡವರು ಶ್ರೀಗಳಾದ ಒಕ್ಕುಂದದ ಪಡದಪ್ಪನವರು'. ಹೀಗಾಗಿ ಸಮಾಜದಲ್ಲಿ ನ್ಯಾಯ ನೆಲೆಸುವಂತೆ ಕಿತ್ತೂರಿನ ರಾಣಿಯರೂ ಶ್ರಮಿಸುತ್ತಿದ್ದರು.

"ಗೌಡದೇಶದ ರಾಯನಿವನೆನೆ ಹಳ್ಳಿಯ ಗೌಡನೆಂದೆಣಿಸಿ"[೫೨] ಎಂಬಂತೆ ಒಂದು ಹಳ್ಳಿಯ ಆಡಳಿತ ನೋಡಿಕೊಳ್ಳುವವ, ನಿರ್ವಹಿಸುವವನೇ ಗೌಡ, ಗ್ರಾಮುಂಡ>ಗಾವುಂಡ>ಗೌಡ ಎಂದಾಗಿದೆ. ಗ್ರಾಮದ ಆಡಳಿತ ನೋಡಿಕೊಳ್ಳುವವರು ಇವರಾಗಿದ್ದರು. ಗ್ರಾಮದ ರಕ್ಷಣೆ ಮತ್ತು ಸುಂಕ ಸಂಗ್ರಹ ಕಾರ್ಯವನ್ನು ಮಾಡುತ್ತಿದ್ದರು. ಗ್ರಾಮಾಡಳಿತದಲ್ಲಿ ಗಾವುಂಡರ ಜೊತೆಗೆ ಇತರ ಅಧಿಕಾರಿ ವರ್ಗವು ಇತ್ತು. ಕೆಳದಿ ಅರಸರ ಕಾಲದಲ್ಲಿ ಕಾಸರಗೋಡುತಿಮ್ಮಪ್ಪ, ಸಬನೀಸ್ ಕೃಷ್ಣಪಯ್ಯರು ರಕ್ಷಣೆಯ ಹೊಣೆ ಹೊತ್ತಿದ್ದರು. ಕೆಳದಿಯರು ಪ್ರಜಾಪ್ರಭುತ್ವ ಪದ್ಧತಿಗೆ ಪ್ರಾಧಾನ್ಯತೆ ನೀಡಿದ್ದರು. ಆಗಾಗ ಗ್ರಾಮದ ಮುಖ್ಯಸ್ಥರ ಸಭೆಯನ್ನು ಕರೆಯುತ್ತಿದ್ದರು.

ಕಿತ್ತೂರು ಸಂಸ್ಥಾನದಲ್ಲಿ 'ಪೇಶ್ವೆಯರ ಕಾಲದಲ್ಲಿ ೨೮೨೪ ಮೌಜೆಗಳಿದ್ದವು. ಮೌಜೆ ಎಂದರೆ ಗ್ರಾಮ. ಅವುಗಳನ್ನು ಸರಂಜಾಮಿ ಗ್ರಾಮಗಳು, ಕಂದಾಯ ವಸೂಲಿ ಗ್ರಾಮಗಳು, ದುಮಾಲೆ ಗ್ರಾಮ(ವಾರ್ಷಿಕ ಉತ್ಪನ್ನ ಅನುಭವಿಸುವುದು) ಎಂದು ಗುರುತಿಸಲಾಗಿದೆ. ಇವುಗಳ ಆಡಳಿತವನ್ನು ಇನಾಂದಾರರು ಮತ್ತು ದೇಸಾಯಿಗಳು ನೋಡಿಕೊಳ್ಳುತ್ತಿದ್ದರು. ಕುಲಕರ್ಣಿಗಳು ಲೆಕ್ಕಪತ್ರ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರು. ಕಿತ್ತೂರು ಸಂಸ್ಥಾನದಲ್ಲಿ ತಳವಾರರು ಇದ್ದು, ಊರನ್ನು ಕಾಯುವ ಕೆಲಸವನ್ನು ಇವರು ಮಾಡುತ್ತಿದ್ದರು. ರಾಯಣ್ಣನು ಸಂಗೊಳ್ಳಿ ಊರಿನವ ನಾಗಿದ್ದು, ಊರನ್ನು ಕಾಯುವ ವೃತ್ತಿ ಇವನದಾಗಿತ್ತು. ಸಿರಸಂಗಿ ಸಂಸ್ಥಾನದಲ್ಲಿ ಪೇಶ್ವೆಗಳ ಗ್ರಾಮಾಡಳಿತ ಪದ್ಧತಿಯಿದ್ದು, ಗ್ರಾಮದ ಆಡಳಿತದ ನೋಡಿಕೊಳ್ಳಲು ಗ್ರಾಮಾಧಿಕಾರಿಗಳು ಇದ್ದರು. ಕಳಲೆಯಲ್ಲಿ ಗ್ರಾಮವ್ಯವಸ್ಥೆ ಇದ್ದು, ಇವರು ದೊಡ್ಡ ಗ್ರಾಮಗಳನ್ನು ಮಾತ್ರ ಗ್ರಾಮಗಳೆನ್ನುತ್ತಿದ್ದರು. ಈ ದೊಡ್ಡ ಗ್ರಾಮಗಳಿಗ ಉಪಗ್ರಾಮಗಳು ಇರುತ್ತಿದ್ದವು. ಹರಯಾರ ಗ್ರಾಮ, ಹೊಸಳ್ಳಿ ಗ್ರಾಮ, ಮೈಲನಾಯಕನ ಹಳ್ಳಿ, ಕಾಮಹಳ್ಳಿ ಇತ್ಯಾದಿ ಗ್ರಾಮಗಳು ಪ್ರಮುಖವಾಗಿದ್ದು, ಕರಣಿಕರು

ಗ್ರಾಮದ ಕಂದಾಯ ಆಡಳಿತದ ನೋಡಿಕೊಳ್ಳುತ್ತಿದ್ದರು. ಶಾನುಭೋಗರು ಕೂಡ ಗ್ರಾಮದ ಆಡಳಿತ ನೋಡಿಕೊಳ್ಳುತ್ತಿದ್ದರು.

ಇವರು ಭೂಕಂದಾಯದ ಲೆಕ್ಕ ಪತ್ರಗಳನ್ನಿಡುವ ಅಧಿಕಾರಿಯಾಗಿದ್ದರು. ಪ್ರತಿಯೊಂದು ಗ್ರಾಮಕ್ಕೂ ಒಬ್ಬೊಬ್ಬ ಸೇನುಭೋವನಿದ್ದು. ಗ್ರಾಮದ ಆಡಳಿತ ನೋಡಿಕೊಳ್ಳುತ್ತಿದ್ದರು. ಕೆಳದಿ ಸಂಸ್ಥಾನದಲ್ಲಿ ಸೇನುಭೋವರು ಕಂದಾಯ ವಸೂಲಿ ಮಾಡುತ್ತಿದ್ದರು. ಗ್ರಾಮದ ಅಧಿಕಾರಿಗಳಾದ ಇವರು ಸರ್ಕಾರಿ ಜಮೀನು, ಖಾಸಗಿ ಆಸ್ತಿ ಪಾಸ್ತಿ, ಭೂಮಿ ಮುಂತಾದವುಗಳ ಲೆಕ್ಕಪತ್ರವಿಡುತ್ತಿದ್ದರು. ಕೆಳದಿ ರಾಣಿ ಚೆನ್ನಮ್ಮಾಜಿ ಕಾಲದಲ್ಲಿ ವೆಂಕಟಪ್ಪಯ್ಯ ಕರಣಿಕನಾಗಿದ್ದನು.

ಬಿಳಗಿ ಸಂಸ್ಥಾನವು ಉತ್ತಮ ಗ್ರಾಮವ್ಯವಸ್ಥೆ ಹೊಂದಿದ್ದು, ಕುಲಕರಣಿಯು ಲೆಕ್ಕ ಬರೆಯುವ ಕಾರ್ಯವನ್ನು ನಿರ್ವಹಿಸುತ್ತಿದ್ದನು. ಕಿತ್ತೂರ ರಾಣಿ ಚೆನ್ನಮ್ಮನ ಕಾಲದಲ್ಲಿ ಬಾಳಪ್ಪನು ಕುಲಕರ್ಣಿ ಆಗಿದ್ದನು. ಇವರು ಗ್ರಾಮದ ಕಂದಾಯ ವಸೂಲಿ ಮಾಡುತ್ತಿದ್ದರು. ಸಿರಸಂಗಿ ಸಂಸ್ಥಾನದ ಜಾಯಪ್ಪ ದೇಸಾಯಿಯ ಕಾರಕೂನ ಮತ್ತು ಕಾರಭಾರಿ ಬಾಬೂರಾವ ಪಾಟೀಲರು ಇದ್ದರು. ಮುಂದೆ ಈ ಕುಲಕರ್ಣಿಗಳು ಕಂದಾಯ ವಸೂಲಿ ಕಾರ್ಯ ಮಾಡುತ್ತಿದ್ದರು.

ಗ್ರಾಮ ರಕ್ಷಣೆಯ ಹಿನ್ನೆಲೆಯಲ್ಲಿ ತಳಾರ ಅಥವಾ ತಳವಾರರ ಮೇಲೆ ಪೊಲೀಸ್ ಪಾಟೀಲರು ಕೆಲಸ ನಿರ್ವಹಿಸುತ್ತಿದ್ದರು. ಬಿಳಗಿ ಸಂಸ್ಥಾನದಲ್ಲೂ ಪೊಲೀಸ್ ವ್ಯವಸ್ಥೆ ಇತ್ತು.

ಆಡಳಿತದ ತೀರಾ ಕೆಳ ಅಧಿಕಾರಿಯೆಂದರೆ ತಳವಾರ. ಗ್ರಾಮದ ರಕ್ಷಣೆಯೇ ಈತನ ಪ್ರಮುಖ ಕೆಲಸ. ಗ್ರಾಮದಲ್ಲಿ ಸದಾ ಕೈಯಲ್ಲಿ ಖಡ್ಗ ಹಿಡಿದು ಸಂಚರಿಸುತ್ತಾ, ಊರಲ್ಲಿ ಕಳ್ಳತನ, ಕೊಲೆ, ಸುಲಿಗೆ ಹಾಗೂ ದರೋಡೆಗಳು ನಡೆಯದಂತೆ ನೋಡಿಕೊಳ್ಳುತ್ತಿದ್ದರು. ಕಿತ್ತೂರಿನಲ್ಲಿ ತಳವಾರನನ್ನು 'ವಾಲೀಕಾರ', ಹಳಬ ಎಂದೂ ಕರೆಯುವರು. ಸಂಗೊಳ್ಳಿ ಊರಿನವ ರಾದ ರಾಯಣ್ಣನು ಕಿತ್ತೂರಿನ ತಳವಾರನಾಗಿದ್ದು, ಗ್ರಾಮದಲ್ಲಿ ಕುಲಕರ್ಣಿ ಬಾಳಪ್ಪ ಅತಿ ಹೆಚ್ಚು ಕಂದಾಯ ವಸೂಲಿ ಮಾಡುತ್ತಿರುವುದನ್ನು ಪ್ರತಿಭಟಿಸಿದನು. ಗ್ರಾಮದ ಆಡಳಿತ ಸುಗಮವಾಗಲು ಶ್ರಮಿಸಿದನು. ಬೆಳವಡಿ ಸಂಸ್ಥಾನದಲ್ಲಿ ತೋರಣಗಟ್ಟಿಯನು ತಳವಾರನಾಗಿದ್ದನು.

### ೪.೧.೩. ಸಂಸ್ಥಾನಿಕ ರಕ್ಷಣಾ ವ್ಯವಸ್ಥೆ

**ಸೈನ್ಯಾಡಳಿತ:** ರಾಜ್ಯದ ಉತ್ತಮ ಆಡಳಿತವು ಆ ರಾಜ್ಯವು ಹೊಂದಿದ್ದ ಸೈನ್ಯ ಸಮೂಹ ಹಾಗೂ ಸೈನ್ಯದ ಆಡಳಿತವನ್ನು ಅವಲಂಬಿಸಿದೆ. ದಳವಾಯಿ ಅಥವಾ ದಂಡನಾಯಕರು ಇಡೀ ಸೈನಿಕ ವ್ಯವಸ್ಥೆಯನ್ನು ನಿಯಂತ್ರಿಸುತ್ತಿದ್ದರು. ಪ್ರತಿಯೊಬ್ಬ ರಾಜರು ತಮ್ಮ ಸ್ಥಾನ ಭದ್ರಪಡಿಸಿಕೊಳ್ಳಲು

ಶ್ರಮಿಸುತ್ತಿದ್ದರು. ಕೆಳದಿಯಲ್ಲಿ ಉತ್ತಮ ಸೈನಿಕ ವ್ಯವಸ್ಥೆ ಇತ್ತು. ಆನೆ, ಒಂಟೆ, ಕುದುರೆಗಳನ್ನು ಯುದ್ಧದಲ್ಲಿ ಬಳಸುತ್ತಿದ್ದರು.

ಚೆನ್ನಮ್ಮಾಜಿಯ ಸೈನ್ಯವು ೧ ಲಕ್ಷ ೫೦ ಸಾವಿರ ಇತ್ತೆಂದೂ, ಖಡ್ಗ, ಭರ್ಜಿ, ಢಾಲು, ಬಿಲ್ಲು, ಕೊಡಲಿ, ಬಾಣಗಳು ಇವರ ಶಸ್ತ್ರಾಸ್ತ್ರಗಳಾಗಿದ್ದು, ಅಶ್ವಪಡೆಯು ಸೈನ್ಯದ ಪ್ರಬಲ ಘಟಕವಾಗಿತ್ತು. ವಿದೇಶಿ ಅಶ್ವಗಳ ಖರೀದಿಗೆ ಅಪಾರ ಹಣ ಖರ್ಚು ಮಾಡುತ್ತಿದ್ದರೆಂಬ ಅಂಶದ ಮೇಲೆ ವಿದೇಶಿ ಪ್ರವಾಸಿ ಹ್ಯಾಮಿಲ್ಟನ್ನರು ಬೆಳಕು ಚೆಲ್ಲಿದ್ದಾರೆ. ಒಂದನೆಯ ವೆಂಕಟಪ್ಪ ನಾಯಕನ ಸೈನ್ಯದಲ್ಲಿ ೮೦ ಅನೆಗಳಿದ್ದವೆಂದು ಇಟಲಿ ಯಾತ್ರಿಕ ತಿಳಿಸುತ್ತಾನೆ. ಸಿಡಿಮದ್ದು, ಮದ್ದುಗುಂಡುಗಳನ್ನು ಯುರೋಪಿಯನ್ನರಿಂದ ಪಡೆಯುತ್ತಿದ್ದರು. ರಾಣಿ ಚೆನ್ನಮ್ಮಾಜಿಯ ಕಾಲದಲ್ಲಿ ದಳವಾಯಿ ಚನ್ನಬಸಪ್ಪ ಹಾಗೂ ಯಾಕೂಬ ಖಾನರು ಆನೆಯ ಮೇಲೆ ಕುಳಿತು ಪ್ರಯಾಣ ಮಾಡುತ್ತಿದ್ದರು. ಕೆಳದಿ ಸಂಸ್ಥಾನದಲ್ಲಿ ನಾಲ್ಕು ವಿಭಾಗಗಳಿದ್ದವು. ಕತ್ತಿಗಾಳಗದವರು, ಭರ್ಜಿಯವರು, ಬಿಲ್ಗಾರರು, ಬಂದೂಕುಧಾರಿಗಳು ಇದ್ದರು.

ಸ್ವಾದಿ ಸಂಸ್ಥಾನದಲ್ಲಿ ೧೨೦೦ ಕಾಲ್ದಳ, ೨೦೦ ಅಶ್ವದಳ ಇತ್ತೆಂದೂ, ರಾಣಿ ಮಲ್ಲಮ್ಮಾಜಿ ೨೦೦೦ ಮಹಿಳಾ ಸೈನ್ಯವನ್ನು ಹೊಂದಿದ್ದಳೆಂದು, ಗೌರಮ್ಮ ರಾಣಿಯ ಮಹಿಳಾ ಸೈನ್ಯದಲ್ಲಿ ಪ್ರಮುಖ ಸ್ಥಾನ ಪಡೆದಿದ್ದಳು. ಯುದ್ಧರಂಗದಲ್ಲಿ ಬೇಕಾಗುವ ಶಸ್ತ್ರಾಸ್ತ್ರಗಳು ಮತ್ತು ಮದ್ದುಗುಂಡುಗಳನ್ನು ಪೋರ್ಚುಗೀಸರಿಂದ ಪಡೆಯುತ್ತಿದ್ದರು. ಇವರು ತುಪಾಕಿಯನ್ನು ಬಳಸುತ್ತಿದ್ದರು. ಅಲ್ಲದೆ ಬಿಲ್ಲು, ಬಾಣ, ಭರ್ಜಿ, ಖಡ್ಗ, ಗುರಾಣಿ ಮುಂತಾದ ಅಸ್ತ್ರಗಳನ್ನು ಬಳಸುತ್ತಿದ್ದರು. ಇವರಲ್ಲಿ ನೌಕಾಪಡೆಯಿತ್ತು.

ಸ್ವಾದಿ ಸಂಸ್ಥಾನದ ಮಧುಲಿಂಗನಾಯಕನು ತನ್ನ ಮಗಳ ವಿವಾಹ ಸಂದರ್ಭದಲ್ಲಿ ಮಲ್ಲಮ್ಮಾಜಿ ಹಾಗೂ ಈಶಪ್ರಭು ರಾಜದಂಪತಿಗಳಿಗೆ ಕುದುರೆ, ಒಂಟೆ, ಆನೆಗಳನ್ನು ಕೊಟ್ಟು ಬೆಳವಡಿ ಸಂಸ್ಥಾನಕ್ಕೆ ಕಳಿಸಿದನು. ಇದರಿಂದ ಅವರ ಸೈನ್ಯಾಡಳಿತದಲ್ಲಿ ಅಶ್ವಪಡೆ, ಒಂಟೆಪಡೆ, ಗಜಪಡೆ, ಅಲ್ಲದೆ ನೌಕಾಪಡೆ ಇದ್ದಿತೆಂಬುದನ್ನು ತಿಳಿಯಬಹುದಾಗಿದೆ.

ಸಿರಸಂಗಿ ರಾಣಿ ಚೆನ್ನಾಂಬೆಯು ಉತ್ತಮ ಸೈನ್ಯಾಡಳಿತ ಹೊಂದಿದ್ದಳು. ಗೂಢಚಾರರನ್ನು ಯಾವಗಲ್ಲಿನ ಭಾಗಗಳಿಗೆ ಕಳಿಸಿ ಮಾಹಿತಿಯನ್ನು ಸಂಗ್ರಹಿಸುತ್ತಿದ್ದಳು. ಶತ್ರುಗಳ ರಹಸ್ಯವನ್ನು ತಿಳಿಯಲು ಈ ಗೂಢಚಾರರು ಪ್ರಮುಖ ಪಾತ್ರ ವಹಿಸುತ್ತಾರೆ. ನರಗುಂದ ಸೀಮೆಯ ಕೆಲವು ಫಲವತ್ತಾದ ಹೊಲಗಳನ್ನು ನರಗುಂದದ ಸಚಿವ ರಾಮರಾಯರು 'ಕುಪ್ಪಸಗೆಯ್'ಗಳೆಂದು ಸಿರಸಂಗಿ–ನವಲ್ಗುಂದ ಸಂಸ್ಥಾನಕ್ಕೆ ನರಗುಂದ ಸೀಮೆ, ಹಿರೇಕೊಪ್ಪ, ಹಂಪಿಹೊಳೆ, ನೂತನ ನಾಗನೂರುಗಳನ್ನು ಕಾಣಿಕೆಯಾಗಿ ಸಲ್ಲಿಸಿದನು.

ಕ್ರಿ.ಶ.೧೭೧೬ರಿಂದ ಕ್ರಿ.ಶ.೧೭೩೪ರವರೆಗೆ ಸಂಸ್ಥಾನದ ಆಧಿಪತ್ಯ ವಹಿಸಿದ ರಾಣಿ ಚೆನ್ನಾಂಬೆ ಸು.೧೮ ವರ್ಷಗಳ ತನ್ನ ಆಡಳಿತಾವಧಿಯಲ್ಲಿ ಸಂಸ್ಥಾನದ ಪ್ರತಿಷ್ಠೆಯನ್ನು ಹೆಚ್ಚಿಸಿ, ಆರ್ಥಿಕ ಸ್ಥಿತಿಗತಿಗಳನ್ನು ಭದ್ರಗೊಳಿಸಿದಳು.

ಕಿತ್ತೂರು ನಾಡು ಉತ್ತಮ ಸೈನಿಕ ವ್ಯವಸ್ಥೆಯನ್ನು ಹೊಂದಿದ್ದು, ೧೦೦೦ ಆನೆಗಳು, ಮೂರುಸಾವಿರ ಒಂಟೆಗಳು, ೫೦೦೦ ರಾಹುತರು, ೧೦,೦೦೦ ಕಾಲ್ದಳದವರು ಇರುತ್ತಿದ್ದರು ಎಂದು ಹೇಳಲಾಗಿದೆ. ಸ್ಟೀವನ್‌ಸನ್ ಬರೆದ ಪತ್ರದಂತೆ ಕಿತ್ತೂರಿನಲ್ಲಿ ೫೦೦೦ಕ್ಕೂ ಮಿಕ್ಕಿದ ಸರದಾರರಿದ್ದರು. ಫಿರಂಗಿಗಳ ಸಂಖ್ಯೆ ಸು.೨೦ ಇದ್ದು, ಬಂದೂಕು, ಖಡ್ಗ, ಬಾಣ, ಭರ್ಚಿ, ಚಾಪಗೊಡ್ಲಿಯಂಥ ಆಯುಧಗಳಿದ್ದವು. ಕಿತ್ತೂರು ಸಂಸ್ಥಾನ ಹಾಗೂ ಜಮಖಂಡಿ ಸಂಸ್ಥಾನದ ನಡುವೆ ರಾಜಕೀಯ ಸಂಬಂಧ ಸುಗಮವಾಗಿರಲಿಲ್ಲ.

### ೪.೧.೪. ರಾಜನೈತಿಕ ಸಂಬಂಧಗಳು

ಕೆಳದಿ, ಬಿಳಗಿ, ಸ್ವಾದಿ ಸಂಸ್ಥಾನಿಕರು ಪೋರ್ಚುಗೀಸರು, ದೆಹಲಿ, ಬ್ರಿಟಿಷರೊಂದಿಗೆ ಮೈತ್ರಿಯುತ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಹೊರರಾಜ್ಯಗಳೊಡನೆ ಮೈತ್ರಿಯನ್ನು ಉಳಿಸಿಕೊಳ್ಳಲು, ಶಾಂತಿ ಸುವ್ಯವಸ್ಥೆಯನ್ನು ಕಾಪಾಡಲು ವೈವಾಹಿಕ ಸಂಬಂಧಗಳನ್ನು ಬಳಸಿರುವುದು ಕಂಡುಬರುತ್ತದೆ. ರಾಣಿ ಚೆನ್ನಮ್ಮಾಜಿಯು ಮರಾಠಾ ಚಕ್ರವರ್ತಿ ಶಿವಾಜಿಯ ಮಗ ರಾಜಾರಾಮನಿಗೆ ಆಶ್ರಯ ನೀಡಿ, ಔರಂಗಜೇಬನ ಸೈನ್ಯವನ್ನು ಸೋಲಿಸಿದಳು. ಪೋರ್ಚುಗೀಸರೊಂದಿಗೆ ಉತ್ತಮ ವ್ಯವಹಾರ ಇಟ್ಟುಕೊಂಡಿದ್ದಳು. ಸೇನಾ ಸಹಾಯ, ರಾಜರ ನಡುವೆ ಆತ್ಮೀಯ ಸಂಬಂಧವನ್ನಿಟ್ಟು ಕೊಂಡಿದ್ದರು.

ಸೋದೆ ಅರಸರು ವಿಜಯನಗರ, ಕೆಳದಿ, ಬಿಳಗಿ, ವಿಜಾಪುರ ಆದಿಲ್‌ಶಾಹಿ, ಬೆಳವಡಿ, ಮರಾಠರೊಂದಿಗೆ ಸಂಪರ್ಕವನ್ನು ಹೊಂದಿದ್ದರು. ಸೋದೆ ಮತ್ತು ಬಿಳಗಿ ಸಂಸ್ಥಾನಿಕರು ಸ್ನೇಹಪೂರ್ವಕ ಸಂಬಂಧವನ್ನು ಹೊಂದಿದ್ದರು. ಸೋದೆ ಮತ್ತು ಬೆಳವಡಿಯ ನಡುವೆ ನಿಕಟವಾದ ಸಂಬಂಧವಿತ್ತು. ಕೆಳದಿ ಮತ್ತು ಸೋದೆ ಅರಸರ ಸಂಪರ್ಕ ಘರ್ಷಣಾತ್ಮಕವಾಗಿತ್ತು. ಮರಾಠರಿಗೂ ಸೋದೆಯವರಿಗೂ ಸ್ನೇಹಯುತ ಸಂಬಂಧಗಳಿದ್ದವು.

ಚೆನ್ನಮ್ಮ ರಾಣಿಯು ಸವಣೂರ ನವಾಬ, ಕರವೀರ ಪುರದ ಮರಾಠಿ ಅರಸರಿಗೂ, ಪುಣ್ಯಪತ್ತದ(ಪುಣೆಯ) ಪೇಶ್ವೆಗೂ, ನರಗುಂದ ರಾಮರಾವ್ ಸಚಿವರು ಇವರೆಲ್ಲರಿಗೂ ನೆರವನ್ನಿತ್ತು ಒಲುಮೆಯನ್ನು ಪಡೆದು ತನ್ನ ದೇಸಗತಿಯನ್ನು ಭದ್ರಪಡಿಸಿದಳು.[೫೩]

ಬಿಳಗಿ ಮತ್ತು ಬ್ರಿಟಿಷರ ರಾಜಕೀಯ ಸಂಬಂಧ ಒಳ್ಳೆಯದಾಗಿರಲಿಲ್ಲ. ಬ್ರಿಟೀಷರು ಈ ರಾಜವಂಶೀಯರನ್ನು ಬೆಂಗಳೂರಿನಲ್ಲಿ ರಾಜಕೀಯ ದಿಗ್ಬಂಧನದಲ್ಲಿ ಇಟ್ಟಿದ್ದರು. ಹಾಗೂ

ಕ್ರಿ.ಶ.೧೮೩೨ರ ಒಂದು ಪತ್ರದಲ್ಲಿ ಬಿಳಗಿ ರಾಜರ ತಂಗಿಯರ ಪೆನ್ಶನ್ ರದ್ದು ಮಾಡಿದ ಉಲ್ಲೇಖವೂ ಇದೆ.[೫೪] ಈ ವಂಶೀಯರು ಬೆಂಗಳೂರು ಬಸವನ ಗುಡಿಯಿಂದ ಬಿಳಗಿಗೆ ಬರೆದ ಪತ್ರವನ್ನು ಡಾ.ಸೂರ್ಯನಾಥ ಕಾಮತರು ಕಣ್ಣಾರೆ ಕಂಡುದುದಾಗಿ ದಾಖಲಿಸಿದ್ದಾರೆ.

ಕ್ರಿ.ಶ.೧೬೮೨ರವರೆಗೂ ಕಳಲೆಯನ್ನು ಆಳಿದ ಕುಮಾರಯ್ಯನ ದಕ್ಷತೆ ಹಾಗೂ ಪ್ರಾಮಾಣಿಕತೆಯನ್ನು ಮೆಚ್ಚಿದ ಮೈಸೂರು ಒಡೆಯರು ಎರಡೂ ಮನೆತನಗಳ ನಡುವೆ ಬಾಂಧವ್ಯ ಬಿಗಿಗೊಳಿಸಲು ದಳವಾಯಿಯ ಇಬ್ಬರು ಪುತ್ರಿಯರನ್ನು ತಾವೇ ವಿವಾಹವಾದರು. ದಳವಾಯಿಯ ಪುತ್ರಿಯರ ಹೆಸರು ಹಾಗೂ ಇತರೆ ಮಾಹಿತಿಗಳು ಲಭಿಸಿಲ್ಲ. ಇನ್ನೊಬ್ಬ ಕಳಲೆ ಮನೆತನದ ದಳವಾಯಿ ಕಾಂತರಾಜಯ್ಯನು ತನ್ನ ವಂಶದ ಚಲುವಾಜಮ್ಮಣ್ಣಿಯನ್ನು ಮೈಸೂರಿನ ಮೂಕರಸು ೨ನೇ ಕಂಠೀರವ ನರಸರಾಜ ಒಡೆಯರಿಗೆ ಮದುವೆ ಮಾಡಿಸಿ, ತನ್ನ ಪ್ರತಿಷ್ಠೆ, ಗೌರವ, ಅಧಿಕಾರಗಳನ್ನು ಹೆಚ್ಚಿಸಿಕೊಂಡನು. ಅಲ್ಲದೆ ಮೈಸೂರಿನ ಅರಸನಾದ ಹಿರಿಯ ಬೆಟ್ಟೊಡೆಯರು ಬೆಟ್ಟದ ಕೋಟೆಯ ರಾಜಪುತ್ರಿಯಾದ ಗೋಪಾಜಮ್ಮನನ್ನು ಮದುವೆಯಾದರು. ಇವರ ಮಗ ತಿಮ್ಮರಾಜ ಒಡೆಯರಿಗೆ ಕಳಲೆಯ ಕಾಂತಾಜಮ್ಮಣ್ಣಿ ಸತಿಯಾದಳು.

### ೪.೧.೩. ರಾಣಿಯರ ಕರ್ತವ್ಯಗಳು

ರಾಣಿಯು ಆಡಳಿತದ ಒಂದು ಭಾಗವಾಗಿ, ಧರ್ಮಾನುಸರಣೆ, ಪ್ರಜಾಪಾಲನೆಯನ್ನು ಮಾಡುತ್ತಿದ್ದಳು. ರಾಜ್ಯ, ರಾಷ್ಟ್ರ, ಕೋಶ, ಪ್ರಜೆ, ಪರಿವಾರ, ಪರಿಜನ, ಪುರಜನ, ನಿಯೋಗಿಜನ, ಮಂತ್ರಿಜನ, ದೇಶಸೇವಾಜನರನ್ನು ರಕ್ಷಿಸುವ ಹಾಗೂ ರಾಜಕುಮಾರನಿಗೆ ನೀತಿ ಬೋಧಿಸಿ ಅವನನ್ನು ಒಬ್ಬ ಯೋಗ್ಯ ಅರಸನನ್ನಾಗಿ ನಿರ್ಮಿಸುವ ಹೊಣೆಯು ರಾಣಿಯರದಾಗಿತ್ತು. ಈ ನಿಟ್ಟಿನಲ್ಲಿ ಕೆಳದಿ ರಾಣಿ ಚೆನ್ನಮ್ಮಾಜಿಯು ಉತ್ತಮ ಆಡಳಿತಗಾರ್ತಿಯಾಗಿದ್ದಳು. ಅಲ್ಲದೆ ತನ್ನ ದತ್ತುಮಗನಾದ ಬಸಪ್ಪನಾಯಕನಿಗೆ ಒಬ್ಬ ರಾಜಮಾತೆಯಾಗಿ ರಾಜನ ಕರ್ತವ್ಯ ಏನು ಎಂಬುದನ್ನು ಬೋಧಿಸಿದ ಮಹಾಮಾತೆಯಾಗಿದ್ದಾಳೆ. ಬೆಳವಡಿಯ ರಾಣಿ ಮಲ್ಲಮ್ಮಾಜಿಯು ಸಮರ್ಥವಾಗಿ ರಾಜ್ಯ ಆಡಳಿತವನ್ನು ನೋಡಿಕೊಂಡಳು. ಅಲ್ಲದೆ ಮಗ ನಾಗಭೂಷಣನ ಪೋಷಣೆಯ ಹೊಣೆ ಹೊತ್ತಿದ್ದಳು. ಸಿರಸಂಗಿಯ ರಾಣಿ ಚೆನ್ನಮ್ಮಾಜಿ ಮಗ ಜಾಯಗೊಂಡನ ಶಿಕ್ಷಣಕ್ಕೆ ವೇದ, ಸ್ಮೃತಿ, ಜೋತಿಷ್ಯ ಮುಂತಾದ ವಿಷಯಗಳ ಅಧ್ಯಯನಕ್ಕೆ ಏರ್ಪಾಡು ಮಾಡಿದಳು. ಕುದುರೆಸವಾರಿ, ಬಿಲ್ವಿದ್ಯೆ, ಕತ್ತಿವರಸೆ ಕಲಿಯಲು ಪ್ರೋತ್ಸಾಹಿಸಿದಳು. ಕಿತ್ತೂರಿನ ರಾಣಿ ಚೆನ್ನಮ್ಮಾಜಿ ತನ್ನ ಮಗನಾದ ಶಿವಲಿಂಗರುದ್ರಸರ್ಜನಿಗೆ ವಿಶೇಷ ರೀತಿಯ ಮಾರ್ಗದರ್ಶಕಳಾಗಿದ್ದಳು.

ರಾಣಿಯರು ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಲು ಶ್ರಮಿಸುತ್ತಿದ್ದರು. ದೇವಾಲಯ, ಮಠ ನಿರ್ಮಾಣಕ್ಕೆ ಕಾರಣರಾಗಿದ್ದು, ಮಠ-ಮಾನ್ಯಗಳಿಗೆ ದಾನ-ದತ್ತಿಗಳನ್ನು ಬಿಟ್ಟಿರುವರು.

ದೇವಾಲಯ ಹಾಗೂ ಮಠಗಳಿಗೆ ಸರಕು ಹೊತ್ತೊಯ್ಯುವ ಎತ್ತುಗಳ ಮೇಲಿನ ತೆರಿಗೆಯನ್ನು ಕೆಳದಿ ರಾಣಿ ಚೆನ್ನಮ್ಮಾಜಿ ಮನ್ನಾ ಮಾಡಿದಳು. ಕೆಳದಿ ರಾಣಿ ಚೆನ್ನಮ್ಮಾಜಿ ವಿವಿಧ ಉದ್ದೇಶಗಳಿಂದ ತೀರ್ಥಯಾತ್ರೆಯನ್ನು ಮಾಡಿದಳು. ರಾಣಿಯರು ಬ್ರಾಹ್ಮಣರಿಗೆ, ದೇವರಿಗೆ ಸೇವೆಯನ್ನು ಮಾಡುವುದಲ್ಲದೆ, ಪ್ರಜೆಗಳ ಸೇವೆಯನ್ನು ಮಾಡುತ್ತಿದ್ದರು. ಪ್ರಜೆಗಳ ಅನುಕೂಲಕ್ಕಾಗಿ ಹಲವಾರು ಸುಧಾರಣೆ ಮಾಡಿದರು.

**೪.೧.೬ ದತ್ತು ಸ್ವೀಕಾರ**

ಹಿಂದೂ ಧರ್ಮದಲ್ಲಿ 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ಶಾಸ್ತ್ರವಾಕ್ಯ ಆದರಣೀಯವಾದುದು. "ಪುತ್ ಎಂಬ ನರಕದಿಂದ 'ತ್ರ' ಕಾಪಾಡತಕ್ಕವನು ಯಾವನೋ ಅವನೇ ಪುತ್ರ." ತಂದೆ-ತಾಯಿಗೆ ಪರಶಿವನ ಸನ್ನಿಧಿ ಸಿಗಲೆಂದು, ರಾಜವಂಶದ ಅಭ್ಯುದಯಕ್ಕೆ ಪುತ್ರನೇ ಕಾರಣವಾಗಿದ್ದಾನೆ. ಪುತ್ರರಿಲ್ಲದವರು ಶಾಸ್ತ್ರೋಕ್ತವಾಗಿ ಮಗನನ್ನು ದತ್ತು ಸ್ವೀಕರಿಸಬೇಕೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. "ರಾಜನು ಜೀವಿಸಿರುವಾಗಲೇ ಉತ್ತರಾಧಿಕಾರಿಯನ್ನು ಆಯ್ಕೆ ಮಾಡಬೇಕೆಂದು ಸ್ಮೃತಿಗಳು ಹೇಳುತ್ತವೆ."[೫೫]

ಪರಂಪರಾಗತವಾಗಿ ಸಿಂಹಾಸನಾಧಿಪತ್ಯವು ವಂಶಪಾರಂಪರ್ಯವಾಗಿದ್ದಿತು. ಸಾಮ್ರಾಜ್ಯದ ಅರಸನ ಅಕಾಲಿಕ ಮರಣದಿಂದಲೋ ಅಥವಾ ಅರಸನ ಇಚ್ಛೆಯಂತೆ ತೆರವಾದ ಸಿಂಹಾಸನವನ್ನು ಅರಸನ ಹಿರಿಯ ಮಗ ಅಲಂಕರಿಸುತ್ತಿದ್ದ. ಹಿರಿಯ ಮಗನ ದಕ್ಷತೆ, ಯೋಗ್ಯತೆಗಳನ್ನು ಪ್ರಧಾನ ವಾಗಿ ಪರಿಗಣಿಸಿ, ಕಿರಿಯ ಮಗನನ್ನು ಉತ್ತರಾಧಿಕಾರಿಯನ್ನಾಗಿ ಮಾಡುತ್ತಿದ್ದುದು ಉಂಟು. ಆದರೆ ನಮ್ಮ ಸಂಸ್ಥಾನಿಕ ಬಹುತೇಕ ಅರಸರು ತನ್ನ ನಂತರ ಯಾರು ಅಧಿಕಾರಕ್ಕೆ ಬರಬೇಕೆಂದು ನಿರ್ಧರಿಸಿದಂತೆ ಕಂಡುಬರುವುದಿಲ್ಲ. ಏಕೆಂದರೆ ತೆರವಾಗಿರುವ ಸಿಂಹಾಸನಕ್ಕೆ ಯೋಗ್ಯರಾದವರನ್ನು ಹಿರಿಯರೊಂದಿಗೆ ಸಮಾಲೋಚಿಸಿ ರಾಣಿಯರೇ ಆಯ್ಕೆ ಮಾಡಿರುವುದು ಕಂಡುಬರುತ್ತದೆ. ದತ್ತು ಸ್ವೀಕಾರವು ಅನಿವಾರ್ಯ ಹಾಗೂ ಬಹು ಅಗತ್ಯದ ಕಾರ್ಯವಾಗಿತ್ತು. ಕೆಳದಿ ರಾಣಿ ಚೆನ್ನಮ್ಮಾಜಿಯು ಕೆಳದಿ ಸಂಸ್ಥಾನಕ್ಕೆ "ಕೆಳದಿ ಧರ್ಮ ಸಂಸ್ಥಾನದ ರಾಜತ್ವಕರ್ಹನಾದೋರ್ವ ಕುಮಾರನಾಗಲ್ವೇಳ್ಕೆಂದು, ಮಂತ್ರಿಜನ, ನಿಯೋಗಿಜನ, ಬಂಧು ಜನರೊಳ್ ಆಲೋಚಿಸಿ, ಶಿವಪ್ಪನಾಯಕರ ಜ್ಯೇಷ್ಠ ಪುತ್ರರಾದ ಭದ್ರಪ್ಪನಾಯಕ ಹಾಗೂ ತನ್ನ ಪತಿ ಸೋಮಶೇಖರ ನಾಯಕರ ಸೋದರರಾದುದರಿಂದ ಭದ್ರಪ್ಪನಾಯಕರ ಪತ್ನಿ ಸಿದ್ಧಮ್ಮಾಜಿ ಮತ್ತು ನಂಬಿಯಣ್ಣಶೆಟ್ಟರ ಮಗ ಮರಿಯಪ್ಪಶೆಟ್ಟರ ಪತ್ನಿಯಾದ ಗೌರಮ್ಮನವರ ಪುತ್ರನಾದ 'ಬಸಪ್ಪ'ನನ್ನು ರಾಜತ್ವಕ್ಕರ್ಹನೆಂದು ತಿಳಿದು ಸರ್ವಸಮ್ಮತದಿಂದ ದತ್ತುಮಗನಾಗಿ ಸ್ವೀಕರಿಸಲಾಯ್ತು".[೫೬]

ಈ ಬಸಪ್ಪನಾಯಕನಿಗೆ "ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೫೯೫ನೇ ಪರಿಧಾವಿ ನಾಮ ಸಂವತ್ಸರದ ಶ್ರಾವಣಶುದ್ಧ ೧೪ನೆಯ ದಿವಸ"ದಂದು ಬಸಪ್ಪ

ನಾಯಕರನ್ನು ಸರ್ವಸಂಭ್ರಮದಿಂದ ಗೃಹೀತ ಪುತ್ರನನ್ನಾಗಿ ಮಾಡಿಕೊಂಡಳು. ಹೀಗೆ ಈತ ಪ್ರಾಪ್ತ ವಯಸ್ಕನಾಗುವವರೆಗೂ ಚೆನ್ನಮ್ಮಾಜಿಯೇ ಆಡಳಿತವನ್ನು ನಿರ್ವಹಿಸಿದಳು.

ಕೆಳದಿಯ ಮತ್ತೊಬ್ಬ ಸಮರ್ಥ ರಾಣಿಯಾದ ರಾಣಿ ವೀರಮ್ಮಾಜಿಯು ಬಂಕಾಪುರದಲ್ಲಿರುವ ತಮ್ಮ ಸೋದರಮಾವನಾದ ಪಟ್ಟಣಶೆಟ್ಟಿ ಚೆನ್ನವೀರಪ್ಪನವರ ಚಿಕ್ಕಮಗನನ್ನು 'ಸೋಮಶೇಖರ ನಾಯಕ'ನೆಂದು ನಾಮಕರಣ ಮಾಡಿದಳು. ಅತ್ಯಂತ ವೈಭವದಿಂದ 'ಗಗನ್ ಮಹಲ್ ಚಾವಡಿ'ಯಲ್ಲಿ ಪಟ್ಟಾಭಿಷೇಕವನ್ನು ಮಾಡಿ, ರಾಜ್ಯದಲ್ಲಿಯ ರಾಜ್ಯಕಾರ್ಯಗಳನ್ನೆಲ್ಲ ತಾನೇ ನಿರ್ವಹಿಸಿದಳು ಎಂಬ ಅಂಶ ಕೆಳದಿ ನೃಪವಿಜಯದಿಂದ ಸ್ಪಷ್ಟವಾಗುತ್ತದೆ. ಸೋಮಶೇಖರ ನಾಯಕನನ್ನು ದತ್ತು ತೆಗೆದುಕೊಳ್ಳುವ ಪೂರ್ವದಲ್ಲಿ "ಚೆನ್ನಬಸವಯ್ಯನನ್ನು ದತ್ತು ತೆಗೆದುಕೊಂಡು, ಆತನ ರಕ್ಷಣೆಯ ಹೊಣೆ ಹೊತ್ತಳು."[೫೭] ಕೆಲ ಕಾಲದ ನಂತರ ಆತ ಮರಣ ಹೊಂದಿದನು.

ಕಳಲೆಯ ದೊರೆಯಾದ ನಂಜರಾಜನ ಮರಣಾನಂತರ "ಚಾಮರಾಜರನ್ನು ದತ್ತುವಾಗಿ ಸ್ವೀಕರಿಸಿ ಶಕವರುಷ ೧೬೭೯ನೇ ಹೇವಿಳಂಬಿ ಸಂವತ್ಸರದಲ್ಲಿ ಪಟ್ಟಾಭಿಷೇಕವಾಯಿತೆಂಬ ದಾಖಲೆಯಿದೆ"[೫೮] ಆದರೆ ಯಾರು ದತ್ತು ಸ್ವೀಕರಿಸಿದರೆಂಬ ಉಲ್ಲೇಖವಿಲ್ಲ.

ಕಿತ್ತೂರಿನ ರಾಣಿ ಚೆನ್ನಮ್ಮಾಜಿಯು ದೊರೆ ಮಲ್ಲಸರ್ಜನ ಮರಣದ ನಂತರ ಹಿರಿಯ ಮಗ ಶಿವಲಿಂಗರುದ್ರಸರ್ಜನು ಅಧಿಕಾರಕ್ಕೆ ಬಂದನು. ಆದರೆ ಅನಾರೋಗ್ಯದಿಂದ ಈತ ಬಳಲಿದ. ದೇಹದ ಶಕ್ತಿ ಕುಗ್ಗಿದಂತೆಲ್ಲ ಥ್ಯಾಕರೆಗೆ ಔಷಧಿ ಕಳಿಸಿ ಕೊಡಲು ಪತ್ರ ಬರೆದನು. ಅಲ್ಲದೆ "ಥ್ಯಾಕರೆಯನ್ನು ಕಿತ್ತೂರಿಗೆ ಬರಮಾಡಿಕೊಂಡು, ಬಹುಕಾಲದವರೆಗೂ ಮಾತುಕತೆ ನಡೆಸಿದನು. ಆದರೆ ಈತ ತನ್ನ ಆರೋಗ್ಯದ ಕಳಕಳಿ ಮಾತು ಹೊರತುಪಡಿಸಿ ಏನನ್ನೂ ಮಾತನಾಡಲಿಲ್ಲ. ಕಿತ್ತೂರಿನ ಭವಿಷ್ಯದ ಬಗ್ಗೆ ಪ್ರಸ್ತಾಪಿಸಲಿಲ್ಲ."[೫೯] ದತ್ತುಮಗನ ಬಗ್ಗೆ ಚಿಂತಿಸಲಿಲ್ಲ. ಜೀವದ ಆಸೆ ಪೂರ್ಣ ಕೈಬಿಟ್ಟಾಗ ಹಾಗೂ ಹಿತಬಂಧುಗಳ ಆಗ್ರಹ ಹೆಚ್ಚಿ, "ದೊರೆಯು ಸಿಂದೊಳ್ಳಿ ಹಾಗೂ ಮಸ್ತಾನ ಮರಡಿಯಲ್ಲಿನ ಚಿಕ್ಕಮಲ್ಲಶೆಟ್ಟಿಯ ಮಗನನ್ನು ಕರೆತರಲು ಹೇಳಿದನು. ಕೊನೆಗೆ ದೇಸಾಯಿಯು ಶಿವಲಿಂಗಪ್ಪನೆನ್ನುವ ಮಗುವನ್ನು ದತ್ತು ತೆಗೆದುಕೊಳ್ಳಲು ಒಪ್ಪಿದರೂ, ಆರೋಗ್ಯದಲ್ಲಿ ಸ್ವಲ್ಪ ಚೇತರಿಕೆ ಕಂಡೊಡನೆ, ದತ್ತು ಕಾರ್ಯ ಮುಂದೂಡಿದನು. ತನ್ನ ಸಾವಿನ ಕೊನೆಯ ಗಳಿಗೆಯಲ್ಲಿ ದತ್ತು ಸ್ವೀಕಾರಕ್ಕೆ ಒಪ್ಪಿದಂತಿದೆ ಎಂಬುದಾಗಿ ಡಾ.ಎಸ್.ಶೆಟ್ಟರ್ ದಾಖಲಿಸಿದ್ದಾರೆ.

ಕಿತ್ತೂರಿನ ರಾಣಿ ಚೆನ್ನಮ್ಮಾಜಿಯು ಬಹು ಅದ್ದೂರಿಯಿಂದ ದತ್ತು ಸ್ವೀಕರಿಸಿದಳು. "She got ready a grand pendal in the open yard, had it backended with curtains and invited all great and small. The big Thundered and the cannons roored with rare

courage chennavva had her grandson crowned."[೬೦] ರಾಣಿಯು ತನ್ನ ನೆರೆಯ ರಾಜ್ಯಗಳಾದ ಒಕ್ಕುಂದ, ಬೆಲ್ಲೋಡಿ, ಬನ್ನಿಕೊಪ್ಪ, ಸವಣೂರ, ಶಿರಹಟ್ಟಿ, ಬೇಲೂರ, ಶೀಗಿಹಳ್ಳಿ, ನಂದಿಹಳ್ಳಿ ಇತ್ಯಾದಿ ಪ್ರಮುಖರನ್ನು ಅಲ್ಲದೆ "She wrote to the foreigners too. chaplin Sahib"[೬೧] ವಿದೇಶಿಯರನ್ನು ದತ್ತು ಸ್ವೀಕಾರ ಸಮಾರಂಭಕ್ಕೆ ಆಹ್ವಾನಿಸಿದ್ದಳು. ಕಿತ್ತೂರಿನ ರಾಣಿ ಚೆನ್ನಮ್ಮಾಜಿಯ ಏಳ್ಗೆಯನ್ನು ಸಹಿಸದ ಥ್ಯಾಕರೆ ದತ್ತು ಸ್ವೀಕಾರವನ್ನು ತಿರಸ್ಕರಿಸಿದನು. ಈ ದತ್ತು ಸ್ವೀಕಾರಕ್ಕೆ ದೇಸಾಯಿ ಶಿವಲಿಂಗ ರುದ್ರಸರ್ಜನ ಪೂರ್ಣ ಸಮ್ಮತಿ ಇತ್ತೋ, ಇಲ್ಲವೋ ಎಂಬ ಅನುಮಾನ ಥ್ಯಾಕರೆಗೆ ಬಂದಿತು. ಈ ಮೊದಲು ಸಂಧಿಸಿದಾಗ ದತ್ತು ಸ್ವೀಕಾರದ ಬಗ್ಗೆ ದೇಸಾಯಿ ಒಂದೂ ಮಾತು ಆಡಿರಲಿಲ್ಲ. ಅಲ್ಲದೆ ದೇಸಾಯಿಯು ಜುಲೈ ೧೧ರಂದು ಥ್ಯಾಕರೆಗೆ ಬರೆದಿದ್ದನೆನ್ನಲಾಗುವ ಪತ್ರವು ಸೆಪ್ಟೆಂಬರ್ ೧೨ರಂದು ಕೈಸೇರಿತ್ತು. ಈ ಪತ್ರದಲ್ಲಿ ದೇಸಾಯಿಯು ದತ್ತು ಸ್ವೀಕಾರದ ನಿರ್ಧಾರಕ್ಕೆ ಬಂದಿರುವುದಾಗಿ ತಿಳಿಸಲಾಗಿತ್ತು. ದತ್ತು ಸ್ವೀಕಾರಕ್ಕೆ ಬ್ರಿಟಿಷರ ಪೂರ್ವಅನುಮತಿ ತೆಗೆದುಕೊಳ್ಳುವ ಅಗತ್ಯವಿತ್ತು. ಅಲ್ಲದೆ ಆ ಪತ್ರದಲ್ಲಿನ ದೊರೆಯ ಸಹಿ ಅಸ್ಪಷ್ಟವೂ, ಭಿನ್ನವೂ ಆಗಿತ್ತು. ಹೀಗಾಗಿ ಸತ್ಯ ತಿಳಿಯಲು ಸಿವಿಲ್ ಸರ್ಜನ್ ಬೆಲ್‌ನನ್ನು ಕಿತ್ತೂರಿಗೆ ಕಳಿಸಿದಾಗ, ಅವನು ಕಿತ್ತೂರು ತಲುಪುವ ಮುಂಚೆಯೇ ದೇಸಾಯಿ ತೀರಿಕೊಂಡನು. ಹೀಗಾಗಿ ಥ್ಯಾಕರೆ ಕಿತ್ತೂರಿಗೆ ಬಂದು, 'ದತ್ತು ಸ್ವೀಕಾರ' ಕಾನೂನು ಬಾಹಿರವಾದುದೆಂದು"[೬೨] ನಿರ್ಧರಿಸಿದ ಈತ ರಾಜ್ಯದ ಖಜಾನೆಗೆ ಬೀಗಮುದ್ರೆ ಹಾಕಿದನು. ಹೀಗೆ ರಾಣಿ ಚೆನ್ನಮ್ಮಾಜಿಯ ದತ್ತು ಸ್ವೀಕಾರವೇ ಯುದ್ಧಕ್ಕೆ ದಾರಿ ಮಾಡಿಕೊಟ್ಟಿತು.

ಹೀಗೆ ಒಂದು ಸಂಸ್ಥಾನದ ಅರಸಿಗೆ ಮಕ್ಕಳು ಇಲ್ಲದಾಗ, ಆ ಸಂಸ್ಥಾನವನ್ನು ಮುಂದುವರೆಸಲು ಕಂಡುಕೊಂಡ ಪರ್ಯಾಯ ಪರಿಹಾರವೇ 'ದತ್ತು ಸ್ವೀಕಾರ ಪದ್ಧತಿ'.

**ಪಟ್ಟಾಭಿಷೇಕ**

ರಾಜಕುಮಾರನು ಒಂದು ಸಾಮ್ರಾಜ್ಯದ ಅರಸನಾಗಬೇಕಾದರೆ ವಿಧಿಯುಕ್ತವಾಗಿ ಪಟ್ಟಾಭಿಷೇಕ ನಡೆಯುತ್ತಿತ್ತು. "ರಾಜಕುಮಾರನು ಸಿಂಹಾಸನವನ್ನೇರುವ ಉತ್ಸವವನ್ನು 'ಪಟ್ಟಬಂಧ', 'ಪಟ್ಟಬಂಧ ನೋತ್ಸವ', 'ವೀರಪಟ್ಟಬದ್ಧ ಶುಭಾಭಿಷೇಕ ಮಹೋತ್ಸವ', 'ರಾಜ್ಯಾಭಿಷೇಕ'[೬೩] ಎಂದು ಮುಂತಾಗಿ ಕರೆಯುವರು. ಈ ಪಟ್ಟಾಭಿಷೇಕವು ವೈಭವದಿಂದ ಜರುಗುತ್ತಿತ್ತು. ರಾಜಧಾನಿಯಲ್ಲಿ ಪಟ್ಟಾಭಿಷೇಕ ನಡೆಯುವಾಗ ದೇಶಾದ್ಯಂತ ಉತ್ಸವವನ್ನು ಆಚರಿಸುತ್ತಿದ್ದರು. ಸಭಾಗೃಹವು ಸಂಗೀತಗಾರರು, ನೃತ್ಯಗಾರರು, ಮಂತ್ರಿಗಳು, ಕವಿಪುಂಗವರು, ಮಹಾಪಂಡಿತರುಗಳಿಂದ ತುಂಬಿರುತ್ತಿತ್ತು. "ಬಾದಾಮಿ ಹತ್ತಿರದ ಪಟ್ಟದಕಲ್ಲು ಚಾಳುಕ್ಯರ ರಾಜಧಾನಿಯಾಗಿರಲಿಲ್ಲ. ಆದರೂ ಎಲ್ಲ ಚಾಳುಕ್ಯರಸರ ಪಟ್ಟಾಭಿಷೇಕ ಮಹೋತ್ಸವ ಅಲ್ಲಿ ನಡೆಯಿತು. ಈ ಕಾರಣಕ್ಕಾಗಿಯೇ 'ಪಟ್ಟದಕಲ್ಲು' ಎಂಬ

ಹೆಸರು ಬಂದಿತೆಂದು ಪೂರ್ವದಲ್ಲಿ ಇದಕ್ಕೆ 'ರೆಸುವೊಳಲ್' ಎಂಬ ಹೆಸರಿತ್ತೆಂಬುದಾಗಿ"[೬೪] ಡಾ.ಎಂ.ಚಿದಾನಂದಮೂರ್ತಿಯವರು ದಾಖಲಿಸಿದ್ದಾರೆ.

ಕೆಳದಿ ಸಂಸ್ಥಾನದ ಒಂದು ವಿಶೇಷವೆಂದರೆ ಅರಸರಿಗೆ ಪಟ್ಟಾಭಿಷೇಕ ಸಹಜವಾದರೆ, ರಾಣಿಯೊಬ್ಬಳು ವಿಧಿಯುಕ್ತವಾಗಿ ಪಟ್ಟಾಭಿಷೇಕಗೊಂಡ ವಿಷಯ ಗಮನಾರ್ಹವಾದುದು. ಕೆಳದಿ ಸೋಮಶೇಖರ ನಾಯಕನ ಮರಣದ ನಂತರ ರಾಣಿ ಚೆನ್ನಮ್ಮಾಜಿಯೇ ರಾಜತ್ವಕ್ಕೆ ಅರ್ಹಳು ಎಂದು ನಿಶ್ಚಯಿಸಿ "ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೫೯೪ನೆಯ ವಿರೋಧಿಕೃತ್ ಸಂವತ್ಸರದ ಫಾಲ್ಗುಣ ಬಹುಳ ೧೦ರಲ್ಲಿ ಭುವನಗಿರಿದುರ್ಗದ ಅರಮನೆಯಲ್ಲಿ ಚೆನ್ನಮ್ಮಾಜಿಗೆ ರಾಜ್ಯಪಟ್ಟವಾಯ್ತು"[೬೫] ಹೀಗೆ 'ತರುಣೀನಿಕರ ಶಿರೋಮಣಿವರ ಚೆನ್ನಮ್ಮಾಜಿ ಕೆಳದಿಯಿಳೆಗರಸಾದಳ್', ಹೀಗೆ ಕ್ರಿ.ಶ.೧೬೭೨ರಲ್ಲಿ ಕೆಳದಿ ಆಧಿಪತ್ಯವನ್ನು ವಹಿಸಿಕೊಂಡಳು. ಈ ಒಂದು ದಾಖಲೆ ಹೊರತುಪಡಿಸಿದರೆ, ಉಳಿದ ರಾಣಿಯರು ಪಟ್ಟಾಭಿಷೇಕಗೊಂಡಿಲ್ಲ. ಆದರೆ ಪಟ್ಟಾಭಿಷೇಕಕ್ಕಾಗಿ ರಾಜ್ಯದ ವಾರಸುದಾರನಿಗಾಗಿ ಶ್ರಮಿಸಿದ ರಾಣಿಯರೂ ಇದ್ದಾರೆ.

ರಾಜ್ಯಪಟ್ಟಾಭಿಷೇಕ ಭವ್ಯವಾದ ರೀತಿಯಲ್ಲಿ ನಡೆಯುತ್ತಿತ್ತು. ಸ್ವಾದಿ ಸಂಸ್ಥಾನದ ಅರಸನ ಪಟ್ಟಾಭಿಷೇಕ ಸಮಯದಲ್ಲಿ ಜನರು ಒಂದು ತಿಂಗಳವರೆಗೆ ಆನಂದೋತ್ಸವ ನಡೆಸುತ್ತಿದ್ದರು. ಬಿಳಗಿ ಸಂಸ್ಥಾನದಲ್ಲೂ ಇಂಥ ವ್ಯವಸ್ಥೆ ಇದ್ದಿತು. ಕಿತ್ತೂರಿನ ಅರಸಿಯಾದ ರಾಣಿ ಚೆನ್ನಮ್ಮ ತನ್ನ ದತ್ತುಮಗನ ರಾಜ್ಯಪಟ್ಟಾಭಿಷೇಕವನ್ನು ಬಹು ವಿಜೃಂಭಣೆಯಿಂದ ಮಾಡಿದಳು.

ರಾಜ್ಯ ಪಟ್ಟಾಭಿಷೇಕಕ್ಕೆ ಅಂತಃಕಲಹಗಳು ನಡೆಯುತ್ತಿದ್ದವು. ಕೆಳದಿ ಚೆನ್ನಮ್ಮಾಜಿ ಕಾಲದಲ್ಲೂ ಭಾವ, ಮೈದುನರು ರಾಜ್ಯಕ್ಕಾಗಿ ಪ್ರಯತ್ನಿಸಿದ್ದರು. "ಸಿರಸಂಗಿ ಸಂಸ್ಥಾನದ ಲಿಂಗರಾಜರ ಕಾಲಕ್ಕೆ ಅವರ ಮಲತಾಯಿ ಉಮಾಬಾಯಿ ಕುಟಿಲತೆ ನಡೆಸಿ, ಕೋರ್ಟ್ ಮೆಟ್ಟಿಲನ್ನೇರಿದ್ದಳು."[೬೬] ಕಳಲೆ ತಿಮ್ಮರಾಜ ಒಡೆಯರ ಹಿರಿಯಪತ್ನಿ ಮಗನಾದ ಲಕ್ಷ್ಮೀಕಾಂತ ಒಡೆಯರನ್ನು ಪಟ್ಟಕ್ಕೆ ತಂದರು. ತಿಮ್ಮರಾಜನ ಎರಡನೇ ಪತ್ನಿ ಚೆನ್ನಾಜಮ್ಮಣ್ಣಿಯು ತನ್ನ ಮಕ್ಕಳಿಗೆ ರಾಜ್ಯ ಸಿಕ್ಕಲಿಲ್ಲವೆಂಬ ಕಾರಣಕ್ಕಾಗಿಯೇ ಲಕ್ಷ್ಮೀಕಾಂತ ಒಡೆಯರನ್ನು ಕ್ಷತ್ರಿಮದಿಂದ ಕೊಲ್ಲಿಸಿದಳು. ಅಲ್ಲದೇ ಲಕ್ಷ್ಮೀಕಾಂತನ ತಾಯಿ ದೇವಮ್ಮಣ್ಣಿಯರನ್ನು ಗೃಹಬಂಧನದಲ್ಲಿರಿಸಿದಳು.

ಕೊಡಗಿನ ಹಾಲೇರಿ ಮನೆತನದಲ್ಲೂ ಕೂಡ ಯಾವ ರಾಣಿಯೂ ಪಟ್ಟಾಭಿಷೇಕಗೊಂಡ ಉಲ್ಲೇಖವಿಲ್ಲ. ಆದರ ಪಟ್ಟದ ರಾಣಿ, ಪಟ್ಟದ ಸ್ತ್ರೀ, ಪಟ್ಟದ ಮಲ್ಲಮ್ಮ ಎಂಬ ಉಲ್ಲೇಖಗಳು ದೊರೆಯುತ್ತವೆ. ಪಟ್ಟದರಸನ ರಾಣಿಯರು ಇವರಾಗಿರಬಹುದು.

## ೪೨. ಸಾಹಿತ್ಯಿಕ ಅಧ್ಯಯನ

ಕರ್ನಾಟಕ ದೇಶೀಯ ಸಂಸ್ಥಾನಗಳು ಒಂದು ಕಾಲದಲ್ಲಿ ತಮ್ಮದೇ ಆದ ಸಾಹಿತ್ಯ, ಸಂಸ್ಕೃತಿ, ಪರಂಪರೆಯನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವುದು ಸತ್ಯದ ಸಂಗತಿ. ಸಂಸ್ಥಾನದಲ್ಲಿ ಅರಸರು ಕವಿಗಳಾಗಿ, ದಾರ್ಶನಿಕರಾಗಿ, ವಿಪುಲ ಸಾಹಿತ್ಯವನ್ನು ರಚಿಸಿರುವುದು ಕಂಡುಬಂದರೆ, ಸಂಸ್ಥಾನಿಕ ರಾಣಿಯರೂ ಕ್ವಚಿತ್ ಎಂಬಂತೆ ಸ್ವತಃ ಸಾಹಿತ್ಯ ನಿರ್ಮಾಣಕ್ಕೆ ಕೈ ಹಾಕಿರುವುದು ಕಂಡುಬರುತ್ತದೆ. ರಾಣಿಯ ಬಹುಮುಖ್ಯವಾದ ಕೊಡುಗೆಯೆಂದರೆ ಕವಿಗಳಿಗೆ ಆಶ್ರಯದಾತಳಾಗಿ, ಅಪಾರ ಕಾವ್ಯಸೃಷ್ಟಿಗೆ ಪ್ರೇರಣೆಯನ್ನು ಒದಗಿಸಿರುವುದು. ಅತ್ತಿಮಬ್ಬೆ ಸ್ವತಃ ಕೃತಿ ರಚನೆ ಮಾಡದಿದ್ದರೂ, ಪೊನ್ನನನ ಶಾಂತಿನಾಥಪುರಾಣದಂಥ ಧಾರ್ಮಿಕ ಕೃತಿಯೊಂದನ್ನು ಪ್ರತಿ ಮಾಡಿಸಿ ಪ್ರಸಾರ ಮಾಡಿದುದು ವಿಶೇಷವಾಗಿದೆ. ರಾಷ್ಟ್ರದ ಆಗುಹೋಗುಗಳಿಗೆ ರಾಜ ರಾಣಿಯರೇ ಕಾರಣರೆನಿಸುತ್ತಿದ್ದರು. "ಒಂದು ರಾಷ್ಟದ ಸಾಹಿತ್ಯದ ಅಥವಾ ಸಂಸ್ಕೃತಿಯ ಪ್ರಗತಿ-ಪತನಗಳು ಅದನ್ನಾಳುತ್ತಿದ್ದ ಅರಸು ಮನೆತನದ ಪ್ರಗತಿ-ಪತನಗಳನ್ನು ಅವಲಂಬಿಸಿದ್ದವೆಂದು ಹೇಳಿದರೆ ತಪ್ಪಾಗಲಾರದು"[೬೭] ಎಂಬ ಕಲಬುರ್ಗಿಯವರ ಮಾತಿನಂತೆ ಆ ರಾಷ್ಟ್ರವನ್ನಾಳುತ್ತಿದ್ದ ರಾಜ-ರಾಣಿಯರ ಅಭಿರುಚಿಗೆ ತಕ್ಕಂತೆ ಸಾಹಿತ್ಯ ಸೃಷ್ಟಿಯಾಗುತ್ತಿತ್ತು. ರಾಜ-ರಾಣಿಯರ ಆಶ್ರಯದಲ್ಲಿ ಕವಿಗಳ ವಾಣಿಯು ಉದಯಿಸುತ್ತಿತ್ತು. ಕವಿಗಳ ನೈಜವಾದ ಪ್ರತಿಭೆಯು ಜಗತ್ತನ್ನು ಬೆಳಗಬೇಕಾದರೆ ರಾಜ-ರಾಣಿಯರ ಆಶ್ರಯವು ಅನಿವಾರ್ಯವಾಗಿದ್ದಿತು. ಆ ಸ್ಥಾನವೇ ಉತ್ತಮ ಸಾಹಿತ್ಯಸೃಷ್ಟಿಗೆ ಮೂಲ ಪ್ರೇರಣೆ ಒದಗಿಸಿದ್ದನ್ನು ಮರೆಯುವಂತಿಲ್ಲ.

'ವಿನಾಶ್ರಯಂ ನ ಶೋಭಂತೇ ಪಂಡಿತಾ ವನಿತಾ ಲತಾ' ಎಂಬಂತೆ ಪಂಪ, ಪೊನ್ನ, ರನ್ನನಂಥ ಮಹಾಕವಿಗಳು ರಾಜಾಶ್ರಯದಲ್ಲೆ ಬೆಳಕು ಕಂಡವರು. ಕೆಳದಿ ಬಸವರಾಜನ ಆಸ್ಥಾನ ಕವಿ ಮೌನಪ್ಪನು ರಾಜಕೀಯ ಮುತ್ಸದ್ದಿಯಾಗಿದ್ದನು. "ಮೌನಪ್ಪ ಪಂಡಿತನು ರಾಣಿ ಚೆನ್ನಮ್ಮಾಜಿಯ ಕಾಲದಲ್ಲಿ ಬದುಕು ಮಾಡಿಕೊಂಡು ಬಂದಿರುವನು"[೬೮] ಎಂಬ ಮಾಹಿತಿಯನ್ನು ಸಾ.ಶಿ.ಮರುಳಯ್ಯನವರು ದಾಖಲಿಸಿದ್ದಾರೆ. ಬಹುಶಃ ಮೌನಪ್ಪ ಪಂಡಿತನಿಗೆ ಚೆನ್ನಮ್ಮಾಜಿಯೂ ಆಶ್ರಯ ನೀಡಿರಬಹುದು. ಒಟ್ಟಾರೆ ಸಂಸ್ಥಾನಿಕ ರಾಣಿಯರ ಸಾಹಿತ್ಯಿಕ ಕೃಷಿಯನ್ನು ಎರಡು ವಿಭಾಗಗಳಲ್ಲಿ ಅಧ್ಯಯನಕ್ಕೆ ಒಳಪಡಿಸಬಹುದು.

೧. ರಾಣಿಯರ ಸಾಹಿತ್ಯ

೨. ರಾಣಿಯರ ಕುರಿತ ಸಾಹಿತ್ಯ

**೧. ರಾಣಿಯರ ಸಾಹಿತ್ಯ:** ಒಂದು ಸಂಸ್ಥಾನದ ರಾಣಿಯಾಗಿದ್ದು, ಸಾಹಿತ್ಯ ಕೃತಿ ರಚನೆಗೊಂಡಿರುವುದು ಅತ್ಯಂತ ವಿರಳವೇ ಎನ್ನಬಹುದು. ಇದಕ್ಕೆ ಅಪವಾದವೆನ್ನುವಂತೆ ಬೆರಳೆಣಿಕೆಯಷ್ಟು ರಾಣಿಯರು

ಸಾಹಿತ್ಯಕ ರಚನೆ ಮಾಡಿರುವುದು ಗಮನಾರ್ಹವಾದುದು. ಜೇಡರದಾಸಿಮಯ್ಯನಿಂದ ಆರಂಭಗೊಂಡ ವಚನ ಚಳವಳಿಯು ಸಾರ್ವತ್ರಿಕ ರೂಪವನ್ನು ಪಡೆದಿದೆ. ದಾಸಿಮಾರ್ಯನ ತತ್ವಸಿದ್ಧಾಂತಗಳಿಂದ ಪ್ರಭಾವಿತಳಾದ ಸುಗ್ಗಲೆ ಅಪಾರ ಜ್ಞಾನಸಂಪತ್ತನ್ನು ಹೊಂದಿ, ಹಲವು ವಚನಗಳನ್ನು ರಚಿಸಿರುವಳು.

ಬೆಳವಡಿ ರಾಣಿ ಮಲ್ಲಮ್ಮಾಜಿಯು ಮೇಧಾವಿಯಾಗಿದ್ದು, 'ಕನ್ನಡ ಮತ್ತು ಸಂಸ್ಕೃತ' ಎರಡು ಭಾಷೆಯಲ್ಲೂ ಕವಿತೆ ರಚಿಸುವ ಶಕ್ತಿಯನ್ನು ಹೊಂದಿದ್ದಳೆಂಬ ಅಂಶ ಹಲವು ಮೂಲಗಳಿಂದ ತಿಳಿದುಬರುತ್ತದೆ. ಇವು ದೊರೆತಿಲ್ಲ.

ಕಳಲೆ ಮನೆತನದ ಹೆಣ್ಣುಮಗಳಾದ ಚೆಲುವಾಂಬೆಯು ಸ್ವತಃ ಕವಯಿತ್ರಿಯಾಗಿದ್ದಳು. ಕನ್ನಡ ಸಾಹಿತ್ಯಲೋಕಕ್ಕೆ 'ವರನಂದಿ ಕಲ್ಯಾಣ', 'ವೆಂಕಟಗಿರಿ ಮಹಾತ್ಮ್ಯ ಲಾಲಿಪದ, 'ಅಲಮೇಲು ಮಂಗೆ ಲಾಲಿಪದ', 'ಮಂಗಳಾರತಿ', 'ತಲಕಾವೇರಿ ಮಹಾತ್ಮ್ಯೆ'ಯಂಥ ಅಮೂಲ್ಯ ಕೃತಿಗಳನ್ನು ನೀಡಿದ್ದಾಳೆ. ಕಳಲೆ ಮನೆತನದ ಏಕೈಕ ಸ್ತ್ರೀ ಬರಹಗಾರ್ತಿ ಎಂಬ ಹೆಗ್ಗಳಿಕೆ ಈಕೆಯದು. ಅಲ್ಲದೆ ಸಾಂಗತ್ಯ, ಚೌಪದ, ಸೋಬಾನೆ ಪದಗಳನ್ನು ಸೃಜಿಸಬಲ್ಲ ಶಕ್ತಿ ಈಕೆಗಿತ್ತು. ಚೆಲುವಾಂಬೆ ರಚಿಸಿದವೆಲ್ಲವೂ ಪದ್ಯಕೃತಿಗಳೇ. ಆದರೆ 'ತಲಕಾವೇರಿ ಮಹಾತ್ಮ್ಯೆ' ಮಾತ್ರ ಪದ್ಯವಲ್ಲ. 'ವರನಂದಿ ಕಲ್ಯಾಣವೇ' ದೊಡ್ಡದು. ಇದರಲ್ಲಿ ೭ ಸಂಧಿ, ೮೮೧ ಪದ್ಯಗಳಿವೆ. 'ವೆಂಕಟಾಚಲ ಮಹಾತ್ಮ್ಯೆ' ಲಾಲಿಪದ ೨೦೩ ಚೌಪದಿಗಳನ್ನು ಹೊಂದಿದೆ. ಅಮ್ಮನವರ ಮೇಲಿನ ಲಾಲಿಪದವು ೩೫ ಚೌಪದಿಯನ್ನು ಒಳಗೊಂಡಿದೆ. ಚೆಲುವ ನಾರಾಯಣನ ಕಥೆಯನ್ನು ಮಂಗಳಾರತಿ ಪದ್ಯಗಳಲ್ಲಿ ಹೇಳಿರುವ ೫ ಪದ್ಯಗಳ ಮಂಗಳಾರತಿ ಪದವೇ ಚಿಕ್ಕ ಕೃತಿ. ಹೀಗೆ ಚೆಲುವಾಂಬೆಯು ಸಾಂಗತ್ಯ, ಚೌಪದ, ಸೋಬಾನೆ ಪದಗಳನ್ನು ಸೃಜಿಸಬಲ್ಲ ಸಾಮರ್ಥ್ಯವುಳ್ಳ ಲೇಖಕಿ. ಬಿಡಿ ಬಿಡಿಯಾದ ಕನ್ನಡಪದ, ಸರಳವಾದ ಶೈಲಿ, ಅರ್ಥವ್ಯಾಪ್ತಿಯಿರುವ ನಿರೂಪಣೆ ಈಕೆಯ ಕೃತಿಗಳ ಗುಣಗಳು. ಹೀಗೆ ಗುಣಾತ್ಮಕವಾದ ಕೃತಿಗಳನ್ನು ಕೊಟ್ಟ ಚೆಲುವಾಂಬೆ ಅವಿಸ್ಮರಣೀಯಳು.

ಕಳಲೆ ವಂಶಕ್ಕೆ ಸೇರಿದ ನರಸೇ ಅರಸರ ಮಗಳಾದ ಕೆಂಪನಂಜಮ್ಮಣ್ಣಿ ಮೈಸೂರಿನ ೧೦ನೇ ಚಾಮರಾಜ ಒಡೆಯನ ಪತ್ನಿ ೧೨ನೇ ವಯಸ್ಸಿನಲ್ಲಿ ವಿವಾಹವಾದ ಈಕೆ ಕನ್ನಡ, ಸಂಸ್ಕೃತ, ಇಂಗ್ಲಿಷ್ ಶಿಕ್ಷಣ ಪಡೆದಿದ್ದು, ವಿವಾಹದ ನಂತರ ಈಕೆ ಹೆಸರನ್ನು 'ವಾಣಿವಿಲಾಸ ಸನ್ನಿಧಾನ' ಎಂದು ಬದಲಾಯಿಸಿದ್ದರು. ಹೀಗೆ ವಿವಾಹ ನಂತರ ಹೆಸರು ಬದಲಾವಣೆಯನ್ನು ಇಂದಿಗೂ ಕಾಣುತ್ತೇವೆ.

ಹಾಗಲವಾಡಿಯ ಸಿದ್ಧರಾಮಪ್ಪ ನಾಯಕನು 'ಮಹಾನುಭವ ಪ್ರಕಾಶಿಕೆ' ಎಂಬ ಕೃತಿಯನ್ನು ರಚಿಸಿದನು. "ಹಾಗಲವಾಡಿಯ ಮುದಿಯಪ್ಪ ನಾಯಕರ ಮಗಳು ರಚಿಸಿರುವ ಗುರುಹುಚ್ಚಾರ್ಯ'

ಎಂಬ ಅಂಕಿತದ ಸ್ವರವಚನವೊಂದು ದೊರೆತಿದ್ದು, ಅದು ಪ್ರಕಟಗೊಂಡಿದೆ."[೧೯] ಈ ಸ್ವರ ವಚನವು ಪಲ್ಲವಿ, ಅನುಪಲ್ಲವಿಗಳನ್ನು ಒಳಗೊಂಡಿದ್ದು ೭ ನುಡಿಗಳನ್ನು ಹೊಂದಿದೆ.

ಮಧುಗಿರಿಯ ತಿಮ್ಮಾಂಬೆಯ ಕಾಲ ಸು.೧೭೦೦. ಕನ್ನಡ ಸಾಹಿತ್ಯ ಪ್ರಕಾರದಲ್ಲಿ ಒಂದಾದ ತಾರಾವಳಿ ಸಾಹಿತ್ಯವನ್ನು ಕುರಿತ ಕವಿಗಳು ವಿಪುಲ ಸಂಖ್ಯೆಯಲ್ಲಿ ರಚಿಸಿದ್ದರೂ, ಸ್ತ್ರೀಯೊಬ್ಬಳು ರಚಿಸಿರುವುದು ಇವತ್ತಿನವರೆಗೂ ಗಮನಕ್ಕೆ ಬಂದಿರಲಿಲ್ಲ. ಮಧುಗಿರಿಯ ತಿಮ್ಮಾಂಬೆಯು ತಾರಾವಳಿ ಸಾಹಿತ್ಯ ಪ್ರಕಾರದಲ್ಲಿ 'ಮಧುಗಿರಿ ಮಲ್ಲೇಶ್ವರ ಬಿಲ್ವ ವೃಕ್ಷೋತ್ಸವ ತಾರಾವಳಿ'ಯನ್ನು ರಚಿಸಿ, ತಾರಾವಳಿ ಸಾಹಿತ್ಯ ಪ್ರಕಾರದ ಏಕೈಕ ರಚನಾಕಾರ್ತಿ ಎಂಬ ಹೆಗ್ಗಳಿಕೆಗೆ ಪಾತ್ರಳು. ಈ ಕೃತಿಯು ವೀರಣ್ಣ ರಾಜೂ ಅವರು ಸಂಪಾದಿಸಿದ 'ತಾರಾವಳಿ ಸಂಪುಟ'ದಲ್ಲಿ ಪ್ರಕಟಗೊಂಡಿದೆ.

ಕ್ರಿ.ಶ.೧೬೦೭ "ಪ್ಲವ ಸಂವತ್ಸರ ಮಾಘ ಶು.೧೫ ಚಿಗನಾಯಕನಹಳ್ಳಿ ಲಿಂಗಪ್ಪನು ಮಹಾರಾಜೇ ಶ್ರೀ ಚೆನ್ನಾಜಮ್ಮನವರಿಗೆ 'ಪಾರಮಾರ್ಥಿಕದ ಪುಸ್ತಕ' ಬರೆದು ಒಪ್ಪಿಸಿದಂಥಾ ಮುಹೂರ್ತದಲ್ಲಿ ನಮ್ಮಂಥಾ ನಂಬಿದವರ ಸಾರೋದ್ಧಾರವಾಗಿ ರಕ್ಷಣ್ಯವ ಮಾಡಿದಂಥಾ ಅಷ್ಟಪುತ್ರರು ಉಂಟಾಗಿ ಧನಕನಕ ವಸ್ತುವಾಹನ ಐಶ್ವರ್ಯಾಭಿವೃದ್ಧಿ ಆಗಲಿಯೆಂದು ಹರಸಿ ಬರೆದುಕೊಟ್ಟ ಪಾರಮಾರ್ಥಿಕದ ಪುಸ್ತಕಕ್ಕೆ ಸದಾ ಜಯಮಂಗಳ ಮಹಾಶ್ರೀ. ಕ್ರಿ.ಶ.೧೬೦೭ರಲ್ಲಿ ಬರೆದಿರುವ ಪಾರಮಾರ್ಥಿಕದ ಪುಸ್ತಕದ ಪುಷ್ಪಿಕೆಯಿಂದ ಆ ಕೃತಿ ಮಹಾರಾಜ್ಞೇ ಶ್ರೀ ಚೆನ್ನಮ್ಮಾಜಿಯವರಿಗೆ ಬರೆದು ಒಪ್ಪಿಸಿದಂತೆ ತಿಳಿದುಬರುತ್ತದೆ. ಇದರಲ್ಲಿ ೭೭ ಪದ್ಧತಿಗಳಿದ್ದು ೯೩೭ ತ್ರಿಪದಿಗಳಿವೆ."[೨೦]

ಕೊಡಗಿನ ಹಾಲೇರಿ ಮನೆತನದಲ್ಲಿ ಹಲವರು ರಾಣಿಯರು ರಾಜಕೀಯದಲ್ಲಿ ನೇರವಾಗಿ ಭಾಗಿಯಾಗದೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ತಮ್ಮ ಛಾಪನ್ನು ಮೂಡಿಸಿರುವುದನ್ನು ಕಾಣುತ್ತೇವೆ. ಚಿಕ್ಕವೀರ ರಾಜೇಂದ್ರನ ನೆಚ್ಚಿನ ಮಗಳಾದ ಗೌರಮ್ಮನ ವಿದ್ಯಾಭ್ಯಾಸಕ್ಕಾಗಿ ಚಿಂತನೆ ಮಾಡಿದ ಚಿಕ್ಕವೀರರಾಜೇಂದ್ರನು ತನ್ನ ಮಗಳು ಲಂಡನ್ನಿನಲ್ಲಿರುವ ವಿಕ್ಟೋರಿಯಾ ರಾಣಿಯ ಆಶ್ರಯದಲ್ಲಿ ಮತ್ತು ಮತಾಂತರ ಹೊಂದಿ, ಕ್ರಿಶ್ಚಿಯನ್ನಳಾಗಿ ಬಾಳಬೇಕೆಂದು ಬಯಸಿದಕ್ಕೆ ಬಹುಶಃ ಕ್ರೈಸ್ತಧರ್ಮದ ಉದಾರತೆ ಕಾರಣವಾಗಿರಬಹುದು. ಹೀಗೆ ಕ್ರೈಸ್ತ ನೀತಿಗನುಸಾರವಾಗಿ ಬೆಳೆಯುತ್ತಿರುವ ಗೌರಮ್ಮನಿಗೆ ಇಂಗ್ಲೆಂಡಿನ ಸಮಾಜ ಪದ್ಧತಿ, ನೀತಿ ನಿಯಮಗಳನ್ನು ಅನುಸರಿಸುವುದು ಕಷ್ಟವಾಯಿತು. ಭಿನ್ನ ಸಂಸ್ಕೃತಿಗೆ ಹೊಂದಿಕೊಳ್ಳಲು ಆಗಲಿಲ್ಲ. ಗೌರಮ್ಮ ವಿದ್ಯಾಭ್ಯಾಸಕ್ಕಾಗಿ ಹಲವಾರು ಕ್ರಮಗಳನ್ನು, ಶ್ರೀಮತಿ ಡ್ರುಮಂಡ ಅನುಸರಿಸಿದಳು. ಮತ್ತೆ ಲೇಡಿ ಕ್ಯಾಥರಿನ್ ಹಾರ್‌ಕೋಟ್ ಎಂಬ ಹೊಸ ಶಿಕ್ಷಕಿಯನ್ನು ನೇಮಿಸಲಾಯ್ತು. ಗೌರಮ್ಮನ ಅಂತಿಮ ಪರೀಕ್ಷಾ ಸಮಾರಂಭ ಇಂಗ್ಲೆಂಡಿನ ಕ್ಯೂ ಚರ್ಚಿನಲ್ಲಿ ನಡೆಯಿತು. ಹೀಗೆ ರಾಣಿಯ ವಿದ್ಯಾಭ್ಯಾಸಕ್ಕಾಗಿ

ಏನೆಲ್ಲ ತೊಂದರೆಗಳನ್ನು ಅನುಭವಿಸಲು ಚಿಕ್ಕವೀರರಾಜೇಂದ್ರ ಸಿದ್ಧನಿದ್ದನೆಂಬುದನ್ನು ತಿಳಿಯಬಹುದು. ಇದು ಇತಿಹಾಸದಲ್ಲೆ ವಿಶಿಷ್ಟ ಸಂಗತಿಯಾಗಿದೆ.

ಕಿತ್ತೂರ ರಾಣಿ ಚೆನ್ನಮ್ಮ ಹಲವು ಭಾಷೆ ಬಲ್ಲವಳಾಗಿದ್ದು, ಸಕಲ ಶಾಸ್ತ್ರ ಪುರಾಣಗಳನ್ನು ಓದುವಂಥವಳಾಗಿದ್ದಳೆಂಬುದನ್ನು ಶ್ರೀ ಶ್ರೀಧರ ತೇಲ್ಕರರು "Along with kannada she learnt urdu & Marathi and Read a number of books in all these languages, she studied Basavapurana, Ramayana, Mahabharat and took a keen intrest in contemprary history. she practiced yoga as revealed in veershaiva philosophy shatstala, learnt horse riding fencing, swimming and spear throwing. she was a good shikari and snjoyed putting a male customes"[೭೧] ಎನ್ನುತ್ತಾರೆ. ಇದರಿಂದ ಚೆನ್ನವ್ವ ಕನ್ನಡ, ಉರ್ದು, ಮರಾಠಿ ಭಾಷೆ ಬಲ್ಲವಳಾಗಿದ್ದು, ಹಲವಾರು ಬಸವಪುರಾಣ, ಮಹಾಭಾರತ, ರಾಮಾಯಣದಂಥ ಅಮೂಲ್ಯ ಗ್ರಂಥ ಓದುತ್ತಿದ್ದಳಲ್ಲದೆ ಯೋಗಾಭ್ಯಾಸ ಮಾಡುತ್ತಿದ್ದಳು. ವೀರಶೈವ ತತ್ವಕ್ಕನುಸಾರವಾಗಿ ಷಟ್ಸ್ಥಲವನ್ನು ಅಭ್ಯಾಸ ಮಾಡುವುದರ ಜೊತೆಗೆ ಕುದುರೆ ಸವಾರಿ, ಈಜು, ಭಲ್ಲೆ ಎಸೆತವನ್ನೆಲ್ಲ ಮಾಡುತ್ತಿದ್ದು. ಒಬ್ಬ ಒಳ್ಳೆ ಶಿಕಾರಿಯಾಗಿದ್ದಳು.

ಕಿತ್ತೂರಿನ ಮತ್ತೊಬ್ಬ ಸಮರ್ಥ ರಾಣಿ ರುದ್ರಮ್ಮ 'ರಸಪಾಕ ವಿಧಾನ' ಎಂಬ ಕೃತಿಯನ್ನು ಬರೆದಳು. ಹೀಗಾಗಿ ಈಕೆಯನ್ನು ಜನಪದರು ಅನ್ನಪೂರ್ಣದೇವಿ, ಅನ್ನಪೂರ್ಣಮ್ಮ ಎನ್ನುತ್ತಿದ್ದರು.

ಗೆಜ್ಜಲಗಟ್ಟೆ ರಾಣಿ ಲಕ್ಷ್ಮೀದೇವಿಯು ವಿದ್ಯಾವಂತೆಯಾಗಿದ್ದು, ಸಂಸ್ಥಾನದ ಪತ್ರವ್ಯವಹಾರಗಳನ್ನು ತಾನೇ ಮಾಡುತ್ತಿದ್ದಳು. ಸಂಸ್ಕೃತ ಮತ್ತು ಕನ್ನಡ ಭಾಷೆ, ಸಂಸ್ಕೃತಿಗಳನ್ನು ಪೋಷಿಸಿ, ಸಂರಕ್ಷಿಸುವ ಸಲುವಾಗಿ ಪಾಠಶಾಲೆ ಪ್ರಾರಂಭಿಸಿದಳು. ಈ ಪಾಠಶಾಲೆಯಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷೆಗೆ ಸಂಬಂಧಿಸಿದ ಸಾವಿರಾರು ಅಮೂಲ್ಯ ಗ್ರಂಥಗಳನ್ನು, ವೇದ-ಶಾಸ್ತ್ರ, ಪುರಾಣ, ಜೋತಿಷ್ಯ-ವ್ಯಾಕರಣಗಳು, ಕಾವ್ಯ, ನಾಟಕಗಳು, ದರ್ಮ, ಸಿದ್ಧಾಂತ ಗ್ರಂಥಗಳು, ತಾಡೆಯೋಲೆ, ಕಡತ, ಹಸ್ತಪ್ರತಿ ಸಂಗ್ರಹಿಸಲಾಯ್ತು. ಅಲ್ಲದೆ ವ್ಯಾಕರಣ, ವೇದಾಂತಗಳನ್ನು ಪಾಠಶಾಲೆಯಲ್ಲಿ ಬೋಧಿಸುತ್ತಿದ್ದರು. ಹುಬ್ಬಳ್ಳಿಯ ಸಿದ್ಧಾರೂಢ ಮಠದ ಶಿವಪುತ್ರಪ್ಪನವರು ಹಾಗೂ ಅವರ ಸಮಕಾಲೀನ ಸ್ವಾಮಿಗಳು ವಿದ್ಯಾರ್ಥಿಗಳಾಗಿ ವ್ಯಾಸಂಗ ಮಾಡಿದ ಘನತೆ ಈ ಪಾಠಶಾಲೆಗಿದೆ. ಸಂಸ್ಕೃತ ಪಂಡಿತರಾದ ಕಂದಗಲ್ ಪರ್ವತಶಾಸ್ತ್ರಿಗಳಿಂದ ಸಂಸ್ಕೃತ ಪಾಠಶಾಲೆ ಅಭಿವೃದ್ಧಿ ಹೊಂದಿತು. ಶಿವಯೋಗ ಮಂದಿರಕ್ಕಿಂತ ಪೂರ್ವದಲ್ಲಿಯ ಪಾಠಶಾಲೆ ಇದಾಗಿದ್ದು, ಪ್ರಾಚೀನ ಸಾಹಿತ್ಯ ನಿಧಿಯ ಸಂರಕ್ಷಣೆ ಕಾರ್ಯ ಮಾಡಿದೆ.

ಜವಳಗೆರೆಯ ರಾಣಿ ಉಮನಾಬಾಯಿಯೂ ಕೂಡ ಕನ್ನಡ ಸಾಹಿತ್ಯ ರಕ್ಷಣೆಯಲ್ಲಿ ಶ್ರಮ ವಹಿಸಿದಳು. ಕನ್ನಡ, ಉರ್ದು, ತೆಲುಗು ಭಾಷೆಗಳ ಜ್ಞಾನವಿದ್ದು, ಅವುಗಳಲ್ಲಿ ವ್ಯವಹರಿಸುತ್ತಿದ್ದಳು.

ಅದರಂತೆ ಮಾನ್ವಿ ರಾಣಿ ಜಡೆಯಮ್ಮ ಕೂಡ ಕನ್ನಡ ಭಾಷೆ, ಸಂಸ್ಕೃತಿ, ಸಾಹಿತ್ಯಗಳ ಅಭಿವೃದ್ಧಿಗೆ ಶ್ರಮಿಸಿದ್ದಾಳೆ.

೨. **ರಾಣಿಯರ ಕುರಿತ ಸಾಹಿತ್ಯ:** ರಾಣಿಯರು ಹಲವು ಕವಿಗಳಿಗೆ ಆಶ್ರಯದಾತರಾಗಿದ್ದರು. ಹಲವರು ಕವಿಗಳು ರಾಣಿಯರ ಕುರಿತು ಕೃತಿ ರಚಿಸಿರುವುದನ್ನು ಗಮನಿಸಬಹುದು. ಕೆಳದಿ ರಾಣಿ ವೀರಮ್ಮಾಜಿಯ ಆಶ್ರಯದಲ್ಲಿದ್ದ 'ಲಿಂಗಣ್ಣ ಕವಿ' 'ಕೆಳದಿ ನೃಪವಿಜಯ' ಎಂಬ ಚಂಪೂ ಪ್ರಕಾರದ ಐತಿಹಾಸಿಕ ಕಾವ್ಯವನ್ನು ರಚಿಸಿದ್ದಾನೆ. ಈ ಕೃತಿಯು ಕೆಳದಿ ಅರಸೊತ್ತಿಗೆಯ ಇಡಿಯಾದ ಚಿತ್ರಣವನ್ನು ಒದಗಿಸುತ್ತದೆ. ಅಪ್ರಸಿದ್ಧ ರಾಣಿಯರ ವಿವರಗಳಲ್ಲದೆ ಪ್ರಸಿದ್ಧರಾಣಿ ಚೆನ್ನಮ್ಮಾಜಿ ಮತ್ತು ವೀರಮ್ಮಾಜಿಯರ ಬಗೆಗಿನ ಐತಿಹಾಸಿಕ ಸಂಗತಿಗಳನ್ನು ಈ ಕೃತಿಯು ಅಭಿವ್ಯಕ್ತಪಡಿಸುತ್ತದೆ. ಕೆಳದಿ ರಾಣಿ ಚೆನ್ನಮ್ಮಾಜಿಯು

> "ಉನ್ನತ ಶುಭ ಗುಣಗಣಸಂ
> ಪನ್ನತೆಯಿಂ ಕ್ಷಾತ್ರದಾನ ಧರ್ಮಾದಿಂಗಳಿಂ
> ಚೆನ್ನಮ್ಮಾಜಿಗೆ ಸರಿಯಹ
> ಮನ್ನೆಯರಿಲ್ಲೆನಿಸಿ ರಾಜ್ಯಮಂ ರಕ್ಷಿಸಿದಳ್"[೨]

ಎಂಬ ವಿಷಯವನ್ನು ತಿಳಿಸುತ್ತದೆ. ಅಲ್ಲದೆ ಭುವನಗಿರಿ ದುರ್ಗದಲ್ಲಿ ರಾಜ್ಯ ಪಟ್ಟವಾದ ವಿಷಯವನ್ನು ತಿಳಿಸುತ್ತದೆ.

ಕೆಳದಿ ಚೆನ್ನಮ್ಮಾಜಿಯ ದತ್ತುಮಗನಾದ ಬಸಪ್ಪನಾಯಕ ರಚಿಸಿದ 'ಶಿವತತ್ವರತ್ನಾಕರ' ಕೃತಿ ಚಾರಿತ್ರಿಕವಾಗಿ ಮಹತ್ವದ ಕೃತಿ. ಇದರಲ್ಲಿ ವಿಶ್ವೋತ್ಪತ್ತಿ ಶಾಸ್ತ್ರದಿಂದ ಪಾಕಶಾಸ್ತ್ರದವರೆಗೆ ಎಲ್ಲ ಜ್ಞಾನ ಸಂಚಯದ ವಿವಿಧ ಶಾಖೆಗಳನ್ನು ವಿವರಿಸಿದ್ದಾನೆ. ವೀರಶೈವ ಧರ್ಮ ಮತ್ತು ದರ್ಶನಗಳ ವಿವರಣೆಯನ್ನು ಇಲ್ಲಿ ನೀಡಿದ್ದಾರೆ. ರಾಣಿ 'ಚೆನ್ನಮ್ಮಾಜಿ' ಒಬ್ಬ ರಾಜನೀತಿ ಪ್ರವೀಣಳಾಗಿದ್ದು, ಒಬ್ಬ ರಾಜನಿಗಿರಬೇಕಾದ ಅರ್ಹತೆಗಳೇನು? ರಾಜನ ಕರ್ತವ್ಯಗಳೇನು? ಎಂಬ ವಿಚಾರಗಳೆಲ್ಲವನ್ನು ಈ ಕೃತಿ ಒಳಗೊಂಡಿದೆ.

'ಕವಿ ಪರಮೇಶ್ವರಿ'ಯೆಂದೇ ಪ್ರಖ್ಯಾತಳಾದ ಗಂಗಾದೇವಿ ರಚಿಸಿದ 'ಕೆಳದಿ ರಾಜ್ಯಾಭ್ಯುದಯಂ' ಕೃತಿಯು ಕೆಳದಿ ರಾಣಿಯರ ಚಾರಿತ್ರಿಕ ಅಂಶಗಳನ್ನು ಬಿಚ್ಚಿಡುತ್ತದೆ. ಈ ಕೃತಿಯ ಮೊದಲನೇ ಸೋಪಾನದಲ್ಲಿ ಕೆಳದಿ ಅರಸ ಬಸವರಾಜೇಂದ್ರ ಹಾಗೂ ಅವರ ಪತ್ನಿಯಾದ ಚೆನ್ನಮ್ಮಾಜಿಯರ ವಿವರಗಳನ್ನು ಒದಗಿಸುತ್ತದೆ.

ಸೋದೆ ಮರಿಶಾಂತ ಬಸವದೇವರು ರಚಿಸಿದ 'ಸ್ವರವಚನಗಳಲ್ಲಿ' ಬಸವಲಿಂಗರಾಜನ ತಂದೆ ಸದಾಶಿವರಾಯ ಮತ್ತು ಅವನ ತಾಯಿ ಶಾಂತಮ್ಮಾಜಿಯ ಬಗ್ಗೆ ವಿವರಗಳಿವೆ.

'ಸೋದೆ ಸದಾಶಿವರಾಯನ ಕೃತಿಗಳು' ಎಂಬ ಕೃತಿಯು ಸದಾಶಿವರಾಯನಿಂದ ರಚಿಸಲ್ಪಟ್ಟಿದೆ. ಇದರಲ್ಲಿ ಸೋದೆ ಅರಸನಾದ ಅರಸಪ್ಪನಾಯಕನ ನವರಾಣಿಯರಾದ ರುಮಾಯಿ, ಸಾತಾಯಿ, ಸಾತಕ್ಕ, ನಾಗಕ್ಕ, ಲಕುಮಾಯಿ, ಮಸಣಾಯಿ, ಕಾತ್ಯಾಯಿ ಇತ್ಯಾದಿ ಒಂಬತ್ತು ಜನ ರಾಣಿಯರು ಸಹಗಮನ ಹೊಂದಿದ ಸಂಗತಿಯನ್ನು ತಿಳಿಸುತ್ತದೆ. ಅಲ್ಲದೆ ಬೆಳವಡಿ ಮಲ್ಲಮ್ಮನ ಬಗೆಗೂ ವಿವರಣೆ ಒದಗಿಸುತ್ತದೆ.

ದೇವಚಂದ್ರನು ರಚಿಸಿದ 'ರಾಜಾವಳಿ ಕಥಾಸಾರ' ಕಳಲೆ ರಾಣಿ ಚೆಲುವಾಜಮ್ಮಣ್ಣಿ, ದೇವಾಜಮ್ಮಣ್ಣಿ, ಕಾಂತಮ್ಮಣ್ಣಿ, ನಂಜಮ್ಮಣ್ಣಿ, ದೇವೀರಮ್ಮಣ್ಣಿ, ಕೆಂಪಮ್ಮಣ್ಣಿಯರ ವಿವರಗಳನ್ನು ಒದಗಿಸುತ್ತದೆ.

ತಿರುಮಲಾರ್ಯ ರಚಿಸಿದ 'ಚಿಕ್ಕದೇವರಾಜ ವಿಜಯ' ಮತ್ತು ಚಿಕ್ಕದೇವರಾಯ ವಂಶಾವಳಿ ಕೃತಿಗಳು ತಿರುಮಲನ ರಾಣಿಯರಾದ 'ಅಲಮೇಲಮ್ಮ' ಮತ್ತು 'ರಂಗಮ್ಮ' ರಾಣಿಯರ ವಿವರವನ್ನು ಹಾಗೂ ರಾಣಿ ಅಮೃತಾಂಬೆಯ ವಿವರವನ್ನು ಒದಗಿಸುತ್ತವೆ.

'ಕಿತ್ತೂರು ಸಂಸ್ಥಾನ ಸಾಹಿತ್ಯ ಭಾಗ-೧ ಮತ್ತು ಭಾಗ-೨' ಕೃತಿಗಳು ಡಾ.ಎಂ.ಎಂ.ಕಲಬುರ್ಗಿ, ಡಾ.ಚೆನ್ನಕ್ಕ ಪಾವಟೆ ಹಾಗೂ ೨ನೇ ಭಾಗವನ್ನು ಡಾ.ಎಂ.ಎಂ.ಕಲಬುರ್ಗಿ, ಡಾ.ಚೆನ್ನಕ್ಕ ಪಾವಟೆ ಮತ್ತು ಅನ್ನಪೂರ್ಣ ಹತ್ತಿಮತ್ತೂರರು ಸಂಪಾದಿಸಿದ್ದಾರೆ. ಕಿತ್ತೂರ ಸಂಸ್ಥಾನದ ಚಾರಿತ್ರಿಕ ಅಧ್ಯಯನಕ್ಕೆ ಈ ಕೃತಿಗಳು ಪ್ರಮುಖ ಆಕರಗಳಾಗುತ್ತವೆ. 'ಕಿತ್ತೂರ ಸಂಸ್ಥಾನ ಸಾಹಿತ್ಯ ಭಾಗ-೧ ಕೃತಿಯಲ್ಲಿ ಎರಡು ಭಾಗಗಳಿವೆ. ೧. ಶಿಷ್ಟ ರಚನೆ ೨. ಜನಪದ ರಚನೆ.

**೧. ಶಿಷ್ಟರಚನೆ**

'ಮಲ್ಲೇಂದ್ರ ಭಕ್ತಿ ತರಂಗಿಣಿ' ಕೃತಿಯನ್ನು ಮುನವಳ್ಳಿ ನೀಲಕಂಠಾರ್ಯರು ಬರೆದಿದ್ದಾರೆ. ಈ ಕೃತಿಯು ವೀರಭದ್ರ ಬಹದ್ದೂರ್ ದೇಸಾಯಿಯವರ ಪುತ್ರ ಮಲ್ಲಸರ್ಜ ಹಾಗೂ ಅವನ ರಾಣಿ ರುದ್ರಾಂಬೆ ವಿವರವನ್ನು ಒದಗಿಸುತ್ತದೆ. ರುದ್ರಾಂಬೆಯನ್ನು 'ಚಿಚ್ಛಕ್ತಿಯವೋಲು ರೂಪವೆತ್ತ ರುದ್ರಾಂಬೆ' ಎಂದು ವರ್ಣಿಸಲಾಗಿದೆ. ರುದ್ರಾಂಬೆಯ ತಾಯಿ ನೀಲಾಂಬೆಯು ಕೂಡ ಅತಿ ಸುಂದರಳಾಗಿದ್ದಳು. 'ಬಸವ ಪುರಾಣ' ಶ್ರವಣ ಮಾಡುವ ಸಂಪ್ರದಾಯ ಇದ್ದು, ಪೂಜೋಪಚಾರ ದಿಂದ ಅಷ್ಟೈಶ್ವರ್ಯ, ಅಭೀಷ್ಟ ಸಿದ್ಧಿಗಳು ದೊರೆವುವು. ದೊರೆ ಮಲ್ಲೇಂದ್ರನು ಜಂಗಮರಿಗೆ ದಾಸೋಹ, ಪಾತ್ರೆ, ಕಡಗ, ವಿಭೂತಿ ಇತ್ಯಾದಿ ಕೊಟ್ಟು ಗೌರವಿಸುತ್ತಿದ್ದನು. ಮುನವಳ್ಳಿ ನೀಲಕಂಠಾರ್ಯರಿಂದ ರಚಿತ 'ಮಲ್ಲೇಂದ್ರ ಪೂಜಾವಿಲಾಸ'ವು ಕಿತ್ತೂರಿನ ಚಾರಿತ್ರಿಕ ಮಹತ್ವ ತಿಳಿಸುವುದು. ಕಿತ್ತೂರಿನ ಮೂಲ ಅರಸ ಮುದಿಮಲ್ಲಸರ್ಜನೆಂದೂ, ಇವನ ಮಗ ರುದ್ರಸರ್ಜ. ಇವನ ಮಗ ವೀರಭದ್ರ, ಇವನ ಮಗ ಮಲ್ಲಸರ್ಜ, ಇವನ ಹೆಂಡತಿ ರುದ್ರಾಂಬೆಯ

ಉದರದಲ್ಲಿ ಶಿವಲಿಂಗ ರುದ್ರಸರ್ಜ, ವೀರಭದ್ರಸರ್ಜರೂ, ಚೆನ್ನಮ್ಮನ ಉದರದಲ್ಲಿ ರುದ್ರಸರ್ಜ ಈತನಿಗೆ ಶಿವಬಸವರಾಜ ಎಂತಲೂ ಕರೆಯುತ್ತಿದ್ದರೆಂಬುದು ಡಾ.ಎಂ.ಎಂ.ಕಲಬುರ್ಗಿಯವರ ಅಭಿಪ್ರಾಯವಾಗಿದೆ.

ನೀಲಕಂಠಾರ್ಯರಿಂದ ರಚಿತವಾದ ಮತ್ತೊಂದು ಮಹತ್ವದ ಕೃತಿ 'ಮಲ್ಲೇಂದ್ರ ಪೂಜಾವಿಲಾಸ ತಾರಾವಳಿ'. ಕಲ್ಯಾಣ ಪಟ್ಟಣಕ್ಕೆ ಮಿಗಿಲಾಗಿರುವ ಕಿತ್ತೂರರಸ ಶಮಶರಜಂಗ ಬಹದ್ದೂರ ಮಲ್ಲಸರ್ಜನು ಶ್ರಾವಣಮಾಸದಲ್ಲಿ ಜಂಗಮರ ಪಾದಪೂಜೆಯನ್ನು ನೆರವೇರಿಸುವನು. "ಕರತಳ ಲಿಂಗದಿ ಬೆರೆದ ನೀಲಾಂಬೆಯ ತೆರದ ನೀಲಾಂಬೆಯಾತ್ಮಜೆ ತಾನು। ರುದ್ರಾಂಬೆ ರೂಪದ ರಂಭೆ। ಚರಪದ ಕಂಜರೋಲಂಬೆ। ವಿಮಲ ಸದ್ಗುಣ ನಿಕುರಂಬೆ। ಪತಿ ಬರಲೆಂದು ಶ್ರುತಿಯೊಳು ಸಂದು। ವೃತದೊಳು(ನಿಂದು) ಬರಲು ಕಿತ್ತೂರಿಗೆ ವರ ಮಡಿವಾಳಾಖ್ಯ ಗುರುಪಾದ ಪೂಜಿಸೆ ನಲವಿಂದ ಗುರುತವ ಪೇಳಲದರಂದ । ಗುಣಾಣ್ಣವ ತಾ ಬಂದ."[೭೩] ನೀಲಾಂಬೆಯ ಮಗಳಾದ ರುದ್ರಾಂಬೆ ಗುರು ಮಡಿವಾಳಯ್ಯಗಳ ಸೂಚನೆಯಂತೆ ಪೂಜೆಯನ್ನು ಪೂರೈಸಿದಳು.

ನೀಲಕಂಠಾರ್ಯರಿಂದ ರಚಿತವಾದ ಇನ್ನೊಂದು ಮಹತ್ವದ ಕೃತಿ 'ಮಲ್ಲೇಂದ್ರ ವಿಜಯ'. ಇದರಲ್ಲಿ ದಕ್ಷಿಣ ದೇಶದ ಅರಸ ಟಿಪ್ಪು ಚಿತ್ರದುರ್ಗ, ಧಾರವಾಡಗಳನ್ನು ಗೆದ್ದು, ಕಿತೂರಿನ ಮೇಲೆ ದಾಳಿ ಮಾಡಿ, ಮಲ್ಲೇಂದ್ರನನ್ನು ಶ್ರೀರಂಗಪಟ್ಟಣಕ್ಕೆ ಒಯ್ದು ಸೆರೆಯಿಟ್ಟನು. ಆ ಸಮಯದಲ್ಲಿ ರಾಣಿ ರುದ್ರಾಂಬೆ 'ಸೋಮವಾರ ವ್ರತ' ಹಿಡಿದು, ತನ್ನ ಗಂಡ ಸೆರೆಮನೆಯಿಮದ ಸುರಕ್ಷಿತವಾಗಿ ಬರುವಂತೆ ಮಾಡಿದಳು. ರಾಣಿ ರುದ್ರಮ್ಮ "ರೋದಿಸದಿ ಋಷಿ ಪತ್ನಿಯಂ ಕೇಳೆ ಶ್ರೀ ಸೋಮವಾರ ವ್ರತವನು ಆವಗಂ ಮಾಡಲಾ ದೇವದೇವರಾಧ್ಯ ಪಾವನಾತ್ಮಕ ನಿನ್ನ ಪತಿಯ ತಂದೀವನೆನಲಾ ವಿಮಲಚರಿತೆ ತದ್ವತವನಾಚರಿಸುತ್ತಲಿರಲಿತ್ತಲಾ ಕುವರನ।"[೭೪] ಎಂಬ ವಿವರಗಳು ಬರುತ್ತವೆ.

ರಾಣಿ ರುದ್ರವ್ವ ತನ್ನ ಇಬ್ಬರು ಮಕ್ಕಳನ್ನು ರಾಣಿ ಚೆನ್ನಮ್ಮನ ಮಡಿಲಲ್ಲಿರಿಸಿ ಶಂಭು ಸಾಯುಜ್ಯಮಂ ಪಡೆದ ಪುಣ್ಯವತಿ.

'ಎನ್ನೊಡೆಯ ಮಲ್ಲೇಂದ್ರಗನ್ಯೋನ್ಯಭಾವದಿಂ
ರನ್ನ ಮಲ್ಲೇಂದ್ರ ಭೂಪಾಲನನುಮತದಂತೆ ಸುಖಿಸು ಸುತರಿರ್ವರುಗಳು
ನಿನ್ನ ತನುಭವರೆಂದು ನೋಡಿ ಮೋಹವ ಮಾಡಿ
ನನ್ನವ್ವ ಚನ್ನವ್ವ ಎಂದರುಹಿ ಲೋಕಸುಖ
ಮಂ ನಿವಾರಿಸಿ ಶಂಭು ಸಾಯುಜ್ಯಮಂ ಪೆದ ಪುಣ್ಯವದನೇಂ ಪೊಗಳ್ವೆನು"'[೭೫]
ಎಂಬ ವಿವರಗಳಿವೆ.

## ೨. ಜನಪದ ರಚನೆ

**ಕಿತ್ತೂರ ಅರಸರ ಕೋಲುಪದ:** ಜನಪದ ಶೈಲಿಯಲ್ಲಿ ಕಿತ್ತೂರಿನ ಚರಿತ್ರೆ ವಿವರಿಸುವ ಪದ ಇದಾಗಿದೆ. ಕಿತ್ತೂರ ದೇಸಾಯಿ ಮಲ್ಲಸರ್ಜನನ್ನು ಟಿಪ್ಪು ಸೆರೆಹಿಡಿದಾಗ, ರಾಣಿ ರುದ್ರಮ್ಮ ಹಾಗೂ ರಾಣಿ ಚೆನ್ನಮ್ಮರ ದುಃಖದ ಪ್ರಸ್ತಾಪವೂ ಇದೆ.

"ಕೋಟಿ ಕೋಟಿ ಸುತ್ತ ಕಾಟಕರು ಮಾಡಿದಾರು
ಬಾಲೆ ರುದ್ರವ್ವ ಅಳದಿರ
ಏನಿನ್ನ ಮಾತಿನ ಮಗನ ಕೈಸೆರೆ
ಕೋಟಿ ಕೋಟಿ ಸುತ್ತ ಸುತ್ತ ಕಾಟಕರು ಮಾಡಿದಾರು।
ಬಾಲೆ ಚೆನ್ನವ್ವ ಅಳದಿರ
ಏ ನಿನ್ನ ಬಾಲನೊಯ್ದ್ಯಾರ ಕೈಸೆರೆ
ಹತ್ತು ಬೆರಳಿಗೆ ಚುಚ್ಯಾರ ಸೂಜಿಯ
ಮೇಗ ತಂದಿಟ್ಟಾರ ಗಿರಕಿಯ
ಚೆನ್ನವ್ವ ನಿನ್ನ ಬಾಲನೊಯ್ದ್ಯಾರ ಕೈಸೆರಿ"[೭೬]

ಎಂಬ ಪದವನ್ನು ಗಮನಿಸಿದಾಗ ಟಿಪ್ಪು ಮಲ್ಲೇಂದ್ರನೊಂದಿಗೆ ಮಕ್ಕಳನ್ನು ಸೆರೆ ಹಿಡಿದಿದ್ದನೇ ಎಂಬ ಅನುಮಾನ ಹುಟ್ಟುತ್ತದೆ.

**ಮಲ್ಲಸರ್ಜನ ಕಾವ್ಯ:** ದೊರೆ ಮಲ್ಲಸರ್ಜನು ಬಾಜಿರಾಯನಿಗೆ ಗೌರವ ಸಲ್ಲಿಸಲು ಹೊರಟು ನಿಂತು ಅತ್ತೆ ನೀಲವ್ವನಿಗೆ ವಂದಿಸಿ, ಹಿರಿಯ ಮಗ ಬಾಪು ಸಾಹೇಬನಿಗೆ ರಾಜ್ಯದ ಕಡೆ ಗಮನ ಕೊಡಲು ತಿಳಿಹೇಳಿದ.

"ಸತಿಯ ಚೆನ್ನವನ ಪ್ರಿತಿಯ ಗಂಡ।
ಅತಿ ದುಃಖವ ಮಾಡಿದ ಮಲ್ಲೇಂದ್ರ
ಸತಿಯರು ಭೂಮಿಗೆ ಹೊರಳಿದ ಕಂಡು
ಪತಿ ಮಲ್ಲೇಂದ್ರ ಭೂಪ ತಾನೆತ್ತಿಕೊಂಡ
ಅಳಬೇಡ ನೀನೆನ್ನ ಕಳೆಯುಳ್ಳ ಸತಿಯೇ
ಎಳೆಯ ಮಕ್ಕಳ ಮ್ಯಾಲ ಇರಬೇಕ ರತಿಯ
ಒಳಗಕ್ಕ ಕೊಡುತಿರು ನೀ ಮೇಲು ಮತಿಯೇ
ಬಾಳ ಲೋಚನ ಶಿವನ ಪಾದೇವ ಗತಿಯ

ರಾಜಲಕ್ಷ್ಮಿಯನಾಳಿಕೊಂಡಿರು ನೀನು
ಬಾಜಿರಾಯನ ಕೂಡ ಹೋಗುವೆ ನಾನು
ಮೋಜಿನ ಹಿರಿ ಅತ್ತಿ ನೀಲವ್ವನು
ಭುಜಬಲ ಐದನು ಭಾಪು ಸಾಹೇಬನು"[೭೭]

ಹೀಗೆ ರಾಣಿ ಚೆನ್ನವ್ವನನ್ನು ಸಮಾಧಾನಪಡಿಸಿ, ಬಾಜಿರಾಯನ ಭೇಟಿಗೆ ಹೋದ. ಮಾರಿಹಾಳ ಪ್ರದೇಶದಲ್ಲಿ ಬಾಜೀರಾಯನ ಸೈನ್ಯ ಭೇಟಿಯಾಯಿತು. ನೇರ ಬಾಜಿರಾಯನ ಭೇಟಿ ಆಗಲಿಲ್ಲ. ಶೇಗುಣಸಿ ಅಲ್ಲಪ್ಪಗೌಡ ಬಾಜೀರಾಯನಿಗೆ ಮಲ್ಲೇಂದ್ರನ ವಿರುದ್ಧ ಚಾಡಿ ಹೇಳಿದ. ಬಾಜಿರಾಯನು ಮಲ್ಲೇಂದ್ರನ ಮೇಲೆ ನಾಲ್ಕು ಲಕ್ಷ ರೂಪಾಯಿ ಕಪ್ಪಕಾಣಿಕೆ ಬಾಕಿ ತೋರಿಸಿ, ಮಲ್ಲೇಂದ್ರನನ್ನು ಸೆರೆ ಹಿಡಿದುಕೊಂಡು ಪುಣೆಗೆ ಹೋದನು. ಅಲ್ಲಿ ಮುಧೋಳಕರ ಮನೆಯಲ್ಲಿ ಸೆರೆಯಿಟ್ಟನು. ಅಳಿಯ ಮಲ್ಲೇಂದ್ರನ ಸ್ಥಿತಿ ಕೇಳಿ ಅತ್ತೆ ನೀಲವ್ವ ಕ್ಷೀಣಿಸಿ ತೀರಿಕೊಂಡಳು.

"ಮಡದಿ ಚೆನ್ನವ್ವನು ಚಿಂತಿಸಿ ಮನದೊಳು
ಸಡಗರ ಸಂಪತ್ತು ಬಿಟ್ಟು ಮನೆಯೊಳು
ಒಡೆಯ ಮಲ್ಲೇಂದ್ರನ ತಾ ನೆನೆಸಿದಳು
ಒಡನೆ ಮಾತಾಡಿ ದುಃಖವ ಮಾಡಿದಳು."[೭೮]

ಮಲ್ಲಸರ್ಜ ಕ್ಷೀಣಿಸುತ್ತಾ ಇದ್ದಾನೆಂದು ಗಮನಿಸಿ ಬಹುಕಾಲ ಬಾಳಲಾರನೆಂದು ಇವನನ್ನು ಬಾಜೀರಾಯ ಬಿಡುಗಡೆ ಮಾಡಿದನು. ಆಗ ಮಲ್ಲಸರ್ಜನು ಅರಭಾವಿ, ಹೊಂಗಲ, ಬೆಳವಡಿಗಳಿಗೆ ಬಂದು ಕಿತ್ತೂರು ಸಮೀಪಿಸಿದನು. ಮಂತ್ರಿ ಶಿವಬಸಪ್ಪನನ್ನು ಭೆಟ್ಟಿಯಾಗಿ, ಶನಿವಾರ ಸಂಜೆ ಹೊಂಡದ ಬಸವಣ್ಣನಲ್ಲಿಗೆ ಬಂದು, ಬಳಿಕ ಚೌಕೀಮಠಕ್ಕೆ ಬಂದು, ಅಲ್ಲಿ ೨ ತಾಸು ಕಳೆದು ನಂತರ ಅರಮನೆ ಪ್ರವೇಶಿಸಿದನು. ಆಗ ಚೆನ್ನವ್ವ 'ಬೋರ್ಯಾಡಿ ಮಾಡ್ಯಾಳು ದುಃಖ' ಬೆಳಗಿನ ಜಾವ ಮಲ್ಲೇಂದ್ರನು ಪ್ರಾಣ ಬಿಟ್ಟನು. ಆ ಸಂದರ್ಭದಲ್ಲಿ ರಾಣಿ ಚೆನ್ನಮ್ಮ ಪ್ರಲಾಪಿಸಿದ ಬಗೆಯನ್ನು ಈ ಕಾವ್ಯ ಚಿತ್ರಿಸುತ್ತದೆ.

"ಮುತ್ತಿನ ಸೆರಗಿನ ಸೀರೆಯನುಟ್ಟು
ಹತ್ತು ಹೊನ್ನಿನ ಜರದ ಕುಪ್ಪಸತೊಟ್ಟು
ಕಸ್ತೂರಿ ತಿಲಕದ ಬೊಟ್ಟುಗಳನಿಟ್ಟು
ವಸ್ತ್ರ ಆಭರಣ ಜೋಡಿಸಿಟ್ಟು
ಮುತ್ತಿನ ಆರತಿ ಕೈಯಾಗ ಹಿಡಿದು

ಮತ್ತೆ ಮಲ್ಲೇಂದ್ರ ಬಂದಾಳೋ ನಡೆದು
ಎತ್ತಿದ ಮಲ್ಲೇಂದ್ರ ಬಂದಾಳೋ ನಡೆದು
ಎತ್ತಿದಳಾರತಿ ಕೈಯಾಗ ಹಿಡಿದು
ಸತಿಯು ಸುತರ ಬಿಟ್ಟು ಹೋಗುವರೆ ಮಡಿದು"[೭೯]

ಚೆನ್ನಮ್ಮ ಸತಿ ಮಲ್ಲೇಂದ್ರನನ್ನು ಬಿಗಿದಪ್ಪಿ, ಮುಂಡಾಡಿ, ಅರಸನ ಸ್ಥಿತಿಗತಿ ಕೊಂಡಾಡಿ, ವರಪುತ್ರ ಬಾಳಾಸಾಹೇಬನ ಮುಖವನ್ನು ನೋಡಿ ನಿನ್ನ ಲಗ್ನ ನೋಡದೆ ಮರಣ ಹೊಂದಿದನಲ್ಲ ಎಂದು ದುಃಖಿಸಿದ್ದಾಳೆ. ಮುತ್ತಿನ ಸೆರಗಿನ ಜರತಾರಿ ಸೀರೆ, ರತ್ನ ಖಚಿತವಾದ ಹೆಳಲ ಬಂಗಾರ, ಪತಿ ಕಳಿಸಿಕೊಟ್ಟ ವಸ್ತ್ರ, ಒಡವೆ ಮನಾರ ಇದ್ದರೂ ಮಲ್ಲೇಂದ್ರನಿಲ್ಲದ ಬಾಳು ವ್ಯರ್ಥ ಎಂದು ರಾಯ ಹೇಳಿದ ಒಂದೊಂದೇ ಮಾತುಗಳನ್ನು ಸ್ಮರಣೆಗೆ ತಂದುಕೊಳ್ಳುತ್ತಾ ಪ್ರಲಾಪಿಸುತ್ತಿದ್ದಾಳೆ.

"ಒಡೆಯ ಚೆನ್ನವ್ವನ ಆರ್ಭಾಟ ಬಹಳ
ನಡುವಿನ ಪುತ್ರನು ಹಿಡಿದನು ಕೈಗಳ
ಬಡಕೋಬ್ಯಾಡ ತಾಯಿ ಎದೆ ಬಾಯಿಗಳ
ನೋಡು ಮಲ್ಲಸರ್ಜನ ಮೋರಿಗಳು।
ಸತಿಯು ಚೆನ್ನವ್ವನು ದುಃಖವ ಮಾಡಿ
ಪತಿಯ ಪಾದದ ಮೇಲೆ ಬಿದ್ದು ಹೊರಳಾಡಿ
ಕ್ಷಿತಿಯೊಳು ಎನ್ನನು ಪರದೇಶಿ ಮಾಡಿ
ಹಿತದಿಂದ ಹರನೊಳು ಹೋದಿರಿ ಕೂಡಿ"[೮೦]

ಸತಿ ಚೆನ್ನವ್ವನು ಕಳವಳಗೊಂಡು ಅಲ್ಲಿರುವ ಸತಿಯರು ಆಕೆಯನ್ನು ಒಳಗೆತ್ತಿಕೊಂಡು ಹೋದರು. ಮಲ್ಲೇಂದ್ರನ ಮೊಗ ನೋಡಿ ಎದೆ ಬಡಿದುಕೊಂಡಾಳೆಂದು. ಏಳು ಉಪ್ಪರಗಿಯ ವಿಮಾನ ಕಟ್ಟಿ, ಬಿಳಿ ಜರದ ಶೆಲ್ಲೆ ತಗೆದಾರು ಪಟ್ಟಿ ಮೇಲೆ ಮುಚ್ಚಿದರು ಜರದ ದುಪ್ಪಟ್ಟಿ, ಬೆಳ್ಳಿಯ ಮುತ್ತಿನ ಗಂಟಿ ಸರಗಳ ಕಟ್ಟಿ, ಕಲ್ಲು ಮಠದೊಳಗೆ ನೆಲವನು ಅಗಿದು, ಮಲ್ಲಸರ್ಜನ ಸಮಾಧಿ ತೆಗೆದು, ಮಲ್ಲಸರ್ಜನನ್ನು ಸಮಾಧಿ ಮಾಡಲಾಯ್ತು. ಬಾಳೆ ಕಂಬ, ತಳಿರು ತೋರಣ ದಿಂದ ಸುಮಧುರ ಹೊಳೆವ ನಂದಿಯನ್ನು ಮಾಡಿ, ಸುತ್ತಲೂ ರುದ್ರಾಕ್ಷಿ ಸರವನ್ನು ಕಟ್ಟಿ, ಮತ್ತೆ ಬರೆದಾರೊ ಕೈಲಾಸದ ಸೃಷ್ಟಿ ಚಿತ್ರದಿಂದ, ಪತ್ರಿ ವಿಭೂತಿಯಿಂದ ಅದು ಅಲಂಕೃತಗೊಂಡಿತು. ಕಸ್ತೂರಿ ಸಾರಗೆಯನ್ನು ಸುತ್ತಿನ ಗೋಡೆಗೆ ಮಾಡಲಾಯ್ತು, ಹರಿಹರವೆನ್ನುತ ಜನರೆಲ್ಲ ದೊರೆ ಮಲ್ಲಸರ್ಜನ ಸಮಾಧಿಕ್ರಿಯೆ ಮಾಡಿದರು.

ಸತಿ ಚೆನ್ನವ್ವನು ಪತಿ ಮೋರೆ ಕಂಡು
ಪತಿಯ ಮುಂದೆ ಎದೆ ಬಡಬಡಕೊಂಡು
ರತುನದ ಗುಳದಾಳಿ ಕರಿಮಣಿ ಗುಂಡು
ಹಿತವಾದ ಕಾಜಿನ ಬಲಿ ಒಡಕೊಂಡು
ಉಡಿಯಕ್ಕಿ ಚಲ್ಲ್ಯಾಳು ದೊರೆಗಳ ಮ್ಯಾಲೆ
ಹಿಡಿದು ಜಗ್ಗ್ಯಾಳು ಹೂವಿನ ದಂಡಿಯ ಮಾಲೆ
ಸಡಗರದ ಕಾಲುಂಗ್ರಾ ಅಣುವಟಕಿ ಪಿಲ್ಲೆ
ಒಡದ ಹಾಕ್ಯಾಲು ಮಲ್ಲಸರ್ಜನ ಬಾಲೆ"[೮೧]

ಮೂರು ಬೊಗಸೆ ಮಣ್ಣು ಒಗೆದೆ ಚೆನ್ನವ್ವ ಮಾಡ್ಯಾಳು ದುಃಖ ಎಂದು ಚೆನ್ನವ್ವನ ಪ್ರತಾಪವನನು ವಿವರಿಸಲಾಗಿದೆ.

**ಕಿತ್ತೂರ ಮಲ್ಲಸರ್ಜನ ಲಾವಣಿ:** ಈ ಲಾವಣಿಯು ಕಿತ್ತೂರಿನ ಇತಿಹಾಸದ ಹಲವು ವಿಚಾರಗಳನ್ನು ತಿಳಿಸುತ್ತದೆ. ಮಲ್ಲಸರ್ಜನ ಸಮಾಧಿಕಾರ್ಯದ ನಂತರ ತೆರವಾದ ಸಿಂಹಾಸನಕ್ಕೆ ಬಾಪೂ ಸಾಹೇಬ ಅಧಿಪತಿಯಾದನು. ಈತ ಜಾನ್ ಮಂಡೇಲ್ ಸಾಹೇಬನಿಗೆ ನಜರಾನಿ ಸಲ್ಲಿಸುತ್ತ ೭ ವರ್ಷ ಕಾಲ ಆಳಿದನು. ರುದ್ರವ್ವನ ನಡುವಿನ ಮಗ ಬಾಬಾಸಾಹೇಬ ಮಡಿದನು. ಬಳಿಕ ಚೆನ್ನವ್ವನ ಮಗ ಬಾಳಾಸಾಹೇಬನೂ ಮಡಿದನು. ಕೆಲವು ದಿನಗಳಲ್ಲಿ ಹಿರಿಯ ಮಗ ಬಾಪುರಾಯನೂ ಮಡಿದನು. ವಾರಸು ಇಲ್ಲದ ಇಂಥ ಸಂದರ್ಭದಲ್ಲಿ ರಾಣಿ ಚೆನ್ನವ್ವ ರಾಜ್ಯಭಾರ ನಡೆಸಿದಳು. ಪಟ್ಟದ ಚೆನ್ನವ್ವನು ಅಗಣಿತ ದಾನವನ್ನು ಕೊಟ್ಟಳು. ಮಲ್ಲೇಂದ್ರನ ಪಟ್ಟದರಸಿ ಚೆನ್ನವ್ವನ ದುಃಖವನ್ನು

ಪಟ್ಟದರಸಿಯ ದುಃಖ ಎಷ್ಟು ಹೇಳಲಿ ಸದರ
ಕಟ್ಟಿಗ್ಗಣಿ ಬಡಿದುರುಳಿ ಬಿದ್ದು
ಸತಿಯು ಚೆನ್ನವ್ವನು ಪತಿಯ ಪಾದದಿ ಹೊರ
ಳುತ ಪರದೇಶಿ ಮಾಡಿ ಕ್ಷಿತಿಯೊಳಗೆ । ಇಟ್ಟು॥
ಹಿತದಿಂದ ಕೂಡಿದಿ ಹರನೊಳಗೆ । ಮುಂದೆ
ಗತಿಯೇನೆನಗೆ ಸರಿ ಸತಿಯರೊಳಗೆ
ಮುಖಬಾಗಿತು ಸುಖ ನೀಗಿತು ದುಃಖ ಸಾಗಿತು।ಯೆಂದು।
ಸುತರ ತೆಕ್ಕಿಸಿ ನೆಲಕುರುಳುತಲಿ। ದೇಹ
ಸ್ಮೃತಿ ತಪ್ಪಲೊಳಗೊಯ್ದು ಇರಿಸುತಲಿ। ಅಲ್ಲಿ

ಪತಿ ಬಾರೆನುತೆ ಮಂದಮತಿಯಿಂದಾಡುತೆ ಇದ್ದ
ಸತಿಯರು ಉಪಚರಿಸುತಲೆ ನೋಡಿದಳು[೮೨]

ಚೆನ್ನವ್ವ ಎತ್ತಿದಳು ಆರತಿ, ತನ್ನನ್ನು ಅಗಲಿ ಹೋದ ಪತಿಗೆ ಶಪಿಸುವಳು.

"ಪರದೇಶಿತನ ಮಾಡಿ ಹರನೊಳಗೆ ಕೊಡುವದು
ತರವೆ ನಿನಗಿಂಥ ದೊರಿತನವು
ಒಡತಿ ಚೆನ್ನವ್ವ ಆರ್ಭಡಿಸ್ಯಳುವುದ ಕಂಡು
ನಡುವಿನ ಪುತ್ರನು ಹಿಡಿದನಾಗ । ಕಯ್ಯ
ಬಡಕೋಬ್ಯಾಡ ತಾಯಿ ನೋಡಿರೀಗ । ಮೋರಿ
ಬಿಡದಡಗುವದು ಮೃತ್ತಿಕೆಯೊಳಗ
ಧರ್ಮ ಮುಳಗೀತು ಕರ್ಮ ಬೆಳೆದೀತು

ಎಂದು ಬೋರ್ಯಾಡಳುವರು.

ತರವೆ ನಿನಗಿಂಥ ದೊರಿತನವು ನನ್ನ ಬಿಟ್ಟು
ಪರಶಿವನೊಳಡಗಿ ಪೋಗುವುದು
ಮೋರಿ ನೋಡುತೆ ಮುಂದೆ ಬಾಗಿ। ಶವಮ್ಯಾ
ಲೊರಗಿ ಬೀಳಲು ತಾನು ಸಾಗಿ।[೮೩]

ಎಂದು ಮಲ್ಲೇಂದ್ರನನ್ನು ಬಿಗಿದಪ್ಪಿ ಅವನ ಗುಣಗಳನ್ನು ಎಷ್ಟು ಹೇಳಿದರೂ ತೀರದು ಎನುತ, ತನ್ನ ಕಿರಿಯ ಮಗನಿಗೆ ಕನ್ಯೆ ತೆಗೆದು, ವಿವಾಹ ಮಾಡದೆ ಶಿವನೊಳಗೆ ಹೋದಿರಲ್ಲ ಎಂದು ದುಃಖ ಮಾಡಿದಳು. ತನ್ನ ಆಭರಣಗಳನ್ನೆಲ್ಲ ತೆಗೆದು ಬಿಸುಟಿದಳು.

ಬಂತೆನಗ ದಾಳಿ। ರತ್ನದ ಗುಳದಾಳಿ।
ಮೂಗಿನ ಜುಳಜುಳಿ। ಹರಿ
ದಿಡುತ ಕಾಜಿನ ಬಳಿ ಬಡಿದಳಾಗ। ಆ
ರ್ಭಟಿಸಿ ಹಾಯಲು ಜನ ಹಿಡಿದರಾಗ। ಕಟ್ಟ
ಕಡಿಗೆ ಪ್ರಾಣಕಾಂತನಡಿಗೆರಗುತೆ ಮಣ್ಣು
ಬಿಡದೊಗಿದಳು ದೊರಿ ಮಡದಿಯಳಾಗ[೮೪]

ತಾಯಿಯ ದುಃಖವನ್ನು ನಡುವಿನ ಮಗ ಸಂತೈಸುವನು. 'ಬಡಕೋ ಬೇಡವ್ವೀಗ ತಂದೆಯರು ಹರನೊಡನೆ ಬೆರೆತು ತಾವು ಹೊಂದಿಹರು। ಚಿಂತೆ ಬಿಡು ಪುತ್ರರಿರುವೆವು ಸುಮ್ಮನಿರು ಎಂದು ಶಮಿಸುತೆ, ಶಾಂತಿಗೊಳಿಸುತೆ, ದೊಳಿ ಮರೆಸುತೆ । ಸೊಸ್ತೇರು ಅಡಿಗಳಿಗೆರಗಿ

ಅತ್ತ ಶೋಕವನ್ನು। ಕೂಡಿ ಬಿಡಿಸೆ ತೊತ್ತುಗಳ ಬಾಪೂ ಸಾಹೇಬನು। ತಾಯಿ ಹಡೆದವ್ವ ನೀಯೆನ್ನೊಳೊಡನೆ ರಾಜ್ಯವನಾಳಿ ಬಿಡದೆ ಸಲಹು ಸಣ್ಣ ಹುಡುಗರನಿನ್ನು।[೮೫] ಎಂದು ಹೇಳುವನು.

ಬ್ರಿಟಿಷ್ ಅಧಿಕಾರಿ ಜಾನ್ ಮಂಡೆಲನ ಫೌಜು ಬೆಳವಡಿಯಲ್ಲಿ ನೆರೆದಿತ್ತು. ಬಾಪು ಸಾಹೇಬ ಇವರನ್ನು ಭೇಟಿಯಾಗಿ, ನಜರಾಣಿ ಸಲ್ಲಿಸುತ್ತ ಆಳುವೆನೆಂದಾಗ, ಒಪ್ಪಿಕೊಳ್ಳುವರು. ಬಾಪು ಸಾಹೇಬನು

> ಕರ್ಮಯೆಳ್ಳನಿತು ತೋರದಲೆ ನಡೆಸುವರು
> ಅಮ್ಮ ರಾಣಿಯರ ಹುಕುಮಿನಲಿ
> ಸತ್ಯವೆಂಬುದ ತಾವು ತಿಳಿದು । ನ್ಯಾಯದ
> ಇತ್ಯರ್ಥಾಗುವದನ್ಯಾಯಳಿದು।[೮೬]

ಎಂದು ರಾಣಿಯ ಆಜ್ಞೆಯಂತೆ ರಾಜ್ಯ ಪಾಲಿಸುವನು. ಬಾಬಾ ಸಾಹೇಬನಿಗೆ ರೋಗ ಬಿಡದೆ ಸೇರಲು ಆತ ಮಡಿದನು. ನಿನ್ನಂಥ ಸುಗುಣನನ್ನು ಕಳೆದುಕೊಂಡು ನಾನು ಬದುಕಲಾರೆ ಎಂದು ಪ್ರಲಾಪಿಸುತ್ತಾ ಎಚ್ಚರ ತಪ್ಪಿತು. ಹೊಟ್ಟೆಯಲ್ಲಿ ಬೆಂಕಿ ಹಾಕಿದಂತಾಯ್ತು. ದುಃಖಿಸುವ ತಾಯಿಗೆ ಬಾಪು ಸಾಹೇಬ ಹಡೆದವ್ವ ಚಿಂತಿಯ ಬಿಟ್ಟು "ಒಡೆತನವಾಳಿರು ಎನ್ನ ಒಡಗೂಡುತೆ ರಾಜ್ಯ ನಡೆಸು ಸುಖದಿ ಹರುಷವ ಪಡುತೆ ಎಂದು ಸಂತೈಸುವನು. ಆದರೆ ಕೆಲಕಾಲಾನಂತರ ಬಾಳಾಸಾಹೇಬನಿಗೂ ಜ್ವರ ಕಾಡತೊಡಗಿತು. ಎರಡು ಮಕ್ಕಳು ಹೋದ ಚಿಂತೆಯನ್ನು ನಿನ್ನನ್ನು ನೋಡಿ ಮರೆತಿದ್ದೆ. ಈಗ ನೀನೂ ಜ್ವರದಿಂದ ಬಳಲುವೆಯಾ ಎಂದು ನಮ್ಮ ಬಳಗದಲ್ಲಿ ಯಾವ ದುಷ್ವರ ನೆರಳು ಸೋಂಕಿದೆಯೊ ಏನೋ, ಹಣೇ ಬರಹ ಬರೆದ ಬ್ರಹ್ಮನು ಮಕ್ಕಳಿರಬಾರದೆಂದು ಬರೆದನೋ ಎಂದು ಶೋಕಿಸುತ, ಮಗನನ್ನು ಅಪ್ಪಿ, ದಿಕ್ಕುತಪ್ಪಿ, ಸ್ಮರಣೆ ತಪ್ಪುವಳು. ಉಸಿರುಕಳೆದುಕೊಳ್ಳುವ ಮಗನ ಮುಖವನ್ನು ನೋಡಿ ಹೊರಳಿದಳು. ಮಡದಿ ವೀರವ್ವ ಒಡೆಯನೆದುರು ನಿಂತು, ನೆಲದಿ ಉರುಳಿದಳು. ಪತಿಯೆ ಬಾ ಎನ್ನುತ ಸುರತಲಯದೊಳು ನೀನೆ ರತಿಯೇ ಬಾ ಮಾರನ ಸುಂದರನೆ ಎನುತ, ಎದೆ ಕಲ್ಲನು ಮಾಡಿ ನೀನು ಹರನೊಡನೆ ಒಂದಾಗಿರುವೆಯಲ್ಲ. ಹಣೆಯನ್ನು ನೆಲಕ್ಕೆ ಬಡಿಯುತ್ತ ತನ್ನ ಜನ್ಮವನು ಸುಡಲೆಂದು ತನ್ನನ್ನೇ ಪರಿತಪಿಸುವಳು. ಕಿತ್ತೂರ ಪುರಕೆ ಮತ್ಯಾರು ದೊರೆ ಎನುತ ಮುತ್ತು ಮೆರೆವ ರ್‍ಯಾಗುಟೆ ಚೌರಿ, ನೆಲ್ಲೀಸರ ಪುತ್ತಳಿಯ ಮಾಲಿ ಕೊರಳೊಳಗೆ ಹಾರ, ರತ್ನ ಖಚಿತ ಉಂಗುರ, ಬಂಗಾರ ಬಳಿಗಳು, ಶೃಂಗಾರ ಮಣಿಗಳು, ದ್ರವ್ಯ ಖಣಿಗಳೆಲ್ಲವನ್ನು ಹರಿದ್ವರಿದು ಗಂಡನಿಗೆ ಹಾಕಿದಳು. ನಿನಗೆ ಸರಿಸಾಟಿ ದೊರೆ ಯಾರೆಂದು ಕರಗಿದಳು. ಇನ್ನು ಹೇಗೆ ನಾನು ಬದುಕಲಿ. ಕೆರೆ ಬಾಂವಿ ಮುಳುಗಿ ಅಲ್ಲಿರುವ ಪ್ರಾಣಿಗೆ ಆಹಾರವಾಗುವೆ ಎಂದು ದುಃಖಿಸುವಳು. ಕರಿಮಣಿ, ಕಾಜಿನ

ಬಳಿ ಒಡೆದಳು. ಸರದಾಲಿ ಪದಕವನ್ನು ಹರಿದಳು. ಮೂರು ಮಂದಿ ಮಕ್ಕಳು ಹೋದ ಬಳಿಕ ಚೆನ್ನವ್ವ ರಾಜ್ಯ ಮುಂದುವರೆಸಿದಲು. ದೌವಲತವನಿಲ್ಲದೆ ಆಳಿದಳು. ವಸುಧೆಯಲ್ಲಿ ನೀತಿಯಿಂದ ರಾಜ್ಯವಾಳಿದಳು. ಅತ್ತಿ ಸೊಸೆಗೆ ಬೇಸರದಿ ಕದನ ಬಂದಿತು.

"ಅತಿ ಒಲವನು ಮತ್ತೆ ಕಲಹನು
ಎತ್ತಿ ಛಲವನು। ಮಾಡಿ
ಮಸಲತ್ತೆಸಗಿ ಜನ ಸೊಸಿ ಕಡಿಗೆ। ನೆರೆ
ದುಸುರಿ ವಂದಿಸಿ ಮುಖ ಹಸಿತರಾಗಿ। ಮಾಕ
ದೆಸೆಯುಳ್ಳವರ ಕೂಡಿ ಹಸಗೆಡಿಸುತೆ ಅತ್ತಿ
ಸೊಸಿದೆರ । ಗಲವುದ್ಯೋಗಿಸಿದರಾಕ್ಷಣದಿ ॥
ನಿಲ್ಲದಾಳಿದಳು ನೀತಿಯಲಿ ಚೆನ್ನವ್ವನು
ಎಲ್ಲರನು ಕರೆಸಿ ಪೇಳಿದನು॥
ಚಂದಾಗಿರುವ ದವಲತ್ತು। ಕೊರತೆಯ
ಹೊಂದುವದೀ ಮಸಲತ್ತು ॥"[೮೭]

ಹೀಗೆ ಮಸಲತ್ತು ನಡೆಸಿದರೆ ನಾವು ರಾಜ್ಯ ಕಳೆದುಕೊಳ್ಳಬೇಕಾಗುವುದು. ಈಗಾಗಲೇ ಕಿತ್ತೂರ ಬೊಕ್ಕಸದ ದ್ರವ್ಯದ ಮೇಲೆ ಕುಂಪನಿಯವರಿಗೆ ಕಣ್ಣು ಬಿದ್ದಿದೆ. "ನಾನು ರಾಜ್ಯವನ್ನು ಆಳುತ್ತೇವೆ. ಅರಸು ಮನೆತನದವರು ಉಂಬಳಿ ಪಡೆದು ಸುಖವಾಗಿರುವುದು" ಎಂದು ಹೇಳಿದರು. ರಾಣಿ ಚೆನ್ನವ್ವ ಇದನ್ನು ನಿರಾಕಾರಿಸಿದಳು. ಬ್ರಿಟಿಷರ ದಂಡು ಕಿತ್ತೂರನ್ನು ಮುಟ್ಟಿತು. ಕಿತ್ತೂರ ಸೈನ್ಯ ಮತ್ತು ಆಂಗ್ಲ ಸೈನ್ಯದ ನಡುವೆ ಯುದ್ಧವಾಗಿ ಕಿತ್ತೂರಿಗೆ ಜಯ ದೊರೆಯಿತು. ಈ ಸುದ್ದಿ ಮುಂಬೈಗೆ ತಿಳಿದು, ಆಂಗ್ಲ ಸೈನ್ಯ ನೆರವಿಗೆ ಬಂದಿತು. ಕಿತ್ತೂರನ್ನು ಮುತ್ತಿ, ಕೋಟೆಯನ್ನು ಕೆಡವಿ, ಅರಮನೆಯನ್ನು ಪ್ರವೇಶಿಸಿತು. ಮತ್ತೆ ಚೆನ್ನವ್ವ, ಸೊಸೆ ವೀರಮ್ಮನನ್ನು ಹೊಂಗಲದಲ್ಲಿ ಸೆರೆಯಿಟ್ಟರು. ಕಿತ್ತೂರಿನ ಸಂಪತ್ತು ಅಪಾರವಾಗಿದ್ದು, ಈ ಸಂಪತ್ತನ್ನು ಇಂಗ್ರೇಜರು ತಿಂಗಳು ಗಟ್ಟಲೆ ಒಯ್ದರೆಂಬುದಾಗಿ ಈ ಕಾವ್ಯ ತಿಳಿಸುತ್ತದೆ. ಹೀಗೆ ಅತ್ತೆ ಸೊಸೆಯರು ೬ ವರ್ಷ ಕಳೆದರು. ಆ ನಂತರದಲ್ಲಿ ವೀರವ್ವನನ್ನು ಧಾರವಾಡಕ್ಕೂ, ಚೆನ್ನವ್ವನನ್ನು ಕುಸುಗಲ್ಲಿಗೂ ಸ್ಥಳಾಂತರಿಸಲಾಯ್ತು. ಅತ್ತೆ ಸೊಸೆಯರನ್ನು ಅಗಲಿಸುವ ಸಂದರ್ಭವನ್ನು

"ಬಂಡು ನಡೆದೀತುಯೆಂದು ದಂಡು ಸರದಾರರ ಕೂಡಿ
ಕೊಂಡು ಹೊಂಗಲದಿ ಬರವುತಲಿ
ಬಂದ ಕ್ಷಣದಿ ಆಗ್ಹೊಂಡೆಂದೀರವ್ವಗ ಒಳ್ಳೇ

ಚಂದ ಮೇಣೇವ ತಂದು ಮುಂದಿಡಲು। ಕುದರಿ
ಹಿಂದು ಮುಂದೆಡಬಲ ಹೊಂದಿರಲು। ಪಹರೆ
ಬಂದೂಕ ಕವಾಯ್ತದ ಬಾರಿರಲು॥
ಅತ್ತೀ ನೋಡ್ವಳು ದುಃಖ ಮಾಡ್ವಳು
ಕಿತ್ತೂರ್ನಾಡೊಳು। ಬೇಡಿ
ಬಂದೆನ್ಹಿಂತದ ನಾನು ಬಂದಿನೊಳು। ಹೋಗೂ
ದೆಂದಳಲುತೆ ಈ ಕಿಷ್ಕಂಧದೊಳು। ಯೆಷ್ಟು
ಹಿಂದೆ ಮಾಡಿದ ಪಾಪ ಬಂದಿತೆನಗೆ ಭೋ
ರೆಂದೆನುತಳುತೆ ತಾ ಬಂದಳಂಗನಕೆ
ಕೊಂಡು ಹೊಂಗಲದಿ ಬರುವುತಲಿ ಮೇಣೆ
ದೊಳಗ। ಗಂಡನನು ನೆನೆವುತಡರಿದಳು
ತಿರುಗಿ ನೋಡಿದಳತ್ತೀ ಮುಖವ। ಸೊಸೆಯಾಗಿ
ಕಾಣಲಿಲ್ಲೆಳ್ಳಷ್ಟು ಸುಖವ
ಬಾಯಿದೆರೆದ್ಹೇಳಿದಳು ತಾಯಿ ಚೆನ್ನವ್ವನು
ದಯಮಾಡಿರೆಂದಳವರಿಗೆ
ಎತ್ತ ಒಯ್ವಿರಿ ನಾವಿನ್ನತ್ತಿ ಸೊಸಿಗಳಿಲ್ಲಿ
ಜತ್ತಿಲಿರುವೆವ್ಹತ್ತೆಗರೆವುತಲಿ। ಹಸ್ತ
ಎತ್ತಿ ಪೇಳುವೆ ನಿಮ್ಮ ಗೊತ್ತಿನಲಿ। ಈಗಿ
ರುತ್ತೇವೆಮಗೆ ಬಲು ವತ್ತರಲಿ
ದಯಮಾಡಿ ಬಿಡಿರೆಂದವರಿಗೆ ಪೇಳಿದರೆ
ನಯಗುಣ ದಿಸದಲೆ ತೆರಳಿದರು
ಬಂದರ್ಹೊಂಗಲವನ್ನು ಬಿಟ್ಟು। ವೀರವ್ವನ
ತಂದರಭಯವನು ಕೊಟ್ಟು॥
ಗಂಡ ಮಾವರ ಭಾಗ್ಯ ಉಂಡೇನೆಂದರೆ ಕುಂಪಣಿ
ದಂಡಿನೊಳು ಸಿಕ್ಕೆನೆನ್ನುತಲಿ
ಬರೆಯಲಿನ್ನೆಷ್ಟು ನಾ ಹಿರಿಯ ಮಾವನು ಗಳಿ
ಸಿರುವ ದೌಲತ್ತು ಈ ನರರೊಳಗೆ। ಕಾಣೆ

ಸುರಪ ದಾನವರೊಳು ಸುರರೊಳಗೆ। ಮಲ್ಲೇಂ
ದ್ರರ ಸರಿಯಿಲ್ಲೀ ಭೂತಳದೊಳಗೆ
ದಂಡಿನೊಳು ಸಿಕ್ಕೆನೆನ್ನುತಲಿ ವೀರವ್ವನು
ಗಂಡವೈಶ್ವರ್ಯ ಹೊಗಳುತಲಿ
ದುಃಖ ಮಾಡುತ ನಡೆದಾಳು। ಧಾರ್ವಾ
ಡಕ್ಕೋಗಿಳಿದು ಕುಳಿತಾಳು"[೮೮]

ತಪ್ಪಿಲ್ಲದೆ ನನ್ನನ್ನು ಕಿಲ್ಲೆದೊಳಗೆ ಇಟ್ಟಾರೆಂದು ದಪ್ಪನೆ ಎದೆ ಬಡಿದುಕೊಂಡು ಅಳುವಳು. ಇಂದಿಗೆ ಅತ್ತಿ ಮಾವರ ಪುಣ್ಯ ತೀರಿತು. ನಲ್ಲ ಮೈದುನರಿದ್ದರೆ ತನಗೆ ಈ ಗತಿ ಬರುತ್ತಿತ್ತೇ, ಸೃಷ್ಟಿಯೊಳಗೆ ಹೆಣ್ಣಾಗಿ ಹುಟ್ಟಬಾರದು ಎನ್ನುವಳು.

"ಅನ್ನ ತೊರೆವೆನು। ನಾನು
ಹುಟ್ಟಿ ಬಂದುದನರ್ಥ ಕೆಟ್ಟಿತಲ್ಲ। ಕುಂಪಣಿ
ದಿಟ್ಟರ ದಯವೇನು ಹುಟ್ಟಲಿಲ್ಲ। ಬಿಡು
ಬಟ್ಟಿಗಿನ್ನೇನಾದುದ್ಹೊಟ್ಟೆಯೊಳಗೆ ಕಿಚ್ಚು
ಹುಟ್ಟಿತು ಜೀವವ ಬಿಟ್ಟರೆ ಲೇಸು"[೮೯]

ಎಂದು ದುಃಖಿಸುವಳು ವೀರವ್ವ. 'ಶಿವಲಿಂಗರುರಸರ್ಜ' ಈ ಕಾವ್ಯದ ಕರ್ತೃ ಯಾರೆಂದು ತಿಳಿದು ಬಂದಿಲ್ಲ. ಶಿವಲಿಂಗರುದ್ರ ಸರ್ಜನಿಗೆ ಥ್ಯಾಕರೆ ಹಾಲಿನಲ್ಲಿ ವಿಷ ಬೆರೆಸಿ ಕುಡಿಸಿದನೆಂದು, ಈತನ ಹೆಂಡತಿ ವೀರಮ್ಮ ರಾಣಿಯ ಹೈದರಾಬಾದದ ಸಮೀಪದಲ್ಲಿದ್ದ ಶಮಶೇದಾಬಾದದ ಸಣ್ಣ ಸಂಸ್ಥಾನಿಕನ ಮಗಳು ಈಕೆಯ ಪತಿನಿಷ್ಠೆಯನ್ನು ಈ ಕಾವ್ಯ ಬಿಂಬಿಸುತ್ತದೆ. ಈರವ್ವನಿಗೆ ರಾತ್ರಿ ಕನಸೊಂದು ಬಿದ್ದಿದೆ ಆ ಕನಸನ್ನು ಅತ್ತಿ ಚೆನ್ನವ್ವನಿಗೆ ತಿಳಿಸುವಳು. ಅತ್ತಿ ರುದ್ರವ್ವನ ಅತ್ತಿ ಹೂವಿನ ಸೀರೆಯನ್ನು ಉಟ್ಟುಕೊಂಡಿರುವೆ, ಮುತ್ತಿನ ಸೆರಗಿಗೆ ಬೆಂಕಿ ಹತ್ತಿ ಎಷ್ಟು ನಂದಿಸಿದರೂ ಅದು ಆರಲಿಲ್ಲ. ಅತ್ತಿ ರುದ್ರವ್ವನ ಮುತ್ತಿನ ದಂಡೀ ಕಟ್ಟಿಕೊಂಡಿರುವೆ, ಮುತ್ತಿನ ತೊಂಡಲಾ ಕತ್ತರಿಸಿ ಬಿದ್ದು, ಎಷ್ಟು ಹುಡುಕಿದರೂ ಸಿಗಲಿಲ್ಲ ಎಂದು ಇದು ದುಃಸ್ವಪ್ನವೆಂದು ಶಿವಲಿಂಗರುದ್ರ ಸರ್ಜ ಹೋದ ಬಾಳಗುಂದ ಗುಡ್ಡಕ್ಕೆ ಇಬ್ಬರು ಹೋಗುವರು. ಅಲ್ಲಿ ಕೋಣೆಗೆ ಕೀಲಿ ಹಾಕಿದ್ದಾರೆ. ಒಳಗೆ ಅರಸ ಸಂಕಟದಿಂದ ಒದ್ದಾಡುತ್ತಿದ್ದಾನೆ. ತಾಯಿ, ಹೆಂಡತಿ ಕಂಡು ತಾಯವ್ವ ನಾನು ಉಳಿಯುವುದಿಲ್ಲ. ನನ್ನ ಹಾಗೂ ಹೆಂಡತಿಯನ್ನು ಆನೆ, ಅಂಬಾರಿ ಮೇಲೆ ಮೆರವಣಿಗೆ ಮಾಡಿದಂತೆ ನನ್ನ ಸತಿಗೆ ಪುತ್ರ ಜನಿಸುವೆಂಬ ಸಂಭ್ರಮದ ಕನಸು ಕಂಡೆ.

ನನ್ನ ಸತಿಯಳ । ನಿನ್ನ ಬಿಟ್ಹೋಗುದು ಥರಮಲ್ಲಾ
ಕಾಡ ಆಕಳ ಹಾಲಾ। ಕರಿ ಅಗ್ಗರಾಗ್ಯಾವಂದ
ಕಂರದ ನನಗವರು ಕುಡಿಸಿದ್ದಾರ॥[೯೦]

ಎನ್ನುವನು. ತಾಯವ್ವ ಮೊಸರು ಅಥವಾ ಹಾಲಾದ್ರೂ ಕೊಡು ಎಂದನು. ಅತ್ತೆ ಸೊಸೇರು ಎದೆ ಬಾಯಿ ಬಡಿದುಕೊಂಡು ಹೋಗಿ ಕೆಂದಾಕಳ ಕರೆಯಲು ಹೋದರೆ ಕೆಂದ ಆಕಳ ಕರ ಒದೆವುದು. ಬಿಳಿ ಆಕಳು ತೊರೆ ಬಿಡವಲ್ಲದು. ನಂತರ ಕರಿ ಆಕಳ ಹಾಲು ಕರೆದು ಅದಕ್ಕೆ ಸಕ್ಕರೆ ಬೆರೆಸಿ ರಾಯಗ ಕುಡಿಸುವರು. ಹಾಲು ಒಳಗೆ ಹೋಗಲಿಲ್ಲ. ತಾಯೀ ತೋಡಿಮ್ಯಾಲೆ ಹರಹರನೆಂದು ಪ್ರಾಣ ಹಾರ್‍ಯಾವಯ್ಯ ಆಗ ಇಬ್ಬರು ಎದೆ ಬಡಿದುಕೊಂಡು ಅಳುವರು. ಈರವ್ವ ತನ್ನ ಗಂಡನ ಶಿರವನ್ನು ತೊಡಿಮ್ಯಾಲ ಇಟ್ಟುಕೊಂಡು ದೇವಾ, ಮಾಲಿಂಗಸ್ವಾಮಿ ಮಾತಾಡು, ನೀನು ಗಂಡುಮಕ್ಕಳನ್ನು ಬೇಡಿ ಹೊಂಡದ ಬಸವಣ್ಣನಿಗೆ ಗುಂಡಗಡಿಗೆ ಮಾಡಿಸಿ ಕೊಡುವೆನೆಮದೂ, ಹೆಣ್ಣುಮಕ್ಕಳ ಬೇಡಿ ಕನ್ಯೆ ದ್ಯಾಮವ್ವಗ ಹೊನ್ನೀನ ಮೂಗುತಿ ಮಾಡಿಸಿ ಕೊಡುವೆನೆಂದು ಬೇಡಿಕೊಂಡಿರುವೆ. ಈ ಗಂಡುಮಕ್ಕಳ, ಹೆಣ್ಣುಮಕ್ಕಳ ಫಲವು ನಮಗಿಲ್ಲಾ ಎಂದು ದುಃಖಿಸುತ್ತಾ, ಅವರಾದಿ ಈರಪ್ಪ, ಅಂಖಡಗಟ್ಟಿ ಗುರುಸಿದ್ದಪ್ಪ, ಪಟ್ಟಣಶೆಟ್ಟಿ ಗುರುಸಿದ್ದಪ್ಪ, ಹುರಕಡ್ಲಿ ಮಲ್ಲೇಶಪ್ಪ, ಕನ್ನೂರ ಮಲ್ಲಪ್ಪ ಎಲ್ಲರನ್ನು ಮರೆಕರೆದು ದುಃಖಿಸುವಳು. ಶಿವಲಿಂಗರುದ್ರ ಸರ್ಜ ಸತ್ತ ಸುದ್ದಿ ಧಾರವಾಡಕ್ಕೆ ಮುಟ್ಟಿತು. ಥ್ಯಾಕರೆಸಾಬ ಬಂದು ಖಜಾನಿ ಕೋಣೆ ತೆಗೆದು ನೋಡಿ, ಹತ್ತು ತಿಂಗಳು ನಾನು ಗುತ್ತಿ ನಾಡಿನಲ್ಲಿದ್ದರೂ ಇಂಥ ಭಾರಿ ಸಂಪತ್ತನ್ನು ಕಂಡಿಲ್ಲವೆನುತ ತನ್ನ ಕೀಲಿ ಜೋಡಿಸ್ಯಾನ. "ಅವ ಇನ್ನ ಮಾಲಿನ ಮ್ಯಾಲ ನಿಂತು ಕಿಲಿ ಕಿಲಿ ತಾನು ನಗತಾನ ಈ ಸಂಸ್ಥಾನ ನಮ್ಮ ಸ್ವಾಧೀನ ಆದೀತಂದಾನ."[೯೧]

ರಾಯನ ಶವವನ್ನು ತೇರಿನಲ್ಲಿಟ್ಟು ಸಡಗರದಿಂದ ಸೋಮವಾರಪೇಟೆ, ಗುರುವಾರ ಪೇಟೆಯಲ್ಲೆಲ್ಲ ಮೆರವಣಿಗೆ ಮಾಡಿ, ಕಲ್ಲುಮಠಕ್ಕೆ ತಂದರು.

"ಹೈದರಾಬಾದ್ ನನ್ನಪ್ಪ ಕೊಟ್ಟ ಬುಗುಡಿ ಬಿಚ್ಚಬ್ಯಾಡಿರೆ
ನನ್ನಪ್ಪ ಕೊಟ್ಟ ನತ್ತ ನೀವು ಬಿಚ್ಚಬ್ಯಾಡಿರೆ
ನನ್ನಪ್ಪ ಕೊಟ್ಟ ಕಾಲುಂಗರ ಇನ್ನ ಬಿಚ್ಚಬ್ಯಾಡಿರೆ
ಈರವ್ವ ಚೀರ್‍ಯಾಳ ಮಕ್ಕಳಿದ್ದವ್ವಗಳಿರಾ ಇದರಿಗೆ ಬರಬ್ಯಾಡ್ರೆ
ಮುತ್ತೊದಿ ನೀ ಅಮ್ಮಗಳಿರಾ ನನ್ನ ಚಾಂಡಲಿ ಇದರಿಗೆ ಬರಬ್ಯಾಡೆ
ಮಣ್ಣಕೊಟ್ಟ ಎಲ್ಲಾರು । ಅರಮನಿಗೆ ಸಾಗಿ ಬರತಾರೆ"[೯೨]

ಎಂದು ದುಃಖಿಸುವಳು.

**ಕರಿಯಾಲೆ ಕಾಳಗ:** ಬಳ್ಳೋಡಿ(ಬೆಳವಡಿ) ಗ್ರಾಮದಲ್ಲಿ ತುರುಕಾರರು ದಂಗೆ ಹೊಡಿದಾಗ ಕಿತ್ತೂರಿನ ಸೈನ್ಯಾಧಿಕಾರಿ ರಾಮಯ್ಯನನ್ನು ಕಳಿಸಿದಾಗ, ಆತ ವೈರಿಗಳ ಕೈಗೆ ಸೆರೆಸಿಕ್ಕನು. ಆಗ ಚೆನ್ನಮ್ಮ ಸ್ವತಃ ಏರಿ ಹೋಗಿ ಚೌಬಾರಿಗೆ ಡೇರೆ ಹೊಡೆಸ್ಯಾಳು. "ಸೆರೆಯ ಹಿಡಿದವರನ್ನು ತರದಳೇ ರುಂಡವ। ಭರದಿಂದ ಬಿಡಿಸಿ ತರತಾಳೊ। ಕರಿಸ್ಯಾಳೊ ಮಂದಿನ್ನ ಕೊರಿಸ್ಯಾಳೊ ಕೈಕಾಲು। ತ್ವರದಿಂದ ಕಿತ್ತೂರಕ ಸಾಗ್ಯಾಳೊ"[೯೩] ಎಂದು ಚೆನ್ನಮ್ಮ ತುರುಕರನ್ನು ಸದೆಬಡಿದು, ರಾಮಯ್ಯನನ್ನು ಬಿಡಿಸಿಕೊಂಡು ಮರಳಿದಳು.

**ಕಿತ್ತೂರ ಮಿಂಚಿನ ಕಾಳಗ:** ರಾಣಿ ಚೆನ್ನವ್ವ ದತ್ತಕ ಮೊಮ್ಮಗನಿಗೆ ಪಟ್ಟಗಟ್ಟಿದ ಸುದ್ದಿ ತಿಳಿದ ಥ್ಯಾಕರೆ ದಂಡಿನೊಂದಿಗೆ ಬಂದು ಕಿತ್ತೂರಿಗೆ ದಾಳಿ ಮಾಡಿದ. ಆಗ ಕಿತ್ತೂರ ಸೈನಿಕರ ರಾಣಿ ಅಪ್ಪಣೆ ಮೇರೆಗೆ ವೈರಿಗಳ ಮೇಲೆ ಎರಗಿ ಥ್ಯಾಕರೆಯನ್ನು ಕೊಂದರು. ಈ ಸುದ್ದಿ ತಿಳಿದ ಮಂಡೇಲ ಸಾಹೇಬ ಕಂಪನಿಗೆ ಪತ್ರ ಬರೆದು ಹೆಚ್ಚಿನ ಸೈನ್ಯ ತರಿಸಿದನು. ಚೆನ್ನವ್ವ ತನ್ನ ಸೈನಿಕರಿಗೆ ಉಡುಗೊರೆ ನೀಡಿ ಹುರಿದುಂಬಿಸಿದಳು.

'ಹಿಮ್ಮತ ಬಾಳ ಹಿಡಿದಾಳಣ್ಣಾ।
ಹಿಂದ ಮುಂದ ನೋಡಲಿಲ್ಲ ಮಂದಿ ನುಣ್ಣಗೆ ಕೊಡ್ಡಾಕೆ
ಸದರಿನ ಮುಂದೆ ಸಾಲ ಹಂದರ ಬಾಜೂಕೆ
ಹಿರಿಯರಿಗೆ ಹಚ್ಚಡ ಮುಂಡಾಸ ಮುಯ್ಯಹಾಕಿ
ಸದರಿನ ಮೇಲ್ಪತ್ತಿ ಬುರರೆನಾ ಹಾಕಿ
ಹಿಮ್ಮತ ಬಹಳ ಹಿಡಿದಾಳೊ
ಚೆನ್ನವ್ವ ಮೊಮ್ಮಗ ಪಟ್ಟಗಟ್ಯಾಳೊ"[೯೪]

ಬ್ರಿಟಿಷರ ವಿರುದ್ಧ ತನ್ನ ಸೈನ್ಯವನ್ನು ಕಂಠಿಯಸರಾ, ಕರರೆ ತುರಾಯಿಗೆ, ವೀಳೆವ ಕೊಟ್ಟು ಬರುವಳು ಚೆನ್ನವ್ವ

**ವೀರರಾಣಿ ಚೆನ್ನವ್ವ** ಕಿತ್ತೂರ ರಾಜ್ಯ ನಮಗೆ ದೊರೆಯಬೇಕೆಂದು ನಿನ್ನ ಗಂಡ ಪತ್ರ ಬರೆದಿರುವನೆಂದು ಥ್ಯಾಕರೆ ಹೇಳಿದಾಗ, ಚೆನ್ನಮ್ಮ ಇವನನ್ನು ಹೊರಗೆ ನೂಕಿರೆಂದು ಅಗಸೆ ಬಾಗಿಲು ಹಾಕಿಸಿದಳು. ಥ್ಯಾಕರೆ ಯುದ್ಧದಲ್ಲಿ ಮಡಿದಾಗ ತನ್ನ ಸೈನಿಕರಿಗೆ ಬಗೆಬಗೆಯ ಉಡುಗೊರೆ ಕೊಟ್ಟಳು. ಜಾರ್ಜ್ ಮಂಡೇಲನ ಸೈನ್ಯ ಕಿತ್ತೂರನ್ನು ತಲುಪಿತು. ಜಾರ್ಜನು ಗಾಯಗೊಂಡನು. ಈ ಸುದ್ದಿ ತಿಳಿದ ಚಾಪ್ಲಿನ್ ಸಾಹೇಬ ಬಂದು ಕೋಟೆಯನ್ನು ಕೆಡವಿದ. ರಾಣಿಯನ್ನು ಅರಮನೆಯಿಂದ ಹೊರಹಾಕಿದ.

ಸೀಮೆಯಿಲ್ಲದ ಜಾಣೆ ಉಂಭೋಗ ಬರಕೊಟ್ಟು
ನೇಮದಿ ಅಪ್ಪನೆಗೊಂಡಾಳು। ಮಾ
ಗ್ರಾಮದೊಳಿರುವಂಥ ಬದುಕೆಲ್ಲ ಒಪ್ಪಿಸಿ
ತಾ ಮಾತ್ರ ಹೊಂಗಲಕೆ ನಡೆದಾಳು.[೯೫]

**ಚೆನ್ನಮ್ಮ ರಾಣಿ:** ರಾಣಿ ಚೆನ್ನಮ್ಮ ದರಬಾರ ನಡೆಸುತ್ತಿದ್ದಳು. ಥ್ಯಾಕರೆಯ ದಂಡು ಕಿತ್ತೂರನ್ನು ಸಮೀಪಿಸಿತ್ತು. ಒಂದು ದಿನ ಕನಸಿನಲ್ಲಿ ಮಲ್ಲಸರ್ಜ ಬಂದು, 'ಗಂಡುಡಿಗೆಯುಟ್ಟು ನೀ ಯುದ್ಧ ಮಾಡು' ಎಂದು ಹೇಳಿದನು. ಆಗ ರಾಣಿ ಸಂಗೊಳ್ಳಿ ರಾಯಣ್ಣ, ಅಂಕಲಗಿ ಅಡವೆಪ್ಪ, ಗೌಡರ ಬಸಪ್ಪ, ಅಂಬಡಗಟ್ಟಿ ಗುರುಸಿದ್ಧಪ್ಪ ಇವರಿಗೆಲ್ಲ ಪತ್ರ ಬರೆದು ತನಗೆ ನೆರವಾಗಲು ತಿಳಿಸಿದಳು.

ಸಾಹೇಬ ಕೈ ಮುಕ್ಕೊಂಡ ನಿಲ ನಿಂತ। ಚನ್ನವ್ವ ದಂಡಿನೊಳಗ ಹೋಗತಾಳೊ ಒಟ್ಟತಾಳೊ।
ಚನ್ನವ್ವ ಹಿಂದಕ್ಕ ಹೊಳ್ಳಿ ಬರತಾಳೊ। ಚನ್ನವ್ವ ಸಾಹೇಬನ ಹಂತೋಲಿ
ಬರತಾಳೂ । ಚೆನ್ನವ್ವ ಶರಣೆಂದು ಕತ್ತಿ ಹಇಡಿದಾಳೊ। ಮಲ್ಲಸರಜ್ಯಾ
ನಿನ್ನ ಪುಣ್ಯವು ಇರಲೆಂದಳು
ಚನ್ನವ್ವ ಗಂಡನ ಕತ್ತಿ ಹಿಡಿದಾಳೊ
ಚನ್ನವ್ವ ಸಾಹೇಬನ ಚಂಡ ಚಟ್ಟನೆ ಹೊಡಿದಾಳೊ
ಹಿಂದಕ್ಕೆ ಹೊರಳಿ ನೋಡಿದಾಳೊ। ಹಿಂದಕ್ಕ ನೀ ಹೊರಳಿ ನೋಡ್ಯಾಳೇ ಚೆನ್ನವ್ವ
ಸಾಹೇಬನ ಮಕ್ಕಳನ್ನ ನೋಡತಾಳೊ। ಹಡದವ್ವ ನಮ್ಮನ್ನ ಚಂಡಿಯ ಹೊಡಿಯ ಬ್ಯಾಡ
ಹಡದವ್ವ ನಮ್ಮನ್ನ ಸೆರಿಯ ಹಿಡಿಯಬೇಡ ನೀ ಹೇಳದಾಂಗ ಕೇಳತೇವ್ರು[೯೬]

ಎನ್ನುತ್ತಾರೆ. ಆಗ ಬಸಲಿಂಗಪ್ಪನನ್ನು ಕರೆದು ಇವರನ್ನು ನನ್ನ ಮಕ್ಕಳ ಸರಿಯಾಗಿ ನೋಡಿಕೋ ಎಂದು ಅಪ್ಪಣೆ ಕೊಟ್ಟಳು.

**ಕಿತ್ತೂರಿನ ಮುತ್ತಿಗೆ :** ಥ್ಯಾಕರೆ ಮರಣದ ನಂತರ ಯುದ್ಧವನ್ನು ಇದು ಚಿತ್ರಿಸುತ್ತದೆ. ಕರ್ನಲ್ ರಾಣಿಯ ವಿರುದ್ಧ ಯುದ್ಧ ಸಾರಿದನು. ಮದನ ಬಾವಿ ಹತ್ತಿರ ಕಾಳಗ ಏರ್ಪಟ್ಟಿತು. ರಾಣಿ ಅವರಾದಿ ಇರಪ್ಪನನ್ನು ಕರೆಸಿ, ನಿಪ್ಪಾಣಿಗೆ ಪತ್ರ ಬರೆದಳು. ಒಕ್ಕುಂದ, ಬೆಳ್ವೋಡಿ, ದೇಮಟ್ಟಿ, ಎಡಾಲ, ಸಾಣಿಕೊಪ್ಪ, ಸಾವಲಮಟ್ಟಿ, ತಪರಗುಂದ, ಕಾದರೊಳ್ಳಿ, ಕರ್ಚಲಗಟ್ಟಿ, ಹಣ್ಣಿಕೇರಿ, ಬನ್ನಿಕೊಪ್ಪ, ಅಂಬಡಗಟ್ಟಿ, ಸವಣೂರು, ಶಿರಹಟ್ಟಿ, ಸೀಗಿಗಟ್ಟಿ, ಹೂಲಿಕಟ್ಟಿ, ಸೀಗೆಹಳ್ಳಿ, ಮೇಟ್ಯಾಲ, ದೇಮಟ್ಟಿ, ಕೊದಾನಪುರ. ನಂದಿಹಳ್ಳಿ, [illegible] ಗ್ರಾಮಗಳ ದಂಡು ನೆರವಿಗೆ ಬರಬೇಕೆಂದು ತಿಳಿಸಿದಳು. ೧೦ ಸಾವಿರ ದಂಡು ಬಂದಿತು. ಬಳ್ಳೋಡಿ ವೀರಣ್ಣನನ್ನು ಧ್ಯಾನಿಸಿ ಯುದ್ಧ ಆರಂಭಿಸಿದಳು.

**ಚನ್ನಮ್ಮ ರಾಣಿಯ ಕೊನೆಯ ಕಾಳಗ:** ಥ್ಯಾಕರೆ ಮರಣದ ನಂತರ ಅಧಿಕಾರಿಗಳಾದ ಮಿ.ಸ್ಟೀವನ್‌ಸನ್, ಮಿಸ್ಟರ್ ಇಲಿಯಟ್‌ರನ್ನು ಸೆರೆಹಿಡಿದಳು. ಸರ್‌ಥಾಮಸ್ ಮನ್ರೋನ ಅಣ್ಣನ ಮಗನಾದ ಮಿ.ಮನ್ರೋ ಕಾಳಗದಲ್ಲಿ ಹತನಾದನು. ಕರಣಿಕ ನರಸಿಂಗರಾಜ ಎಂಬುವನಿಗೆ ಲಂಚ ಕೊಟ್ಟು, ಕೋಟೆ ಒಳಗಿನ ರಹಸ್ಯ ತಿಳಿದು, ಕಿತ್ತೂರಿಗೆ ಧಾವಿಸಿದರು. ಕೊನೆಗೆ ಚೆನ್ನಮ್ಮ ರಾಣಿ ಸೋತಳು. ಅವಳನ್ನು ಹೊಂಗಲದ ಕೋಟೆಯಲ್ಲಿಟ್ಟು, ಬ್ರಿಟಿಷ್ ಕಾವಲಿಟ್ಟರು. ಚೆನ್ನವ್ವ ತಾಳಿ ಶಕ್ತಿ ಅವತಾರ। ಉಗ್ರರೂಪ ತಾಳ್ಯಾರ ಬಹುಭಾರ"[೯೭]

**ಕಿತ್ತೂರ ರಾಣಿಯ ಅಂತ್ಯ:** ಕಿತ್ತೂರ ಸಂಸ್ಥಾನ ಬ್ರಿಟಿಷರ ವಶವಾದ ನಂತರ ಚೆನ್ನಮ್ಮನ ಸೊಸೆಯರಾದ ವೀರಮ್ಮ, ಜಾನಕಿಬಾಯಿಯರನ್ನು ಹೊಂಗಲಕೆ ಒಯ್ದರು. ಜಾನಕಿಬಾಯಿ ಹೊಂಗಲದಲ್ಲೆ ತೀರಿಕೊಂಡಳು. ವೀರಮ್ಮನನ್ನು ಧಾರವಾಡಕ್ಕೆ ತಂದರು. ತರುವಾಗ ದಾರಿಯಲ್ಲಿ ಆನಿಗೋಳದ ಹತ್ತಿರ ಕಿತ್ತೂರ ದಂಡು ಎದುರಾಯ್ತು. ಆದರೆ ಅವರ ಆಟ ನಡೆಯಲಿಲ್ಲ. ಮುಂದೆ ವೀರಮ್ಮನನ್ನು ಕುಸುಗಲ್ಲ ಕಿಲ್ಲೆಯಲ್ಲಿಟ್ಟರು. ಇವಳು ಕೃಶಳಾದ್ದರಿಂದ ಧಾರವಾಡದ ಯಾಲಕ್ಕಿ ಶೆಟ್ಟರ ಮನೆಗೆ ತಂದರು. ಕೆಲ ಕಾಲದ ನಂತರ ಆಕೆ ಮರಣ ಹೊಂದಿದಳು.

**ಕಿತ್ತೂರ ಚೆನ್ನವ್ವನ ಸೊಸೆ:** ಕಿತ್ತೂರ ಚೆನ್ನಮ್ಮನ ಸೊಸೆ ಹೊಂಗಲ ಬಿಟ್ಟು ಹೋಗುವಾಗ ಬಹಳ ದುಃಖ ಮಾಡುವಳು. ಪಾಂಡವರಿಗೆ ವನವಾಸ ಬಂದಂಥ ಸ್ಥಿತಿ ತನಗೆ ಒದಗೀತು. ಪಾಪಿ ದುಶ್ಶಾಸನ ದ್ರೌಪತಿ ಸೀರೆ ಎಳೆವಾಗ ಭೂಪತಿಗಳೈವರು ಇದ್ದೇನು ಮಾಡಿದರು. ನಮ್ಮಂಥ ಪಾಪಿಗೂ ಯಾರಿಲ್ಲ ಎಂದು ಈರವ್ವ ದುಃಖಿಸುವಳು. ಇಡೀ ರಾಜ್ಯದ ವಸ್ತು ಒಡವೆಗಳೆಲ್ಲ ಹಂಚಿ ಹೋದವೆಂದು ದುಃಖಿಸುವಳು. ಈರವ್ವನನ್ನು ಹೊಂಗಲದಿಂದ ಧಾರವಾಡಕ್ಕೆ, ಧಾರವಾಡದಿಂದ ಕುಸುಗಲ್ಲಿಗೆ ಕರೆದೊಯ್ದರು. ಚಿಂತೆಯಿಂದ ಈರವ್ವ ಅನ್ನ, ನೀರು ಬಿಟ್ಟಳು. ಕೈಕಾಲು ಸಣ್ಣವಾದವು. ಸಾಂಗ್ರಾಣಿ ಬ್ಯಾನಿ ಬಂದು ಸರ್ವಾಂಗವೆಲ್ಲ ಒಣಗಿಸಿ ಸುಣ್ಣವಾದವು. ಆಗ ದೇಹ ಬಿಡುವಳೆಂದು ಮತ್ತೆ ಧಾರವಾಡಕ್ಕೆ ತಂದರು. ಪ್ರಾಣ ಬಿಟ್ಟಳು. ಆಕೆ ಶವ ಶೃಂಗಾರಗೊಂಡದ್ದನ್ನು ಹೀಗೆ ವರ್ಣಿಸಿದ್ದಾರೆ.

"ಸತ್ತಂತ ಶವನೆಲ್ಲ ಎತ್ತಿ ಕುಂಡ್ರಿಸಿ
ಮುಖವ ದೊಳಿದು ವಿಭೂತಿ ಮೇಲೆ ಧರಿಶಾರೂ
ಅತ್ತಿ ಚೆನ್ನವ್ವ ಉಡುವ ಮುತ್ತಿನ ಸೆರಗಿನ ಸೀರಿ
ಉತ್ತಮರು ನೀರಿಗ್ಹೊದ ಉಡಸ್ಯಾರೂ
ಕಸ್ತೂರಿಗಂಧವ ಸೂಸಿ ವಸ್ತ್ರಾದ ಪೆಟ್ಟಿಗಿ ತರಿಸಿ
ವಿಸ್ತರಿಸಿ ಮೈಮೇಲೆ ಇಡಸ್ಯಾರೂ

ಹತ್ತುಯೆಂಟು ಸಾವಿರದ್ದೊನ್ನಿನ ರತ್ನವ

ತೆತ್ತಿಸಿದ ನತ್ತು ಮತ್ತ ಮೂಗಿನೊಳಗ ಇಡಿಸ್ಯಾರೂ

ಬುಕ್ಕಿಟ್ಟ ಊದಿನಕಡ್ಡಿ

ಲೆಕ್ಕವಿಲ್ಲದ ಸುಡುವುತಲೆ ಕಂಚಾರ್ಲೆ

ಕಳಸ್ಗಿಂಡಿ ತುಂಬಿಟ್ಟರೂ

ಪುರಾಣ ಪುಸ್ತಕ ಓದುವಂಥ

ಶಾಸ್ತರ ಕಥಿಯ ನಡಸುವಂಥ"[೯೮]

ನಾಡಗೌಡ, ಜಂಗಮರು, ಮಹಾನಾಡ ಜನರು ಕೂಡಿ ಕಣ್ಣೀರು ಸುರಿಸಿ ದುಃಖ ಮಾಡುವರು.

**ಈರವ್ವನ ದುರಂತ ಮರಣ:** ಕುಸುಗಲ್ಲಿನ ಕೋಟೆಯಿಂದ ಈರವ್ವನನ್ನು ಧಾರವಾಡಕ್ಕೆ ಕರೆದೊಯ್ಯುವಾಗ ಉಳವಿ ಚನ್ನಬಸವಣ್ಣನ ಗುಡಿಯೊಳಗೆ ಇವಳ ಮೇಣೆ ಇಳುಹಿ ಬೇಬರ್ ಸಾಹೇಬ ಗೌಳಿಗರಲ್ಲಿ ಹಾಲು ತಂದು ಒಂದೊಂದೇ ವಿಷದ ಗುಳಿಗೆ ಹಾಕಿ ಕುಡಿಸಿದ. ಈರವ್ವ ನಿಚ್ಚಣಿಕೆಯೇರಿ, ತನ್ನ ಕಿತ್ತೂರ ನೋಡಿ ಅತ್ತಳು. ವಿಷ ಮೈಯನ್ನೆಲ್ಲ ಆವರಿಸಿ ತೀರಿಕೊಂಡಳು.

"ಬೇಬರ ಸಾಹೇಬ ಒಂದೊಂದ ಈರವ್ವಗ

ಕೊಡತಾನ। ಈರವ್ವ ನಾಲಿಗಿ ಬುಡಕಿಟ್ಟು ಸರಿಸ್ಯಾಳ

ಅತ್ತಲಾಗ ಆರುತಾಸು ಇತ್ತಲಾಗ ಆರು ತಾಸು

ಈರಾ ಈರಾ ಅಂತ ಕರಿತಾನ।"[೯೯]

ಈರವ್ವನಿಗೆ ಯಾಕಪ್ಪ ಎನ್ನುವ ಧ್ವನಿಯಿಲ್ಲ. ಬೇಬರ ಸಾಹೇಬ ಅವಳಿನ್ನೂ ಸತ್ತಿಲ್ಲ ಎನ್ನುವ ಗೌಳಿಗರಲ್ಲಿ ಹಾಲು ತಂದು, ಹಾಲಿನಲ್ಲಿ ಬೆರೆಸಿ ವಿಷದ ಗುಳಿಗೆ ಕುಡಿಸ್ಯಾನ "ಹತ್ತ ಕಾಲ ನಿಚ್ಚಳಿಕೆ ಹತ್ತಿ ಈರವ್ವ ತನ್ನ ಸೀಮೆ ಕಿತ್ತೂರ ವಾಡೇಕ ದಿಕ್ಕ ಇಲ್ಲದ್ಹಾಂಗ ಆತೆ ಎಂದು ಚಿಂತಿಸುವಳು. ಈಕೆ ಗೋಡೆಗೆ ಹಾಯ್ದು ಅಳುವಳು. ನನ್ನ ಬೆನ್ನಿಗೆ ಒಬ್ಬ ಅಣ್ಣ ಅಥವಾ ಒಬ್ಬ ತಮ್ಮನಿದ್ದರೆ ಹೀಗಾಗುತ್ತಿತ್ತೆ ಎಂದು ದುಃಖಿಸುವಳು. ಅತ್ತಲಾಗ ಆರು ತಾಸು ಇತ್ತಲಾಗ ಆರು ತಾಸು ಈರವ್ವ ಜೀವ ಬಿಡುತಾಳೆಂದು ಬೇಬರ ಸಾಹೇಬ ನಗತಾನ.

**ಕಿತ್ತೂರ ಕೊನೆಯ ಕಾಳಗ:** ಕಿತ್ತೂರ ಸಂಸ್ಥಾನ ಬ್ರಿಟಿಷರ ವಶವಾದ ನಂತರ ಆ ನಾಡಿನ ಅಭಿಮಾನಿಗಳು ಬ್ರಿಟಿಷರನ್ನು ಎದುರಿಸುವ ಸಾಹಸ ಮಾಡಿದರು. ರಾಯಣ್ಣನ ಅಜ್ಜ ರಾಗಪ್ಪ. ಈತನ ಶೌರ್ಯಕ್ಕೆ ಮೆಚ್ಚಿ 'ಸಾವಿರ ಒಂಟೆ ಸರದಾರ' ಎಂದು ಬಿರುದಿತ್ತು. ರಾಯಣ್ಣನು ಅಂಥ ಶೌರ್ಯವನ್ನು ಹೊಂದಿದ್ದನು. ಸ್ಥಳೀಯರಾದ ಖೋದಾನಪೂರ ಲಿಂಗನಗೌಡ, ನೇಗಿನಹಾಳ,

ವೆಂಕಪ್ಪಗೌಡ, ಸಂಗೊಳ್ಳಿ ಕುರಕರನಿ ಬಾಳಪ್ಪ, ರಾಯಚೂರ ಜಿಲ್ಲೆ ಹಚ್ಚೊಳ್ಳಿ ಕೃಷ್ಣರಾವ್ ಇವರು ರಾಯಣ್ಣನನ್ನು ಹಿಡಿದುಕೊಡಲು ಸಹಾಯ ಮಾಡಿದರು. ಹೊಂಗಲದರಮನೆಯಲ್ಲಿ ದುಃಖದಿಂದ ಇರುವ ಚೆನ್ನವ್ವ ರಾಯಪ್ಪ ಭೇಟಿಯಾಗಿ

"ಹಡದವ್ವ ನಿನ್ನ ಪಾದ ಹಿಡದ ಹೇಳತೇನು ನಾನು
ಪೊಡವಿ ಪತಿ ನಮ್ಮ ತಂದಿ ಆಡಿಗ್ಯಾನ
ಯಾಕ ಅಳತಿ ನನ್ನ ತಾಯಿ ನನ್ನ ಮೇಲಿರಲಿ ನಿನ್ನ ಮಾಯೆ
ವ ತನಕ ಬಂದದ್ದೇನ ಮನ್ನಾಯಿ"[೧೦೦]

ಎನ್ನುತ ತಾಯಿ ಪಾದಕ್ಕೆರಗಿ ಸಾಗುವನು.

**ಕಿತ್ತೂರ ಸಂಸ್ಥಾನ ಸಾಹಿತ್ಯ ಭಾಗ. ೨**

ಮುನವಳ್ಳಿ ನೀಲಕಂಠಾರ್ಯನಿಂದ ರಚಿತವಾದ ಹಲವು ಪದಗಳು ಈ ಕೃತಿಯಲ್ಲಿವೆ. ಈತ ಮಲಸರ್ಜನ ಸಮಕಾಲೀನ. ಶಕ ೧೭೨೫ರಲ್ಲಿ ಮಲ್ಲಸರ್ಜನ ಅರಮನೆಯಲ್ಲಿ ಜರುಗಿದ 'ಬಸವ ಪುರಾಣ' ಪ್ರವಚನವನ್ನು ಕಣ್ಣಾರೆ ಕಂಡು 'ಮಲ್ಲೆಂದ್ರ ಭಕ್ತಿ ತರಂಗಿಣಿ'ಯಲ್ಲಿ ವರ್ಣಿಸಿದ್ದಾನೆ.

ಮಲ್ಲಸರ್ಜನ ರಾಣಿ 'ರುದ್ರಾಂಬೆ'ಯ ಸಮಾಧಿ ಮಲಪಹಾರಿ ನದಿತೀರದಲ್ಲಿರುವ ಸೂಚನೆಯನ್ನು ೬೮ನೇ ಪದ್ಯದಲ್ಲಿ ಕೊಡಲಾಗಿದೆ. ಆಕೆಯ ರೂಪದ ಬಗ್ಗೆಯೂ ವಿವರಣೆಗಳಿವೆ.

"ನೋಡಿರೆ ಕಿತ್ತೂರ ನಾಡಿನೊಡೆಯ ಚಂದ್ರ
ಚೂಡಾರ್ಕನ ಮಲ್ಲೇಂದ್ರನ। ನೃಪಕುಲ ಚಂದ್ರನ
ಸದ್ಗುಣ ಸಾಂದ್ರನ
ಕೀರ್ತಿಪಾತ್ರನ। ಸಚ್ಚರಿತ್ರನ
ಪುಣ್ಯಗಾತ್ರನ। ಭಕ್ತಿ
ಗೀಡಾಗಿ ಶ್ರಾವಣದೊಳು ಪಾದಪೂಜೆಯ
ಮಾಡುವ ಮಹಾನಂದವ। ನಾನಾವಿಧ ಚಂದವ
ಚಮತ್ಕಾರದಂದವ। ಕೂಡಿಹ ಗಣವೃಂದವ ॥ಪ॥

ಧರೆಗೆ ದಕ್ಷಿಣಕಾಶಿ ಸರಿಯಾದ ಪಂಪಾಖ್ಯ
ಪುರಕೆ ದಕ್ಷಿಣದಿಶೆಯೊಳಗಿರುವ
ಹರಶರನರ ಸರಣಿಯೊಳು ಕಲ್ಯಾಣವ
ಮರೆಸುವ ಭಕ್ತಿಭಾವದಿ ಮೆರೆವ

ಸುರಪುರದಮಲ ಸಿರಿಯನು ಬೆರೆವ। ಪರಿ
ಪರಿಯ ಸೌಭಾಗ್ಯ ಸಾಧನದಿರವ। ತತ್ಪುರವ ಪಾಲನೆಗೈವ
ಕಾಮಿಸಿದರರ್ಥವನೀವ। ಕಳಕೋವಿದ ಭಾವ
ಸರಸಸುಂದರ। ಸುಖಮಂದಿರ। ಭೂಪುರಂದರ॥
ಗಿರಿಶ ಪೂಜಾ ಧುರಂಧರ। ರಿಪುಕುಲ ಭಯಂಕರ
ಸತ್ಕೀರ್ತಿಕಲಾಪನ। ಶಾಂತಿಯಲಿ ನಿಶಾಪನ
ಶಮಶರಜಂಗ ಭೂಪನ ॥೧॥

ಶ್ರಾವಣಬರೆ ಪೂರ್ವಾವನಿವರರು ಸ
ದ್ಭಾವದಿ ಪಾದಪೂಜೆ ಮಾಡುವರು
ಕೇವಲ ಶ್ರೀ ಜಂಗಮಾವಳಿ ಸನ್ಮಹಿ
ಮಾವಲಂಬನರೆಂದು ನೋಡುವರು
ಸೇವಿಸಿ ಶಿವರೆಂದು ಭಾವಿಸಿ ಸದ್ಭಕ್ತಿ
ತೀವಿ ಮೃಷ್ಟಾನ್ನವ ನೀಡುವರು।
ವಸ್ತ್ರಾದಿಗಳ ಕೊಡುವರು। ಸತ್ಕೀರ್ತಿಯ ಪಡೆವರು।
ವೀರತ್ವದಿ ನಡೆವವರು। ಶಿವಭಕ್ತರು
ಸತ್ಯಾಸಕ್ತರು। ಜೀವನ್ಮುಕ್ತರು। ಈ
ವಿಧವಾದ ಭೂವಲಯ ವಿನೋದವ
ನಾವ ಮೊದಲು ಮಾಡಿದುದಿಲ್ಲ। ನೋಡಿದವರು
ಮುನ್ನಿಲ್ಲ ಪ್ರೌಢಗೆ ನಾಡೆ ಸರಿಯಿಲ್ಲ ॥೨॥

"ತರಣಿಜಸಮದೃಷ್ಟ ಪರಿಪಂಥಿ ಕರದೊಳು
ದೊರೆಯಲು ದೊರೆ ಮಲ್ಲೇಂದ್ರನು
ಗಿರಿಶಂಕರ ಸರಸಿರುಹ ಕಪಾಲದೊಳಿರುತ್ತಲು
ಭೂಮೀಂದ್ರನು। ಕರತಳ ಲಿಂಗದಿ ಬೆರೆದ ನೀಲಾಂಬೆಯ
ತೆರದ ನೀಲಾಂಬೆಯಾತ್ಮಜೆ ತಾನು।
ರುದ್ರಾಂಬೆ ರೂಪದಿ ರಂಬೆ।
ಚರಪದ ಕಂಜರೋಲಂಬೆ। ವಿಲಸದ್ಗುಣ ನಿರಕುಂಬೆ।
ಪತಿ ಬರಲೆಂದು। ಸ್ಮೃತಿಯೊಳು ಸಂದು। ವ್ರತದೊಳು ನಿಂದು।

ಬರಲು ಕಿತ್ತೂರಿಗೆ ವರ ಮಡಿವಾಳಾಖ್ಯ
ಗುರುಪಾದ ಪೂಜಿಸಿ ನಲವಿಂದ
ಗುರುತವ ಪೇಳಲದರಂದ। ಗುಣಾರ್ಣವ ತಾ ಬಂದ ॥೩॥[೧೧೧]

ಮಾತೆ ರುದ್ರಾಂಬೆ ಪಾಲಿಸು ಮನೋರಥವಿತ್ತು।
ಪ್ರೀತಿಯಿಂ ಶಿವಲಿಂಗರುದ್ರ ಭೂವರನಂ ॥ಪ॥

ಸೋಮವಾರವ್ರತದಿ ಸೀಮಂತಿನಿ ದೇವಿ
ಪ್ರೇಮದಿಂ ಚಂದ್ರಾಂಗದನ ಬರಿಸಿದಂತೆ
ಶ್ರೀಮಲ್ಲಭೂಮೀಂದ್ರನಂ ತಪಿಸಿ ಬರಿಸಿದಿಮ
ಹಾಮಹಿಮೆ ಮಂಗಲಪುದೆ ಮಹಾದೇವಿ ॥೧॥

ಸುರರಕ್ಷಣಕೆ ಸುಧಾಕರ ಮೌಲಿಯ ಗಜೆಯೊಳ್
ಬೆರಸಿ ಸುಕುಮಾರನಂ ಪಡೆದ ತೆರದಿ।
ಕರುಣಾಬ್ದಿ ಮಲ್ಲಭೂವರನ ಯೋಗದಿಂದ ಸುಂ
ದರ ಸುತನ ಸುಜನ ರಕ್ಷಣಕೆಂದು ಪಡೆದಿ ॥೨॥

ಕಲುಷಾಪಹಾರೀ ಸರಿತ್ತೀರದೊಲು ನೆಲಸಿ।
ಸತಿ ಸಂತಸಂಗೊಳಿಪೆ ಸಕಲಾರ್ಥವ॥
ಬಲವತ್ತುವರ ಭಾಗ್ಯನಿಲಯ ಸಿದ್ದೇಶಪದ
ಜಲಜಾರ್ಚಕಣೆ ಮಹತ್ಥಲವ ಭುಜಬಲವ ॥೩॥[೧೧೨]

ಎಂಬ ಪದ್ಯವು ರಾಣಿ ರುದ್ರಾಂಬೆಯ ವ್ರತನಿಷ್ಠೆಯ ವಿವರಣೆಯನ್ನು ಒದಗಿಸುತ್ತದೆ.

ನೀಲಾಂಬೆ ಕರುಣಾಸಾಲಂಬೆ ಸಲಹು ಸ
ಲ್ಲೀಲೆಯಿಂ ಶಿವಲಿಂಗರುದ್ರ ಭೂವರನಂ ॥ಪ॥

ಗಿರಿಜೆಯ ಹಿಮನಗವರ ಮೇನಕೆಯರ್ಪಡೆದು।
ಪರಮ ವೈಭವದಿ ಶಂಕರಗಿತ್ತ ತೆರದಿ।
ಸರಸ ಸಲ್ಲಕ್ಷಣೋತ್ಕರೆ ರುದ್ರಾಂಬೆಯ ಪೆತ್ತು
ಧರಣೀಂದ್ರ ಮಲ್ಲೇಂದ್ರಗಿತ್ತು ಕೀರ್ತಿಯುನಲುತ ॥೧॥
ವೀರಶೈವ ಕ್ರಿಯಾಚಾರವನು ಸಾರವನು
ಚಾರು ಗುರುಲಿಂಗ ಜಂಗಮ ಮುಖಾಷ್ಟವನು

ಪೂರಲಿದು ಮಹಿಮ ಗಣವಾರ ಕಾಮಿತಕಲ್ಪ
ಭೂರುಹಳೆನಿಸಿ ಕಿತ್ತೂರೊಳ್ ಪೆಸರ್ವಡೆದ ॥೨॥

ನೀಲಾಂಬಿಕಾಭಿದಕೆ ಪೋಲಿಸಲ್ ಸಾಮ್ಯಚರ
ಜಾಲ ಜಗತಿಯೊಲು ಬಣ್ಣಿಪರು ಬಲ್ಲವರು।
ಆಲಯದೊಳು ಭವದ್ಬಾಲಕರೋಲೆನ್ನ
ಪಾಲಿಸಿದಿ ಮೇಲೆ ಸಿದ್ದೇಶಪದದೊಳು ನಿಂದ ॥೩॥[೧೦೩]

ಈ ಪದ್ಯವು ರಾಣಿ ರುದ್ರಾಂಬೆಯ ಗುರು-ಲಿಂಗ-ಜಂಗಮ ನಿಷ್ಠೆಯನ್ನು ಕಿತ್ತೂರಿನೊಳಗೆ ಪಸರಿಸಿದ ರಾಣಿಯ ಹೆಗ್ಗಳಿಕೆಯ ಪ್ರತೀಕವಾಗಿದೆ.

### ೪.೩. ಧಾರ್ಮಿಕ ಅಧ್ಯಯನ

ಪ್ರಾಚೀನ ಕಾಲದಿಂದಲೂ ಕರ್ನಾಟಕವು ವೈದಿಕ ಸಂಸ್ಕೃತಿಯ ಗಾಢ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣುತ್ತೇವೆ. ವೈದಿಕ ಸಂಸ್ಕೃತಿಯಲ್ಲಿಯ ಚಾತುವರ್ಣ ಪದ್ಧತಿಯು ಕ್ರಮೇಣ ಜಾತಿಗಳಾಗಿ ಪರಿಣಮಿಸಿ, ಸಮಾಜದಲ್ಲಿ ಶೋಷಣೆಗೆ ದಾರಿ ಮಾಡಿಕೊಟ್ಟದ್ದನ್ನು, ಶೋಷಣೆ ಹೆಚ್ಚಾದಾಗ ಹಲವು ಧರ್ಮಗಳು ಜನ್ಮ ತಳೆದು ಸಮಾಜದಲ್ಲಿ ತಮ್ಮ ಪ್ರಭಾವ ಬೀರಿರುವುದನ್ನು ಕಾಣಬಹುದು. ವೈದಿಕ ಧರ್ಮದ ಹಿನ್ನೆಲೆಯಲ್ಲಿ ಶೈವ, ವೈಷ್ಣವ ಧರ್ಮಗಳು ಹೊಸ ಸಿದ್ಧಾಂತಗಳಿಗೆ ಮಾರು ಹೋದವು. ಇವೆಲ್ಲವುಗಳಿಂದ ಬೇಸತ್ತ ಜನ ಸಮೂಹ ಹೊಸ ಧರ್ಮ, ಹೊಸ ಸಮಾಜ, ಹೊಸ ಸಿದ್ಧಾಂತಗಳೆಡೆಗೆ ಮುಖ ಮಾಡಿತು. ಇಂಥ ಸಂದರ್ಭದಲ್ಲಿ ಜನತೆಯ ನೋವುಗಳಿಗೆ ಸ್ಪಂದಿಸಿದ ೧೨ನೇ ಶತಮಾನ ಜನತೆಯ ಮೆಚ್ಚುಗೆ ಗಳಿಸಿತು.

'ಧರ್ಮೋ ರಕ್ಷತಿ ರಕ್ಷಿತಃ' ಎಂಬಂತೆ ಧರ್ಮವನ್ನು ರಕ್ಷಿಸಿ, ಸರ್ವಧರ್ಮ ಸಮಾನತೆಯನ್ನು ಸಾಧಿಸಿದ ಕೀರ್ತಿ ಲಿಂಗಾಯತ ರಾಣಿಯರದಾಗಿದೆ. ರಾಣಿಯರು ಜೈನ, ವೈಷ್ಣವ, ಶೈವ, ಲಿಂಗಾಯತ, ಇಸ್ಲಾಂ, ಕ್ರೈಸ್ತ ಧರ್ಮಗಳ ಪೋಷಕರಾಗಿದ್ದರು.

ರಾಜನಿಗಿಂತ ಧಾರ್ಮಿಕ ಕಾರ್ಯದಲ್ಲಿ ರಾಣಿಯರದೇ ಒಂದು ಕೈ ಮುಂದಿದೆ ಎಂದರೆ ತಪ್ಪಾಗದು. ರಾಣಿಯರು ದೈವಭಕ್ತಿ ಶ್ರದ್ಧೆಯಿಂದ ತೀರ್ಥಯಾತ್ರೆ, ದೇವಾಲಯಗಳ ನಿರ್ಮಾಣ, ದಾನದತ್ತಿ ಹೀಗೆ ಹತ್ತು ಹಲವಾರು ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ದಾನದತ್ತಿಗಳಿಂದ ಶ್ರೇಯಸ್ಸು, ಯಶಸ್ಸು, ಆಯಸ್ಸು ಹೀಗೆ ಹತ್ತು ಹಲವು ಸಕಲ ಸಂಪತ್ತು, ಸಮೃದ್ಧಿಗಳು, ಒದಗುತ್ತವೆಂಬ ನಂಬಿಕೆ ಸಮಾಜದಲ್ಲಿ ಗಾಢವಾಗಿತ್ತು.

### ೪.೩.೧. ಜೈನಧರ್ಮ

ಪ್ರಾಚೀನ ಜಾಗತಿಕ ಧರ್ಮಗಳಲ್ಲಿ ಒಂದಾದ ಜೈನಧರ್ಮ ಉತ್ತರ ಭಾರತದಲ್ಲಿ ಹುಟ್ಟಿ, ದಕ್ಷಿಣ ಭಾರತದಲ್ಲೆಲ್ಲಾ ಹರಡಿತು. ಮಹಾವೀರನಿಂದ ಪ್ರವರ್ಧಮಾನಕ್ಕೆ ಬಂದಿತು. ಧರ್ಮಗಳು ರಾಜಕೀಯ ಪೋಷಣೆಯಿಂದ ಬೆಳೆದು ಬಂದಿರುವವು. ಧರ್ಮ ಎಂಬುದು ಕೆಲವೇ ಜನರ ಆಚರಣೆಯ ಸಂಕೋಲೆಯಲ್ಲಿ ಸಿಲುಕಿ, ಜನಸಾಮಾನ್ಯರಿಂದ ದೂರ ಸರಿಯುತ್ತಿದ್ದ ಸಂದರ್ಭದಲ್ಲಿ ಜೈನಧರ್ಮ ತನ್ನ ಕಠಿಣ ಆಚರಣೆಗಳಿಂದ ಜನಸಾಮಾನ್ಯರನ್ನು ತಲುಪುವಲ್ಲಿ ವಿಫಲವಾಯಿತು. ಶೈವಧರ್ಮ ಹಲವು ಪಂಥಗಳಾಗಿ ಒಡೆಯಿತು. ಶೈವ, ವೈಷ್ಣವ ಧರ್ಮಗಳು ಪರಸ್ಪರ ಸ್ಪರ್ಧೆಯಿಂದ ಸತ್ವಹೀನವಾದವು. ಇಂಥ ಸುಸಂದರ್ಭದಲ್ಲಿ ಶರಣಧರ್ಮ ಹೊಸ ರೂಪ ಪಡೆಯಿತು.

ಕಲ್ಯಾಣ ಚಾಲುಕ್ಯರ ಅರಸ ಇಮ್ಮಡಿ ಜಯಸಿಂಹನು 'ಪುಷ್ಪಸೇನ' ಮುನಿಯ ಪ್ರಭಾವ ಕ್ಕೊಳಗಾಗಿ ಜೈನ ಧರ್ಮಾಚರಣೆ ಮಾಡುತ್ತಿದ್ದನು. ಆದರೆ ರಾಜಪತ್ನಿ ಸುಗ್ಗಲೆ ಶಿವಭಕ್ತೆ. ದೇವರ ದಾಸಿಮಯ್ಯನ ಶಿಷ್ಯೆ. ಜೈನರ ಪ್ರಾಬಲ್ಯವನ್ನು ಮುರಿಯಬಯಸಿದ ಸುಗ್ಗಲೆ ಜಿನಮುನಿಗೂ, ತನ್ನ ಗುರುವಿಗೂ ವಾಗ್ವಾದ ನಡೆದು, ಕಡೆಗೆ ದೇವರ ದಾಸಿಮಯ್ಯನೇ ಗೆಲುವನ್ನು ಸಾಧಿಸುತ್ತಾನೆ. ಆಗ ರಾಜ ಜಯಸಿಂಹನು, ಜೈನರು ತಮ್ಮ ಮತವನ್ನು ಬಿಟ್ಟು ಶಿವಮತವನ್ನು ಸ್ವೀಕರಿಸಿದರೆಂಬ ಕಥೆ ಹಲವು ಕಾವ್ಯಗಳಲ್ಲಿ ಉಕ್ತಗೊಂಡಿದೆ.

ಕೆಳದಿ ಅರಸರು ಜೈನಮತಕ್ಕೆ ಆಶ್ರಯ ನೀಡಿದ್ದು ಮಹತ್ವದ ಸಂಗತಿ.

ಬಿಳಗಿ ಅರಸರು ಕ್ರಿ.ಶ.೧೫೮೩ರ ಇಮ್ಮಡಿ ಘಂಟೇಂದ್ರನವರೆಗೂ ಜೈನ ಮತಾವಲಂಬಿ ಗಳಾಗಿದ್ದರು. "ಮೂಡಬಿದಿರೆಯ ತಾಮ್ರಶಾಸನವು ಚಂದ್ರನಾಥ ಬಸದಿಗೆ ಹಣ, ಬೆಳ್ಳಿಯ ಪಾತ್ರೆ ಕೊಟ್ಟಿದುದನ್ನು ದಾಖಲಿಸಿದೆ."[೧೦೪] ಇದನ್ನು ಭೈರವನು ತನ್ನ ಚಿಕ್ಕಪ್ಪ ತಿಮ್ಮರಸನ ಮಡದಿ ವೀರಮ್ಮನ ಹೆಸರಿನಲ್ಲಿ ದಾನ ನೀಡಿದನು.

ಘಂಟೇಂದ್ರನ ರಾಣಿ ರಾಮಾದೇವಿಯು ಪಾಂಥಕುಟಿಯ ಶಾಂತೀಶ್ವರನ ಬಸದಿಯನ್ನು ಕಟ್ಟಿಸಿದಳು. ಅಲ್ಲದೆ ಅಭಿನವ ಭೈರವೇಂದ್ರನು ಪಟ್ಟದರಸಿ ಮಲ್ಲಿದೇವಿಯ ಹೆಸರಿನಲ್ಲಿ ಮಾಣಿಕ್ಯ ತೀರ್ಥಂಕರ ಬಸದಿಯನ್ನು ಕಟ್ಟಿಸಿ, ಇಟ್ಗೆ ಗ್ರಾಮವನ್ನು ದಾನವಾಗಿ ಬಿಟ್ಟನು. ಇಮ್ಮಡಿ ನರಸಿಂಹ ಭೂಪಾಲನ ಮಗಳೂ, ವೀರೇಂದ್ರನ ಸೋದರಿಯೂ ಆದ ತಿಮ್ಮಾಂಬಿಕೆ 'ಚಂದ್ರಪ್ರಭ ತೀರ್ಥಂಕರ ಬಸದಿ' ಕಟ್ಟಿಸಿದಳು.

ಸ್ವಾದಿ ಸಂಸ್ಥಾನದಲ್ಲಿ ಅರಸಪ್ಪನಾಯಕನ ಕಾಲದಲ್ಲಿ ಜೈನಧರ್ಮ ಕಾಲಿರಿಸಿತು. ಅರಸಪ್ಪನು ಶ್ರವಣಬೆಳಗೊಳಕ್ಕೆ ಯಾತ್ರಾರ್ಥಿಯಾಗಿ ಹೋದ ವಿಷಯವಿದೆ.

"ಬೆಳವಡಿ ಸಂಸ್ಥಾನವು ಹೊಳಲ್ಗುಂದ-೩೦ರ ಭಾಗವಾಗಿದ್ದು, ಕಲ್ಯಾಣ ಚಾಲುಕ್ಯರ ನಾಲ್ಕು ಶಾಸನಗಳು ಇಲ್ಲಿ ದೊರಕಿವೆ. ಕ್ರಿ.ಶ.೧೧ ಹಾಗೂ ೧೨ನೆಯ ಶತಮಾನಗಳಲ್ಲಿ ಹಲವು ಜಿನಾಲಯಗಳಿರುವ ಒಂದು ಜೈನಕೇಂದ್ರವಿದಾಗಿತ್ತೆಂದು ತಿಳಿದುಬರುತ್ತದೆ.[೧೦೫] ಕಾಲಾಂತರದಲ್ಲಿ ಈಶ್ವರ ಪ್ರಭುವಿನ ಆಳ್ವಿಕೆಯಲ್ಲಿ ಜೈನರ ಸಂಖ್ಯೆ ಕಡಿಮೆಯಾದಂತಿದೆ.

### ೪.೩.೨. ವೈಷ್ಣವಧರ್ಮ

ಕೆಳದಿ ಸಂಸ್ಥಾನದ ನಾಯಕರು ಉಡುಪಿ ಮತ್ತು ಕೂಡಲಿಗಳಲ್ಲಿದ್ದ ದ್ವೈತ ಮಠಗಳಿಗೆ ಉದಾರ ದತ್ತಿಗಳನ್ನು ಸಲ್ಲಿಸಿದ್ದಾರೆ. ರಾಣಿ ಚೆನ್ನಮ್ಮಾಜಿಯು 'ಶ್ರೋತ್ರಿಯ ಬ್ರಾಹ್ಮಣರಿಗೆ ಶಿವಾರ್ಪಿತ ವಾಗಿ ಧಾರೆಯೆರೆದು ಸ್ಥಿರ ಶಾಸನ ಬರೆಸಿದಳು. ಕೆಳದಿ ಅರಸರ ಕಾಲದಲ್ಲಿ ಹೆಚ್ಚಿನ ಅಗ್ರಹಾರಗಳು ಮಲೆನಾಡು ಹಾಗೂ ಘಟ್ಟದ ಮೇಲಿನ ಸೀಮೆಗಳಲ್ಲಿ ನಿರ್ಮಿತವಾಗಿದ್ದವು. "ತುಳು ಪ್ರಾಂತದಲ್ಲಿ ಚೆನ್ನಮ್ಮಾಜಿಯ ಕಾಲದಲ್ಲಿ ನಿರ್ಮಿತವಾಗಿದ್ದ ಬಂಟವಾಳದ ಹತ್ತಿರವಿರುವ ಶಂಭೂರು, ನಾಟಿ, ಸರ್ಪಾಡಿ, ಸಾವೂರು ಮೊದಲಾದ ಕಡೆಗಳಲ್ಲಿ ಅಗ್ರಹಾರ ನಿರ್ಮಿಸಿದಳು."[೧೦೬] ತನ್ನ ಪತಿ ಸೋಮಶೇಖರ ನಾಯಕನ ಹೆಸರಿನಲ್ಲಿ 'ಸೋಮಶೇಖರ ಪುರ'ವೆಂಬ ಅಗ್ರಹಾರ ಕಟ್ಟಿಸಿದಳು. ವೀರಮಾಂಬೆ ಸ್ಮರಣಾರ್ಥವಾಗಿ ಪತಿ ವೆಂಕಟಪ್ಪನಾಯಕನು 'ಅಭಿನವ ವೀರಾಂಬಾಪುರ' ಎಂಬ ಅಗ್ರಹಾರ ಕಟ್ಟಿಸಿ, ಬ್ರಾಹ್ಮಣರಿಗೆ ಶಿವಾರ್ಪಿತವಾಗಿ ಧಾರೆಯನ್ನೆರೆದು ಸ್ಥಿರ ಶಾಸನ ಬರೆಸಿಕೊಟ್ಟನು.

ಬಸವಪ್ಪ ನಾಯಕರ ಪತ್ನಿಯಾದ ಚೆನ್ನವೀರಮ್ಮಾಜಿ ಶೃಂಗಪುರದ ಧರ್ಮ ಸಂಸ್ಥಾನದ ಮಹಾಸ್ವಾಮಿಗಳ ಮಠಕ್ಕೆ ಸಾಲದ ಹೊರೆ ಹೆಚ್ಚಾದ ವಿಷಯ ತಿಳಿದು, ಚಿನ್ನಭಂಡಾರದ ಪುರುಷೋತ್ತಮಯ್ಯನ ಮಗನಾದ ಹೂವಯ್ಯನನ್ನು ಕಳುಹಿಸಿ, ಅಭಿನವ ಸಚ್ಚಿದಾನಂದ ಸ್ವಾಮಿಗಳನ್ನು ವೇಣುಪುರಕ್ಕೆ ಕರೆಯಿಸಿ

"ನೆರೆಯುಚಿತವಾದ ಮಿಗಿಲುಡು
ಗೊರೆಗಳನಿತ್ತವರ ನೈದೆ ಸನ್ಮಾನಿಸಿಯಾ
ದರಿಸಿ ಬೀಳ್ಕೊಟ್ಟು ಬಳಿಕಂ
ವರ ವೃಷವನದೆಡೆಯನೈದೆ ಶೃಂಗರಿಸುತ್ತಂ"[೧೦೭]

ಎಂಬಂತೆ ಸ್ವಾಮಿಗಳಿಗೆ ಅತ್ಯಂತ ದಿವ್ಯವಾದ ಸ್ಫಟಿಕ ಲಿಂಗವನ್ನು ಅನರ್ಘ್ಯರತ್ನ ಖಚಿತ ಗೋಪಾಲಕೃಷ್ಣ ಮೂರ್ತಿಯನ್ನು, ಪದಕ, ತಾಳಿ, ಸರಪಣಿ ಸಹಿತ ಶಿವಾರ್ಪಿತವಾಗಿ ಧಾರೆಯೆರೆದಳು. ಮತ್ತೆ ಆ ದೇವರಿಗೆ ೭೪ ವರಹದ ಭೂಸ್ವಾಸ್ಥೆಯ ನಿರೂಪವನ್ನು ಬರೆಸಿದಳು. ಮಹಾರಾಣಿ

ಚೆನ್ನಮ್ಮಾಜಿಯ ಕಾಲದ ಪುತ್ತೂರಿನ ಶಾಸನವೊಂದು ಅಲ್ಲಿಯ ವೆಂಕಟೇಶ್ವರ ದೇವರ ಸೇವೆಗಾಗಿ ಬ್ರಾಹ್ಮಣ ರಾಮಚಂದ್ರನಿಗೆ ದತ್ತಿ ನೀಡಿದ್ದನ್ನು ಉಲ್ಲೇಖಿಸಿದೆ.

ಸ್ವಾದಿ ಸಂಸ್ಥಾನದ ಅರಸಪ್ಪನಾಯಕನು ದಸ್ಯುಗಳಿಂದ ತಪೋಯೋಗಾನುಷ್ಠಾನಕ್ಕೆ ವಿಘ್ನವಾಗ ಬಾರದೆಂದು ಗೋಸೂರ ಅಡವಿಯನ್ನು ಕಡಿಸಿ... ಮಠವನ್ನು ಕಟ್ಟಿಸಿ ತನ್ಮಧ್ಯದಲ್ಲಿ ಶ್ರೀ ನರಸಿಂಹ ದೇವರಿಗೊಂದು, ಶ್ರೀ ಕಾಶಿ ವಿಶ್ವೇಶ್ವರ ದೇವರಿಗೊಂದು ಹಾಗೂ ಶ್ರೀ ಶಂಕರಾಚಾರ್ಯರಿಗೆ ಒಂದು ಶಿಲಾಮಯ ದೇವಾಲಯ ನಿರ್ಮಿಸಿದರು. ಸ್ವಾದಿಯ ಅರಸು ಮಧುಲಿಂಗ ನಾಯಕನು ಸ್ವರ್ಣವಲ್ಲಿ ಮಠಕ್ಕೆ ೬೫ ಗ್ರಾಮಗಳನ್ನು ದತ್ತಿ ಬಿಟ್ಟನು.

ಬಿಳಗಿ ಅರಸರು ಜೈನಮತೀಯರಾಗಿದ್ದರೂ ವೈಷ್ಣವಧರ್ಮಕ್ಕೆ ದತ್ತಿ ನೀಡಿರುವರು. ಎರಡನೆ ಘಂಟೇಂದ್ರನ ರಾಣಿಯ ತಾಯಿ 'ಜಟ್ಟಮ್ಮ' ಬ್ರಾಹ್ಮಣರಿಗೆ ದಾನಬಿಟ್ಟ ವಿಷಯ ಸಿದ್ಧಾಪುರದ ಶಕ ೧೫೭೩ರ ಶಾಸನದಲ್ಲಿದೆ. ಭುವನಗಿರಿಯ ದೇವಾಲಯ ಮತ್ತು ಕೆರೆಯನ್ನು ಬಸವೇಂದ್ರನು ಕ್ರಿ.ಶ.೧೬೯೨ರಲ್ಲಿ ಶಿಲಾಮಯವಾಗಿ ಕಟ್ಟಿಸಿ, ಬ್ರಾಹ್ಮಣರಿಗೆ ಭೂದಾನ,ದತ್ತಿ ನೀಡಿರುವ ಮಾಹಿತಿ ತಿಳಿದುಬರುತ್ತದೆ.

"ಶ್ರೀ ಕೃಷ್ಣರಾಜ ಒಡೆಯರ ಧರ್ಮಪತ್ನಿ ಕೃಷ್ಣವಿಳಾಸದ ಲಿಂಗಾಜಮ್ಮಣ್ಣಿಯರು ನಂಮ ದೀರ್ಘ ಸೌಮಾಂಗಲ್ಯ ಸಂಪತ್ಯಾ ಭಾಗ್ಯಾಭಿವೃದ್ಧರ್ಥವಾಗಿ ನಂಮ ಹೆಸರಿನಿಂದ ಕೃಷ್ಣ ವಿಳಾಸದ ಲಿಂಗಾಂಬಾ ಅಗ್ರಹಾರವೆಂದು ಹೆಸರಿಟ್ಟು ಮಹಿಸೂರ ಕೋಟೆಗೆ ಪಶ್ಚಿಮಭಾಗ, ಖಾಸ ಕುದುರೆ ಲಾಯಕ್ಕೆ ಎಡ ಪಾಶ್ವ ಲಕ್ಷ್ಮೀ ವಿಳಾಸದ ನಂಮಕ್ಕಾಜಿಯವರು ಅಗ್ರಹಾರಕ್ಕೆದುರು ಸಾಲಿನಲ್ಲಿ ಯಿಪ್ಪತ್ತು ಮನೆಗಳು ಶ್ರೀಪರ ಕಾಲಮಠ ಸಹ ಯಿಪ್ಪತ್ತೊಂದು ಮನೆಗಳನ್ನು ಕಟ್ಟಿಸಿ ಅಗ್ರಹಾರ ಪ್ರತಿಷ್ಠಾಪಿಸಿದ ಬಗ್ಗೆ ವಿವರವಿದೆ."[೧೦೮]

ಕಿತ್ತೂರು ಸಂಸ್ಥಾನದಲ್ಲಿ ವೈಷ್ಣವರಿಗಾಗಿ ಅಗ್ರಹಾರಗಳು ಬೆಳೆದು ಬಂದವು. ಗುರ್ಲ ಹೊಸೂರಿನ ಶ್ರೀ ಚಿದಂಬರ ದೀಕ್ಷಿತರು ಕಿತ್ತೂರಿನ ಅರಸರಿಗೆ ರಾಜಗುರು ಸ್ವರೂಪರಾಗಿದ್ದರು. ಮಲ್ಲಸರ್ಜನಿಗೂ ಚಿದಂಬರ ದೀಕ್ಷಿತರಿಗೂ ಅನ್ಯೋನ್ಯ ಸಂಬಂಧವಿದ್ದಿತು.

ಬೆಳವಡಿ ಸಂಸ್ಥಾನದ ವಿಭಾಗಗಳಲ್ಲಿ ಬ್ರಾಹ್ಮಣ ವತನದಾರರಾದ ದೇಶಪಾಂಡೆ, ಕುಲಕರ್ಣಿ ಮನೆತನಗಳಿದ್ದವು. ಕಿತ್ತೂರು ಸಂಸ್ಥಾನದ ಮಲ್ಲಸರ್ಜನ ಎದುರಾಳಿಗಳಲ್ಲಿ ಕಲಭಾವಿ ದೇಶಪಾಂಡೆಯವರೂ ಒಬ್ಬರು.

ಸಿರಸಂಗಿ ಸಂಸ್ಥಾನಿಕರಾದ ಲಿಂಗರಾಜರು ನರಗುಂದದ ಬೆಟ್ಟದ ಮೇಲಿನ ವೆಂಕಟೇಶ್ವರ ದೇವಸ್ಥಾನದಲ್ಲಿ ಮಹಾನವಮಿ ಉತ್ಸವ ವೈಭವದಿಂದ ನಡೆಯಬೇಕೆಂದು ಪ್ರತಿವರ್ಷ ಕಾಣಿಕೆ

ಸಲ್ಲಿಸುತ್ತಿದ್ದರು. ಸಿರಸಂಗಿ ಸಂಸ್ಥಾನದ ೧೯ನೆಯ ದೇಸಾಯಿಣಿಯರಾದ ಚೆನ್ನವ್ವ-ಲಿಂಗವ್ವರ ಕಾಲಕ್ಕೆ ಕುಲಕರ್ಣಿ ವೆಂಕೋಬರಾಯನು ಪ್ರಮುಖನಾಗಿದ್ದನು. "ಕ್ರಿ.ಶ.೧೮೫೩ರಲ್ಲಿ ಸವದತ್ತಿಯಲಿ ಸ್ಥಾಪಿತವಾದ ರಾಘವೇಂದ್ರ ಸ್ವಾಮಿಗಳ ಬೃಂದಾವನಕ್ಕೆ ಜಾಯಪ್ಪ ದೇಸಾಯಿಯು ಹೇರಳವಾದ ಕಾಣಿಕೆಗಳನ್ನು ಸಲ್ಲಿಸಿದನು."[೧೯] ಕ್ರಿ.ಶ.೧೮೫೧ರಲ್ಲಿ ಸಿರಸಂಗಿ ದೇಸಗತಿ ಕಾರಕೂನ ದೇವಜಿಯು ಸಿದ್ಧಲಿಂಗವ್ವ, ಚೆನ್ನಾಂಬೆಯರ ಅಭೀಕ್ಷೆಯಂತೆ ಹಾಗೂ ಪರಂಪರೆಯ ಪ್ರಕಾರ ೩೦ ರೂ. ಕಳಿಸಿ ಅರ್ಚಕರಿಗೆ ಪತ್ರ ಬರೆದಿದ್ದಾನೆ.

ಸುಗಟೂರು ಇಮ್ಮಡಿ ತಮ್ಮಗೌಡನ ರಾಣಿ ಭೈರಕೂರಿನ ಚೊಕ್ಕಣ್ಣಗೌಡನ ಮಗಳಾದ ವೆಂಕಟಾಂಬೆಯು 'ಕೃಷ್ಣ ಸೋಮಯಾಜಿ' ಎಂಬುವನ ಮೂಲಕ ಆವನಿಯ ರಾಮೇಶ್ವರ, ಕಾಶೀ ವಿಶ್ವನಾಥನ ಸನ್ನಿಧಿಯಲಿ ಅಗ್ನಿಷ್ಟೋಮ ಎಂಬ ಯಜ್ಞ ಮಾಡಿಸಿದ್ದಾಳೆಂದೂ, ಇದೇ ಇಮ್ಮಡಿ ತಮ್ಮೇಗೌಡನ ಮಗಳು 'ಕೆಂಪಮ್ಮ' ಆವನಿಗ್ರಾಮದ ನಾಗರಕುಂಟೆಯ ಸಮೀಪದಲ್ಲಿ ಕಾಶೀ ಅಮೃತ ಮಲ್ಲಿಕಾರ್ಜುನನಿಗೆ ಯಜ್ಞ ಮಾಡಿಸಿದ್ದು ಸುಗಟೂರ ವೀರಶೈವ ಮನೆತನದಲ್ಲಿ ದಾಖಲಾಗಿದೆ.

ಗೆಜ್ಜಲಗಟ್ಟೆ ರಾಣಿ ಲಕ್ಷ್ಮೀದೇವಿಯು ಶ್ರೀ ರಾಘವೇಂದ್ರ ಸ್ವಾಮಿಗಳ ಮಠಕ್ಕೆ ೧೪ ಎಕರೆ ಭೂಮಿಯನ್ನು ನೀಡಿ, ಪರಧರ್ಮ ಸಮಾನತೆಯನ್ನು ಮೆರೆದಳು.

**೪.೩.೩. ಶೈವಧರ್ಮ**

ಶೈವಧರ್ಮದ ಪ್ರತೀಕವಾದ ಶಿವೋಪಾಸನೆಯು ವೇದಗಳ ಕಾಲದಿಂದಲೂ ನಡೆದು ಬಂದುದನ್ನು ಕಾಣುತ್ತೇವೆ. ಕೆಳದಿ ಅರಸರಿಂದ ಶೈವಧರ್ಮಕ್ಕೆ ದಾನ ದತ್ತಿಗಳು ಕೊಡಲ್ಪಟ್ಟಿವೆ. ಸ್ವಾದಿ ಸಂಸ್ಥಾನದ ಇಮ್ಮಡಿ ಅರಸಪ್ಪನಾಯಕನು ಶೈವ ಗುರುವಿನಿಂದ ಪ್ರಭಾವಿತನಾಗಿದ್ದನು. ಮೂಲತಃ ಜೈನರಾದ ಬಿಳಗಿ ಸಂಸ್ಥಾನಿಕರು ನಂತರ ಶೈವಧರ್ಮ ಸ್ವೀಕರಿಸಿ, ಶೈವಧರ್ಮಕ್ಕೂ ಪ್ರೋತ್ಸಾಹ ನೀಡಿದರು. ಕ್ರಿ.ಶ.೧೫೭೦ರ ಬಿಳಗಿ ವಿರೂಪಾಕ್ಷ ದೇವಾಲಯದ ಶಾಸನದಂತೆ ವೀರಪ್ಪ ಒಡೆಯರ ರಾಣಿ ವೀರಮ್ಮ ಅಕ್ಷಯ ಲಕ್ಷಣವಾದ ವಿರೂಪಾಕ್ಷ ದೇವಾಲಯ ಕಟ್ಟಿಸಿ, ತಮ್ಮ ಪತಿ ವೀರಪ್ಪೊಡೆಯರಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಬೇಕೆಂದೂ ಮತ್ತು ತಮಗೆ 'ಶಿವಸಾಯೋಜ್ಞ'ವಾಗಬೇಕೆಂದೂ ತಮ್ಮ ಕುವರ ನರಸಪ್ಪೊಡೆಯರ ಕೈಯಲ್ಲಿ ಈ ದೇವಸ್ಥಾನಕ್ಕೆ ದಾನ ಮಾಡಿದಳು.

ಬೆಳವಡಿ ಸಂಸ್ಥಾನದ ಭಾಗದಲ್ಲಿ ಕ್ರಿ.ಶ.೧೨-೧೩ನೆಯ ಶತಮಾನದಿಂದ ಶೈವಧರ್ಮದ ನಾಥಪಂಥದ ಸಂಪ್ರದಾಯದ ಪ್ರಭಾವ ಕಾಣುತ್ತೇವೆ. ಹೂಲಿಯ ಹಿರೇಮಠ ಮೂಲತಃ

ಶೈವಧರ್ಮದ್ದಾಗಿದ್ದು, ಪ್ರಾಚೀನ ಕಾಲದ ಶೈವ ಪ್ರಭೇದಗಳಾದ ಕಾಳಾಮುಖ, ಪಾಶುಪತ, ಲಾಕುಳ ಮೊದಲಾದ ಪಂಥಗಳಲ್ಲಿ ಸುಧಾರಣೆ ಮಾಡಿ, ಕಲ್ಯಾಣ ಕ್ರಾಂತಿಯ ನಂತರ ವೀರಶೈವ ಧರ್ಮಪ್ರಕಾರ ಕಾರ್ಯವನ್ನು ಈ ಮಠ ಕೈಗೊಂಡಿತೆಂದು ವೇ.ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳು, ಬೃಹನ್ಮಠ ಹೂಲಿ, ಅಭಿಪ್ರಾಯಪಡುತ್ತಾರೆ.

ಕಿತ್ತೂರು ಸಂಸ್ಥಾನದವರು ನೇಸರಗಿಯಲ್ಲಿ ಹಲ್ಲೇಶ್ವರ, ಮಾಣಿಕೇಶ್ವರ, ಸಿದ್ಧೇಶ್ವರ ಎಂಬ ಶೈವ ದೇವಾಲಯ ಕಟ್ಟಿಸಿದರು. ವಂಟಮೂರಿ ಸಂಸ್ಥಾನದಲ್ಲಿ ವಾಡೇದ ಹಿಂದಿನ ಕೊಳ್ಳದ ಪ್ರದೇಶದಲ್ಲಿರುವ 'ಕೊಳ್ಳದವ್ವನ ಗುಡಿ', 'ಬನಶಂಕರಿ ದೇವಸ್ಥಾನಗಳು' ಶಾಕ್ತರಿಗಾಗಿ ನಿರ್ಮಿಸಲ್ಪಟ್ಟವು.

ಹೀಗೆ ೧೨ನೆಯ ಶತಮಾನದ ಮಧ್ಯದವರೆಗೂ ಶೈವಧರ್ಮ ಪ್ರಚಾರದಲ್ಲಿತ್ತು. ಮುಂದೆ ಲಿಂಗಾಯತ ಧರ್ಮ ಪ್ರಭಾವಯುತ ಸ್ಥಾನ ಗಳಿಸಿಕೊಂಡಿತು.

**೪.೩.೪. ಲಿಂಗಾಯತ ಧರ್ಮ**

ಬಸವಣ್ಣನವರ ಕಾಲದಲ್ಲಿ ವೀರಶೈವ ಧರ್ಮವು ಒಂದು ನಿರ್ದಿಷ್ಟ ರೂಪವನ್ನು ಪಡೆದು, ಸರ್ವ ಸಮಾನತೆಯನ್ನು ಪಡೆಯಿತು. ಒಂದು ಸಂಸ್ಕೃತಿಯನ್ನು ರೂಪಿಸುವ ಪ್ರಮುಖ ಶಕ್ತಿಯಾಗಿ ವೀರಶೈವ ಧರ್ಮ ರೂಪುತಾಳಿತು. ಭೂದಾನವನ್ನು ಕೊಟ್ಟವನು ಸ್ವರ್ಗಕ್ಕೆ ಹೋದರೆ, ಅದನ್ನು ರಕ್ಷಿಸಿದವನು ದೇವರ ಬಳಿಯೇ ಹೋಗುತ್ತಾನೆಂಬ ನಂಬಿಕೆ ಪ್ರಚಲಿತವಿರುವ ಹಿನ್ನೆಲೆಯಲ್ಲಿ ನಮ್ಮ ರಾಣಿಯರು ದಾನ, ದಾಸೋಹ, ಮಠಗಳ ನಿರ್ಮಾಣದಲ್ಲಿ ತೊಡಗಿದುದನ್ನು ಕಾಣುತ್ತೇವೆ.

ಕಾಶ್ಮೀರ ದೇಶದ ಮಾಂಡವ್ಯಪುರದರಸನ ಮಗಳಾದ ನಿಜದೇವಿ ಶಿವಭಕ್ತೆ. ರಾಜವೈಭವವನ್ನು ತೊರೆದು ಶಿವನ ಭ್ರಾಂತಿಯಲಿ ಬೆಟ್ಟ-ತಿಟ್ಟು, ಕಾಡು-ಮೇಡು ದಾಟಿ ಕಾಶ್ಮೀರದಿಂದ ಅಕ್ಕನಂತೆ ದಿಗಂಬರೆಯಾಗಿ ಕಲ್ಯಾಣದೆಡೆಗೆ ಸಾಗಿದಾಗ ಮಾರ್ಗಮಧ್ಯದಲ್ಲಿ ಶಿವ ನಾನಾ ರೂಪಗಳಲ್ಲಿ ಅವತರಿಸಿ 'ನನ್ನನ್ನು ವರಿಸು' ಎಂದಾಗ ಭಕ್ತೆ ನಿಜವರಿತು ಶಿವನನ್ನು ನಿರಾಕರಿಸುತ್ತಾಳೆ. ಆಗ ಶಿವ ದಿಗಂಬರೆಯಾಗದೆ ಈ ಬೊಂತೆಯನ್ನು ಹೊದೆಯಲು ಕೊಟ್ಟನು. ಅಂದಿನಿಂದ 'ನಿಜದೇವಿ ಬೊಂತಾದೇವಿ'ಯಾಗಿ ಶಿವಾನುಭವ ಕಾಯಕದಲ್ಲಿ ನಿರತಳಾದಳು. ನಿಜದೇವಿ ನಿಜವಾಗಿಯೂ ನಿಜವನ್ನರಿತವಳು. ಕಾಮವನ್ನು, ಯಮನನ್ನು ಜಯಿಸಿದವಳೆಂಬ ಪ್ರತೀತಿ ಇದೆ. ಅರ್ಚನೆ. ಪೂಜನೆ, ನಿತ್ಯನಿಯಮಾಚರಣೆಯಿಂದ, ವೈರಾಗ್ಯಕ್ಕೆ ನಿಷ್ಠೆಯಿಂದ ಅರ್ಪಿತಳಾದ ಶಿವಭಕ್ತೆ, ಅಕ್ಕಮಹಾದೇವಿಯಂತೆ ವೈರಾಗ್ಯ, ಆಧ್ಯಾತ್ಮಿಕ ಸಾಧನೆಯಲ್ಲಿ ಪುರುಷರಿಗೆ ಸರಿಸಮಾನವಾಗಿ, ಶಿಂಗಾರ ಪ್ರಭಾವ ವಲಯದಲ್ಲಿ ವಿರಾಗಿಯಾಗಿ ಶರಣತತ್ವಕ್ಕೆ ಬದ್ಧಳಾದವಳು. "ತೊಡೆಯಲು ಬ್ರಾಹ್ಮಣ ಬಯಲು ಹೊಲೆ ಬಯಲು"[೧೧೦]ಗಳೆಲ್ಲಿವೆಯೆಂದು ಕೂಗು ಹಾಕಿದ ಶರಣೆ.

ಕಲ್ಯಾಣ ಚಾಲುಕ್ಯರ ರಾಜ ಇಮ್ಮಡಿ ಜಯಸಿಂಹನ ಮಡದಿಯಾಗಿ, ದಾಸಿಮಯ್ಯನ ಶಿಷ್ಯೆಯಾದ ಸುಗ್ಗಲೆ, ಗಂಡನೇ ಪರದೈವ ಎಂಬ ಕಾಲದಲ್ಲಿ ಅದನ್ನು ಪ್ರತಿಭಟಿಸಿ ತನ್ನ ಮನಸ್ಸಿಗೆ ಒಪ್ಪಿದ ಧರ್ಮವೇ ಧರ್ಮ, ಪ್ರತಿಯೊಬ್ಬರಿಗೂ ಧರ್ಮಗುರುವನ್ನು ಆರಿಸಿಕೊಳ್ಳಲು ಹಕ್ಕಿದೆ ಎಂಬುದನ್ನು ಸಾರಿದಳು. ಅಕ್ಕನಿಗಿಂತ ಸುಗ್ಗಲೆ ಒಂದು ಕೈ ಮಿಗಿಲೆನ್ನಬಹುದು. ಅಕ್ಕ ಭವಿಯಾದ ಕೌಶಿಕನನ್ನು ತೊರೆದರೆ, ಸುಗ್ಗಲೆ ಭವಿಯಾದ ಜಯಸಿಂಹನನ್ನೇ ಶಿವಭಕ್ತನನ್ನಾಗಿ ಪರಿವರ್ತಿಸಿದ ಶರಣೆ.

ಕಲ್ಯಾಣ ಚಾಲುಕ್ಯ ೨ನೇ ಸೋಮೇಶ್ವರನ ತಮ್ಮನಾದ VIನೇ ವಿಕ್ರಮಾದಿತ್ಯ(೧೦೭೬-೧೧೨೭) ಮಹಾರಾಷ್ಟ್ರದ ಶಾಸನಗಳು ಈತನ ಅಧಿಕಾರಿ, ರಾಣಿಯರ ವಿವರವನ್ನು ಉಲ್ಲೇಖಿಸಿದೆ. ಬಿಮ್ರಾ ಶಾಸನವು ಮಲ್ಲಣದೇವಿ, ಸುಗ್ಗಲದೇವಿ ಎಂಬ ಇಬ್ಬರೂ ಹೊಸ ರಾಣಿಯರನ್ನು ಪರಿಚಯಿಸುತ್ತದೆ. ವಾಜಿ ವಂಶದ ನಾಗರಾಜನು "ಮಲ್ಲಣಿದೇವಿಯ ಮನೆಯೊಳು ಶುಚಿದಕ್ಷನಾಗಿ ಮಾಣಿಕ ಭಂಡಾರದ ನಿಯೋಗಮಂ ಹೊಂದಿದ್ದನೆಂದೂ, ಸುಗ್ಗಲದೇವಿಯು ರೇವಣಸಿದ್ಧೇಶ್ವರ ದೇವರಿಗೆ ದತ್ತಿ ಬಿಟ್ಟಳೆಂದು ಶಾಸನ ತಿಳಿಸುತ್ತದೆ."[೧೧೧] ಪಿರಿಯರಸಿಯೆಂದೇ ಹೆಸರುವಾಸಿಯಾದ ರಾಣಿ ಲಕ್ಷ್ಮೀದೇವಿಯು ಬಸವಪೂರ್ವ ಯುಗದಲ್ಲಿ ಲಿಂಗಪ್ರತಿಷ್ಠಾಪನೆ, ದೇವಾಲಯ ನಿರ್ಮಾಣ, ದಾನಕಾರ್ಯ ಕೈಗೊಂಡು, ತೆಲುಗು ಜೊಮ್ಮಯ್ಯನ ಸೇವಕಿಯಾಗಿ ಶರಣಧರ್ಮ ಮೆರೆದಳು. ಖೇಡಗಿ ಗ್ರಾಮದಲ್ಲಿ ಕಂಕೇಶ್ವರ ದೇವಾಲಯವನ್ನು ತಂದೆ ಕಂಕೋಜನ ಹೆಸರಿನಲ್ಲಿ ಕಟ್ಟಿಸಿರುವುದನ್ನು 'ತಮ್ಮ ಕಂಕೇಶ್ವರ ದೇವರ್ಗೆ' ಎಂಬುದು ಖಚಿತಪಡಿಸುತ್ತದೆ. ದೇವಾಲಯದ ಪೂಜೆಗಾಗಿ ಭೂದಾನ, ನಿವೇಶನ, ಹೂದೋಟ ದಾನ ಮಾಡಿದ ವಿವರ ಖೇಡಗಿ ಶಾಸನದಲ್ಲಿದೆ. ಸೂಡಿಯ ಅಚಲೇಶ್ವರ ದೇವಾಲಯದ ತಪೋಧನರ ಆಹಾರದಾನ, ವಿದ್ಯಾದಾನ, ಅಂಗಭೋಗಗಳಿಗಾಗಿ ಸ್ಥಾನಾಚಾರ್ಯ ಸೋಮೇಶ್ವರ ಪಂಡಿತರಿಗೆ ಕಿಸುನಾಡು-೭೦ರ ಬಳಿ 'ಮೊಂಗರಿ' ಗ್ರಾಮವನ್ನು ದಾನವಾಗಿ ಕೊಟ್ಟ ವಿವರವನ್ನು ಸೂಡಿಯ ಶಾಸನ ತಿಳಿಸುತ್ತದೆ.

ಲಕ್ಷ್ಮೀದೇವಿಯನ್ನು ಶಾಸನಗಳು 'ಮಹಾದಾನವಿನೋದೆ, ದಾನ ಚಿನ್ತಾಮಣಿ' ಎಂದೆಲ್ಲ ಹೊಗಳಿವೆ. ತೆಲುಗು ಜೊಮ್ಮಯ್ಯನ ರಗಳೆಯು ಈಕೆಯನ್ನು ಪರಮಶಿವ ಲಿಂಗಾರ್ಚನಾನಿರತೆ, ಜಂಗಮಸ್ನೇಹಿ, 'ಸತ್ಯಭಕ್ತೆ' ಎಂದಿದೆ. ಗುಣಶಾಂತೆಯಾದ ಲಕುಮಾದೇವಿ ಜೊಮ್ಮಯ್ಯನ ಏಕನಿಷ್ಠೆ, ಅಚಲಭಕ್ತಿಗೆ ಒಲಿದು ಹೊಸ ಹೊಸ ವಸ್ತ್ರ, ಚಂದನ, ಕರ್ಪೂರ, ಅಗಿಲು, ಧೂಪ, ಸಾಧು, ತಾಂಬೂಲ, ಹೂವುಗಳನ್ನು ನಿತ್ಯವು ಪೂಜೆಗಾಗಿ ಕಳಿಸುತ್ತಿದ್ದಳೆಂದು ಬಿ.ಆರ್.ಹಿರೇಮಠರು ದಾಖಲಿಸಿದ್ದಾರೆ. ಶಿವ ಲಿಂಗಾರ್ಚನೆಯಿಂದ ಶಿವಭಕ್ತಿ ಸಂಪಾದಿಸಿದ ಸಿರಿವಂತೆ.

ವಿಜಯನಗರದ ಅರಸರ ಉದಾರ ಧಾರ್ಮಿಕ ಪರಂಪರೆಯನ್ನು ಮುಂದುವರೆಸಿದ ಕೆಳದಿ ರಾಣಿ ಚೆನ್ನಮ್ಮಾಜಿಯು ಸರ್ವಧರ್ಮೀಯರಿಗೂ ಸಮಾನ ಅವಕಾಶವನ್ನಿತ್ತಳು. ಕಾರವಾರ ನಾಡಿನ ಲಿಂಗಯಿತ್(Linguit) ಎಂಬುವರಲ್ಲಿ ಜೋಗಿ ಜಂಗಮರೆಂಬ ಜನ ಇದ್ದಾರೆಂಬುದಾಗಿ ವಿದೇಶಿ ಪ್ರವಾಸಿ ಜಾನ್‌ಪ್ರೈಯರ್ ದಾಖಲಿಸಿದ್ದು, ಲಿಂಗಾಯತ ಧರ್ಮ ಪ್ರಚಲಿತವಾಗಿ ಅಸ್ತಿತ್ವದಲ್ಲಿತ್ತೆಂಬುದನ್ನು ದೃಢೀಕರಿಸುತ್ತದೆ.

"ಮೆರೆವಳಕಾನಗರದ ಸುರ
ಪುರ ದೆಸಕವನಿಳಿಕೆಗೆಯ್ವ ಬಿದರೂರೆಡೆಯೊಳ್
ಕರಮೆಸೆವ ನೀಲಕಂಠೇ
ಶ್ವರರಿಗೆ ರಥೋತ್ಸವದ ಕಟ್ಟಳೆಯನಾಗಿಸಿದಳ್"[೧೧೨]

ಎಂಬಂತೆ ವೇಣುಪುರದ ಶ್ರೀ ನೀಲಕಂಠೇಶ್ವರ ದೇವರ ರಥೋತ್ಸವವನ್ನು ವ್ಯವಸ್ಥಿತವಾಗಿ ನಡೆಯಲು ಏರ್ಪಡಿಸಿದಳು. ಅಲ್ಲದೆ "ಸ್ವಾದಿ ಅರಸನ ನೀಲಛತ್ರ, ರಾಜಚಿಹ್ನೆಯನ್ನು ಪಡೆದು, ಕೆಳದಿ ವೀರಭದ್ರದೇವರಿಗೆ ಕಾಣಿಕೆಯಾಗಿ ಕೊಟ್ಟಳು."[೧೧೩] ಅಲ್ಲದೆ ಇದೇ ದೇವಾಲಯದ ಶಿಲಾಮಯಶಿಖರದ ಕೆಲಸವನ್ನು, ತದ್ರಂಗ ಮಂಟಪದ ರಚನೆ ಕೆಲಸಗಳನ್ನು ಸಂಪೂರ್ಣ ಗೊಳಿಸಿದಳು. ಭುವನಗಿರಿಯಲ್ಲಿರುವ ಮಠಕ್ಕೆ ಉಂಬಳಿಯನ್ನಿತ್ತು ಶಾಸನ ಬರೆಸಿದಳು. ಕೆಳದಿ ದೇಗುಲ ಅಭಿವೃದ್ಧಿಪಡಿಸಿ, ಧ್ವಜಸ್ತಂಭವನ್ನು ಸ್ಥಾಪಿಸಿದಳು.

ರಾಣಿಯು ತಿಮ್ಮಣ್ಣ ವೀರಣ್ಣರಿಗೆ ಜಂಬಾಣಿ ಗ್ರಾಮವನ್ನು ಉಂಬಳಿಯಿತ್ತು ಅದು ವಂಶಪಾರಂಪರ್ಯವಾಗಿ ಉಳಿಯುವಂತೆ ಶಾಸನ ಬರೆಸಿದಳು. ಸೋಮಾಪುರ ಮಠದ ಸೀಮೆಯ ಚೊಕ್ಕಗುರು ಬಸವರಾಜದೇವರಿಗೆ ಹಲಸೂರಿನ ಕೆಲವು ಭೂಭಾಗ ದಾನ ಕೊಟ್ಟಳು. ಬಸವನಂದಿ ಯಲ್ಲಿ ಮಂಟಪವನ್ನು ಕಟ್ಟಿಸಿದಳು.

ಮಹಾಮಹತ್ತಿನ ಮಠದಲ್ಲಿದ್ದ ೪೩ನೆಯ ತಾಮ್ರಶಾಸನವು ಕೆಳದಿ ಚೆನ್ನಮ್ಮಾಜಿಯು "ಕುಂಬಸಿ ಸೀಮೆಯ ಚಿಕ್ಕ ಮೊರಸ, ಹಿರಿಮೊರಸ, ಬಾಳೆಕೊಪ್ಪ ಎಂಬ ಮೂರು ಗ್ರಾಮಗಳನ್ನು ೨೩೭ ವರಹಗಳ ಬೆಲೆಗೆ ಚನ್ನಪುರದ ಮಹತ್ತಿನ ಮಠಕ್ಕೆ ಕೊಟ್ಟಳೆಂದು ಅದೇ ಮಠದಲ್ಲಿಯ ೪೭ನೇ ತಾಮ್ರಶಾಸನವು 'ಗಾಜನೂರು ಸೀಮೆ' ಯಡಹಳ್ಳಿ ಗ್ರಾಮದಲ್ಲೂ ಸೀಮೆಗೆ ಘಾಣದಾರ ಪುಟಗನು ಕಟ್ಟಿಸಿದ ಮಹತ್ತಿನ ಮಠಧರ್ಮಕ್ಕೆ ಕ್ರಯದಾನ ಶಾಸನ ಬರೆದುಕೊಟ್ಟಳು.[೧೧೪]

ಕ್ರಿ.ಶ.೧೬೯೦ ಡಿಸೆಂಬರ್ ೨ರಂದು "ಶ್ರೀ ಮತ್ತು ಮನೋಹರದ ಜಟಾಶಂಕರ ದೇವರ ಶಿಷ್ಯರು, ಮನೋಹರದ ಮಹತ್ತು ಮಲ್ಲಿಕಾರ್ಜುನ ದೇವರ ಶಿಷ್ಯರು, ಕೆಂಪಿನ ಮನೋಹರ

ದೇವರಿಗೆ ಚೆನ್ನಮ್ಮಾಜಿ ಭೂದಾನ ಧರ್ಮಶಾಸನ ಬರೆಸಿಕೊಟ್ಟಳು. ರಾಣಿ ಚೆನ್ನಮಾಜಿಯು 'ಆರಗದ ಕಂಬಾಳ ಸಿದ್ಧರಾಮ ದೇವರ ಶಿಷ್ಯರು ವಿರೂಪಾಕ್ಷ ದೇವರಿಗೆ ಭೂಮಿ ಕ್ರಯದಾನ ಧರ್ಮಶಾಸನ ಬರೆಸಿದಳು. ಅಲ್ಲದೆ ಸಿದ್ಧಗಿರಿ ಮಠದ ರೇವಣಸಿದ್ಧ ದೇವರ ಸಂಪ್ರದಾಯದ ಅರಸಿನಗೇರಿ ಮಹಂತಾರಾಧ್ಯರ ಪುತ್ರರಾದ ರಾಚಪಾರಾಧ್ಯರ ಪುತ್ರರಾದ ಸಿದ್ಧಬಸವಣಾರಾಧ್ಯರಿಗೆ ಶಾಸನ ಬರೆಸಿಕೊಟ್ಟಳು.

ರಾಣಿ ಚೆನ್ನಮ್ಮಾಜಿಯವರ ತಾಯಿ 'ಪಾರ್ವತಿ ಅಮ್ಮ'ನವರು ಆಗುಂಬೆಯಲ್ಲಿ ಮಹತ್ತಿನ ಮಠ ಕಟ್ಟಿಸಿದಳೆಂದು, ರಾಣಿ ಚೆನ್ನಮ್ಮಾಜಿ ಧರ್ಮಶಾಸನ ಬರೆಸಿಕೊಟ್ಟಳೆಂಬ ವಿವರವಿದೆ.

"ಆಗುಂಬೆಯಲೂ ನಂಮ ತಾಯಿ ಪಾರ್ವತ್ತಿ ಅಂಮ
ನವರು ಕಟಿಸ್ತ ಮಹತ್ತಿನ ಮಠದ ಧರ್ಮಕ್ಕೆ
..............................................
....................................................
ಚೆಂನಮಾಜಿಯವರು ಬರೆಸಿಕೊಟ್ಟ ಧರ್ಮಶಾಸನ"[೧೧೫]

ಎಂಬ ವಿವರವಿದೆ.

ಕೆಳದಿಯ ಮತ್ತೊಬ್ಬ ಮಹತ್ವದ ರಾಣಿ ವೀರಮ್ಮಾಜಿ ತೀರ್ಥರಾಜ ಪುರದಲ್ಲಿ ಮಹಾಮಹತ್ತಿನ ಮಠವನ್ನು ಕಟ್ಟಿಸಿದಳು. ೧೬೭೩ರ ಡಿಸೆಂಬರ್ ೧೩ಕ್ಕೆ ಬರೆಸಿಕೊಟ್ಟ ಎತ್ತಿನ ಮಾನ್ಯದ ಶಾಸನದ ವಿವರವು ಕೇಸನೂರು ಸೀಮೆಯೊಳಗಣ ಉಳುಮೆಯ ಗ್ರಾಮದಲು ಕರ್ತರಯನವರು ತಮ್ಮ ತಾಯಿ ಲಿಂಗಮ್ಮಾಜಿಯವರ ಹೆಸರಿನಲು ಲಿಂಗೇಶ್ವರ ದೇವರ ಕಟ್ಟಳೆ, ಕಂದಾಚಾರ, ಸತ್ರ ಮುಂತಾದ ಧರ್ಮಕ್ಕೆ ಸೋಮಶೇಖರ ನಾಯಕನು ಧರ್ಮಶಾಸನ ಬರೆಸಿದನು.

ಕೆಳದಿ ವೀರಮಾಂಬೆ ಕೆಳದಿ ಹಿರಿಯ ವೆಂಕಟಪ್ಪ ನಾಯಕನ(೧೫೮೬–೧೬೨೯) ಧರ್ಮಪತ್ನಿ, ಈಕೆ ಕೆಳದಿಯ ರಾಜಕೀಯದಲ್ಲಿ ಭಾಗವಹಿಸದೇ ಹೋದರೂ ಅನೇಕ ಧಾರ್ಮಿಕ ಕಾರ್ಯ ಕೈಗೊಂಡಿರುವಳು. "ಇಕ್ಕೇರಿ ಭತ್ತದ ಪೇಟೆಯಲ್ಲಿ ಮಠವನ್ನು ಸ್ಥಾಪಿಸಿ ಅದಕ್ಕೆ ಮಂತಸಾಲ ಸೀಮೆಯಲ್ಲಿಯ ಕಲ್ಲಕೊಪ್ಪ ಗ್ರಾಮವನ್ನು ದಾನ ಮಾಡಿರುವಳು. "ಕೊಲ್ಲೂರು ಮೂಕಾಂಬಿಕೆಯ ಎದುರಿನ ಎರಡು ದ್ವಾರಪಾಲ ವಿಗ್ರಹಗಳು ಈಕೆಯ ಶಿವರಾತ್ರಿ ಹಬ್ಬದ ನಿಮಿತ್ತ ಮಾಡಿದ ಕೊಡುಗೆಗಳಾಗಿವೆ."[೧೧೬] ಈ ವಿಗ್ರಹದಲ್ಲಿರುವ "ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ೧೫೮೫ ಸಂವತ್ಸರ ಮಾಘ ಶು.೧೪ ಸೋಮವಾರದಲ್ಲು ಕೊಲ್ಲೂರ ಮೂಕಾಂಬಿಕೆ [illegible] ಸೇವಾರ್ಥವಾಗಿ ಶ್ರೀ ಮದ್ದೆಡೆವ ಮುರಾರಿ ಕೋಟೆ ಕೋಳಾಹಳ ವಿಶುಧ ವೈದಿಕಾದ್ವೈತ ಸಿದ್ಧಾಂತ ಪ್ರತಿಪಾದಕ ಶಿವಗುರು ಭಕ್ತಿ ಪಾರಾಯಣರಾದ ಶ್ರೀಮತ್ ಕೆಳದಿ ವೆಂಕಟಪ್ಪನಾಯಕರ

ಪತ್ನಿ ವೀರಮ್ಮಾಜಿಯವರು ಶಿವರಾತ್ರಿ ಪುಣ್ಯಕಾಲದಲು ಸಮರ್ಪಿಸಿದ ದ್ವಾರಪಾಲಕರೂ ಮಂಗಳ ಮಹಾ ಶ್ರೀ ಶ್ರೀ ಶ್ರೀ ೧೭೪೧॥=ಎಂಬ ಬರಹವನ್ನು ದಾಖಲಿಸಲಾಗಿದೆ."[೧೧೭] ಇಕ್ಕೇರಿ ಅಘೋರೇಶ್ವರ ದೇವಾಲಯಕ್ಕೆ ಮಾಡಿಸಿಕೊಟ್ಟ ಕಂಚಿನ ಉತ್ಸವಮೂರ್ತಿಯ ಪ್ರಭಾವಳಿಯ ಹಿಂದಿರುವ "ಯಿಯಿಕ್ಕೇರಿ ಅಘೋರೇಶ್ವರನ ಪ್ರಭಾವಳಿ ಸೆ ೧೩॥೦ ಕ್ರಯಗಳ್ಸ+ಪೀಠ ೧ ೩\೪ X೯" ಎಂಬ ಬರಹವಿರುವುದನ್ನು ಗಮನಿಸಬಹುದು.

ಕವಲೇದುರ್ಗದ ೧೬೬೫ರ ಎರಡು ತಾಮ್ರಶಾಸನಗಳಲ್ಲಿ "ಹೊಂಬುಚ ಸೀಮೆಯ ಸುಣ್ಣದ ಬಸ್ತಿಯ ಸಿದ್ಧಾಪುರದ ಮಹತ್ತಿನ ಮಠಕ್ಕೆ ರಾಣಿ ಸಿದ್ಧಮ್ಮಾಜಿಯು ದಾನ ಬಿಟ್ಟ ವಿಷಯ ದಾಖಲಾಗಿದೆ."[೧೧೮] ಅಲ್ಲದೆ ಮಹಾಮಹತ್ತಿನ ಮಠದಲ್ಲಿಯ ೩೩ನೇ ತಾಮ್ರಶಾಸನವು ಸಿದ್ಧಮ್ಮಾಜಿಯವರ ಹೆಸರಿನಲ್ಲಿ ಸೋಮೇಶ್ವರದಲ್ಲಿ ಕಟ್ಟಿಸಿದ ಮಹಾಮಹತ್ತಿನ ಮಠಕ್ಕೆ ವೀರಭದ್ರ ನಾಯಕರು ಶಿವಾರ್ಪಿತವಾಗಿ ಬಿಟ್ಟ ತಾಮ್ರ ಶಾಸನ ಇದಾಗಿದೆ. ಮಹಾಮಹತ್ತಿನ ಮಠದಲ್ಲಿಯ ೫೦ನೇ ತಾಮ್ರಶಾಸನವು "ನಾಗಂಮಾಜಿಯವರು ಆಳಿ ಶಿವಪ್ಪನಾಯಕರ ಹೆಸರಿನಲ್ಲೂ ಕೂಡುವಳಿಯಲ್ಲೂ ಕಟ್ಟಿಸ್ತ ಮಹತ್ತಿನ ಮಠ"[೧೧೯]

ಕೆಳದಿ ಸಂಸ್ಥಾನದಲ್ಲಿ ಸಾಮಾನ್ಯ ಮಹಿಳೆಯರೂ ಕೂಡ ಧಾರ್ಮಿಕ ಕೊಡುಗೆಗಳನ್ನು ನೀಡಿದುದನ್ನು ಗಮನಿಸಿದರೆ ಅಂದಿನ ಸಾಮಾಜಿಕ ಪರಿಸರದಲ್ಲಿ ಮಹಿಳಾ ಶಿಕ್ಷಣಕ್ಕೆ ಮಾನ್ಯತೆ ಇದ್ದುದನ್ನು, ಮಹಿಳೆಯರಿಗೆ ಸಮಾನಾವಕಾಶಗಳು ಇದ್ದುವೆಂಬುದನ್ನು ತಿಳಿಯಬಹುದು. ಆರಗದಲ್ಲಿ ವಶೀಕೃತ ಮಠವನ್ನು ಕಟ್ಟಿಕೊಂಡಿರುವ ಕುಪಸ್ತ ಕಂಥೆಹರೀಶ್ವರದ ಸಿದ್ಧಮಲ್ಲಿಕಾರ್ಜುನ ದೇವರ ಶಿಷ್ಯರಾದ ಗುರುಲಿಂಗ ದೇವರಿಗೆ ಕೊಟ್ಟ ಕ್ರಯದಾನ ಶಾಸನದ ವಿವರವು "ಕ್ರಿ.ಶ.೧೬೭೯, ಅಕ್ಟೋಬರ್ ೪ರಂದು ರಾಣಿ ಚೆನ್ನಮ್ಮಾಜಿಯು ಕೆಂಚವ್ವನ ಕೋರಿಕೆಯಂತೆ ದಾನಿವಾಸದ ಸೀಮೆ, ಕೊಣನಾಡಪಾಲವಳಗಣ ಹೊಸ ಹಳ್ಳಿಯ ಮಹತ್ತಿನ ಮಠಧರ್ಮಕ್ಕೆ ಶಾಸನ ಬರೆಸಿದರು."[೧೨೦] ಅಲ್ಲದೆ "ಬಿದನೂರಿನ ಕುಂಬಸೆಗೆ ಹೋಗುವ ಮಾರ್ಗದ ಉಜನಿ ಮಹತ್ತಿನ ಮಠದ ಧರ್ಮಕ್ಕೆ ಶ್ರೀಮದೆಡವ ಮುರಾರಿ ಕೋಟೆ ಕೋಳಾಹಳ-ವಿಶುಧವೈದಿಕಾದ್ವೈತ ಸಿದ್ಧಾಂತ ಪ್ರತಿಪಾದಕ ಶಿವಗುರುಭಕ್ತಿ, ಪರಾಯಣರಾದ ಕೆಳದಿ ಸೋಮಶೇಖರ ನಾಯಕರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ ಹುಜುರು ಮೇಳದ ಪುಟ್ಟ ತಾಯಿ ಜಂಬುಖಂಡಿಯ ಚೆನ್ನಿಯೂ ಚೆನಿಗ್ರಾಮದಲ್ಲಿ ಕಟ್ಟಿಸಿದ ಮಹಾಮಹತ್ತಿನ ಮಠಧರ್ಮಕ್ಕೆ ಸ್ವಾಸ್ಥೆ ಬಿಡಬೇಕೆಂದು ಅರಮನೆಗೆ ಕಾಣಿಕೆ ಗ ೩೦೦ ಮುಂನೂರ ವರಹನ ಕೊಟ್ಟು ಕೇಳಿಕೊಂಡು ಬಿಟ್ಟ ಸ್ವಾಸ್ಥೆ" ಎಂಬ ಉಲ್ಲೇಖವಿದೆ. ಅಲ್ಲದೆ ಚೆನ್ನಮ್ಮಾಜಿಯು ಮಹಾಮಹತ್ತಿಗೊಳಗಾದ ಆರನಾಡ ಸೀಮೆ

ಕಂದಡಿಗನಮಾನಿಲು ಮೇಳದ ಶಿವಲಿಂಗಿಯೂ ಕಟ್ಟಿಸಿದ ಮಹತ್ತಿನ ಮಠಧರ್ಮಕ್ಕೆ ಚೆನ್ನಮ್ಮಾಜಿಯರು ಎತ್ತಿನ ಮಾನ್ಯ ಬರೆಸಿಕೊಟ್ಟಳು.

ಪಟಗುಪ್ಪೆ ಸೀಮೆಯ ಜೆನಿಗ್ರಾಮದಲ್ಲಿ 'ಹೊಳೆಯಮ್ಮ'ನು ಕೆರೆಯ ಬಳಿ ಕಟ್ಟಿಸಿದ ಮಹತ್ತಿನ ಮಠಧರ್ಮಕ್ಕೆ ಸೋಮಶೇಖರ ನಾಯಕನು ದಾನ ಶಾಸನ ಬರೆಸಿದನು. ಮಹಾಮಹತ್ತಿನ ಮಠದ ೫ಳನೇ ತಾಮ್ರ ಶಾಸನವು ಕೆಸನೂರ ಸೀಮೆಯ ಕೆರ್ರೆಕೊಪ್ಪದಲ್ಲಿ ನಂಮದಾಗಿ ಬನದಮ್ಮನವರು ಕಟ್ಟಿಸಿದ ಮಹತ್ತಿನ ಮಠ' ಎಂಬ ವಿವರಗಳಿವೆ.

ಚೆನ್ನಮ್ಮಾಜಿಯ ಆಡಳಿತಾವಧಿಯಲ್ಲಿ ಕೆಳದಿ ರಾಜ್ಯಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿ ಡಾ.ಫ್ರಾಯರ್‌ನು ಕೆಳದಿ ರಾಜ್ಯದ ನೆಮ್ಮದಿ ಮತ್ತು ಸುವ್ಯವಸ್ಥೆಯನ್ನು ತನ್ನ ಪ್ರವಾಸ ಕಥನದಲ್ಲಿ ಉಲ್ಲೇಖಿಸಿರುವನು. ಅಲ್ಲದೆ ಕೆಳದಿ ನೃಪವಿಜಯವು ರಾಣಿ ಚೆನ್ನಮ್ಮಾಜಿಯ ಕ್ಷಾತ್ರ ಗುಣವನ್ನು ಹೀಗೆ ವರ್ಣಿಸಿದ್ದಾನೆ.

"ಉನ್ನತ ಶುಭಗುಣಗಣಸಂ
ಪನ್ನತೆಯಿಂ ಕ್ಷಾತ್ರದಾನ ಧರ್ಮಾದಿಗಳಂ
ಚೆನ್ನಮ್ಮಾಜಿಗೆ ಸರಿಯುಹ
ಮನ್ನೆಯರಿಲ್ಲೆನಿಸಿ ರಾಜ್ಯಂ ರಕ್ಷಿಸಿದಳ್"[೧೨೧]

ಎಂಬ ವಿವರಗಳನ್ನು ಲಿಂಗಣ್ಣ ಕವಿ ದಾಖಲಿಸಿದ್ದಾನೆ. ಸಾತಗೆರೆಯಲ್ಲಿ ಬಸವ ಲಿಂಗಮ್ಮಾಜಿಯು ಕಟ್ಟಿಸಿದ ಮಠಕ್ಕೆ ಹಾಗೂ ಮುದುಗೊಪ್ಪದಲ್ಲಿ ಶಾಂತವೀರಪ್ಪನು, ಎಡೆಹಳ್ಳಿಯಲ್ಲಿ ಪುಟ್ಟಣ್ಣನು ಸ್ಥಾಪಿಸಿದ ಮಠಗಳಿಗೆ ಚೆನ್ನಮ್ಮಾಜಿ ದಾನ ನೀಡಿದ್ದಾಳೆ. ರಾಣಿ ಚೆನ್ನಮ್ಮಾಜಿಯು ರಾಜಾರಾಮನಿಗೆ ಮಾಡಿದ ಉಪಕಾರವನ್ನು ಸ್ಮರಿಸಿ ಕೆಳದಿಯ ೨ನೇ ರಾಜಧಾನಿ ಬಿದನೂರಿನಲ್ಲಿ 'ರಾಜಾರಾಮನು ಪಾರ್ವತಿ ದೇವಸ್ಥಾನವನ್ನು ಕಟ್ಟಿಸಿದ್ದಾನೆ.

ಹೀಗೆ ರಾಣಿಯರೂ ಅಲ್ಲದೆ ಸಾಮಾನ್ಯರೂ ಕೂಡ ಧಾರ್ಮಿಕ ಕಾರ್ಯಗಳಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಮಹತ್ತರ ಮಠಗಳು, ಮಹಾಮಹತ್ತಿನಮಠ, ಮಲ್ಲಿಕಾರ್ಜುನ ದೇವರ ದೇವಾಲಯ, ಅನೇಕ ಜಂಗಮ ಮಠ ಸ್ಥಾಪಿಸಿ ಉಂಬಳಿಯಿತ್ತಿರುವರು. "ಚೆನ್ನಮ್ಮಾಜಿಯು ೯೬,೦೦೦ ಜನ ವೀರಶೈವರಿಗೆ ದಾಸೋಹ ಒದಗಿಸಿದ್ದಳು."[೧೨೨] ಇದು ವೀರಶೈವ ಧರ್ಮದಲ್ಲಿ ರಾಣಿಗಿರುವ ಶ್ರದ್ಧೆಯನ್ನು ಬಿಂಬಿಸುತ್ತದೆ.

ಸ್ವಾದಿ ಅರಸರು ವೀರಶೈವ ಧರ್ಮಾನುಯಾಯಿಗಳಾಗಿದ್ದು, ದೊರೆ ರಘುನಾಥನಾಯಕನು ಮಧುಕೇಶ್ವರ ದೇವಾಲಯಕ್ಕೆ ಕಲಾತ್ಮಕವಾದ ಕಲ್ಲುಮಂಚವನ್ನು ಕ್ರಿ.ಶ.೧೬೨೮ರ ಮಹಾ

ಶಿವರಾತ್ರಿಯೆಂದು ಅರ್ಪಿಸಿದನು. ಸ್ವಾದಿ ಮಧುಕೇಶ್ವರ ದೇವಾಲಯದಲ್ಲಿ ಶರಣ ವಿಗ್ರಹಗಳಿರು ವುದನ್ನು ಕಾಣಬಹುದು. ವಿದೇಶಿ ಪ್ರವಾಸಿ 'ಜೆಮೆಲ್ಲಿ ಕರೇರಿಯು' ಸ್ವಾದಿ ಮನೆತನದ ಕಾಲದಲ್ಲಿ ಹಿಂದೂಗಳ ದೇವಸ್ಥಾನದಲ್ಲಿ ನಾನಾ ಬಗೆಯ ವಿಗ್ರಹಗಳಿದ್ದು, ನೋಡುವುದಕ್ಕೆ ಅಸಹ್ಯ, ದುಂಡಾದ ಕರಿಯ ಕಲ್ಲನ್ನು(ಲಿಂಗ) ಪೂಜಿಸುವ ಜನರಿದ್ದಾರೆಂದು ವಿವರಿಸುತ್ತಾನೆ.

ಬೆಳವಡಿ ಸಂಸ್ಥಾನಿಕರು ಕ್ರಿ.ಶ.೧೭ನೇ ಶತಮಾನದ ಕೊನೆಯವರೆಗೂ ಶೈವಧರ್ಮ ಅನುಸರಿಸಿ, ಮುಂದೆ ಈಶ್ವರ ಪ್ರಭುವಿನ ಕಾಲಕ್ಕೆ ಲಿಂಗಾಯತ ಧರ್ಮ ಅನುಸರಿಸಿದಂತಿದೆ. ಸ್ವಾದಿಯ ಮಧುಲಿಂಗನಾಯಕನ ಮಗಳಾದ ಮಲ್ಲಮ್ಮನನ್ನು ಬೆಳವಡಿಯ ದೊರೆ ಈಶಪ್ರಭುವಿಗೆ ವಿವಾಹ ಮಾಡಿಕೊಡಲಾಯ್ತು. ಬೆಳವಡಿ ಮಲ್ಲಮ್ಮ ಎಂದೇ ಪ್ರಸಿದ್ಧಳಾದ ಈಕೆ ತನ್ನ ಶೌರ್ಯ, ಪ್ರೇಮಗಳಿಂದ ಮೆರೆದ ಧರ್ಮಸಹಿಷ್ಣುವಾಗಿದ್ದಳು. ಪ್ರಾಚೀನ ಮಠಗಳಲ್ಲಿ ಒಂದಾದ ಹೂಲಿಯ ಬೃಹನ್ಮಠದ ಚರಪಟ್ಟಾಧಿಕಾರಿಗಳಾದ ಸಿದ್ಧವೀರಶಿವಾಚಾರ್ಯರ ರಾಜನೀತಿ, ಧರ್ಮ, ಶ್ರದ್ಧೆ ಇವು ಮಲ್ಲಮ್ಮನನ್ನು ಧರ್ಮವಂತಳನ್ನಾಗಿಸಿದವು.

ಮಗನಾದ ನಾಗಭೂಷಣನ ಚೌಲಕರ್ಮದ ನಿಮಿತ್ತವಾಗಿ ಪೂವಲ್ಲಿ ಪಂಚವಣ್ಣಿಗಿ ಮಠದ ಸಿದ್ಧವೀರ ಮಹಾಸ್ವಾಮಿಗಳಿಗೆ ಪಟ್ಟಿಹಾರಪುರವನ್ನು, ಸಹಸ್ರ ನಾಣ್ಯಗಳನ್ನು ದಾನವಾಗಿ ಕೊಟ್ಟಿರುವುದನ್ನು ಶಾಸನ 'ಗುರುಂ ಸಮಭ್ಯರ್ಚ್ಯಯಥಾ ವಿಧಾನಂ ಗವಾಶತಂ ನಿಷ್ಕಸಹಸ್ರ ಕಂಚ ಸಮರ್ಪ್ಯ ಪಟ್ಟಾಳಪುರಂ ತಥೈವ ವಿರುಜತೇನ್ಮಿನ್ ಭುವಿ ಮಲ್ಲಮಾಂಬೆ' ಎಂದಿದೆ. ಮುಂದೆ ಮಗನ ವಿವಾಹ ಸಂದರ್ಭದಲ್ಲಿ ಸೊಗಲ ಕ್ಷೇತ್ರದಲ್ಲಿ ಪಾರ್ವತಿ, ಪರಮೇಶ್ವರರಿಗೆ ವಿವಾಹ ಮಂಟಪ ಕಟ್ಟಿಸಿ, ದೇವರ ಪೂಜೆಗೆ ಕೆಲವು ಭೂಮಿ ಕೊಟ್ಟಿರುವಳು. ಬೆಳವಡಿಯ ವೀರಭದ್ರ ದೇವರ ಪೂಜೆಗೆ ಶ್ರೀಪಾದ ಭಟ್ಟ ಬಿನ್ ಕೃಷ್ಣಬಟ್ಟ ಜೋಶಿ ಮಾಮಲೇ ಹುಬ್ಬಳ್ಳಿ ಎಂಬುವರಿಗೆ ಗುಡಿಕಟ್ಟೆ ಗ್ರಾಮದ ಒಂದು ಮಾರು ಹೊಲವನ್ನು ಕೃಷ್ಣಾರ್ಪಣವಾಗಿ, ವಂಶಪಾರಂಪರ್ಯವಾಗಿ ದಾನ ಕೊಟ್ಟಳೆಂಬ ವಿಷಯವು ಸನ್ ೧೭೧೩ನೇ ಇಸ್ವಿಯ ಸನದಿಯಿಂದ ತಿಳಿದುಬರುತ್ತದೆ. ಅಲ್ಲದೆ ಮಲ್ಲಮ್ಮಾಜಿಯು ಶೀಗೆಹಳ್ಳಿ ವೀರಪ್ಪನಿಗೆ ೪೦ ಹಳ್ಳಿಗಳ ಸುಬೇದಾರಿಕೆಯನ್ನು ವಹಿಸಿಕೊಟ್ಟಳು.

ಕ್ರಿ.ಶ.೧೭ನೇ ಶತಮಾನದ ಮಧ್ಯಾವಧಿಯಲ್ಲಿ ಶಿವಭಕ್ತನಾದ ಘಂಟೇಂದ್ರ(೪)ನು ಕಾಡುಮಠದ ಬಸವರಾಜ ದೇವರ ಶಿಷ್ಯನಾದ ಮಹಾಪ್ರಭು ಮಹತ್ತಿನ ಮಠದ ಬಸವಲಿಂಗ ದೇವರ ಶಿಷ್ಯನಾದ ಮಹಾಪ್ರಭು ಮಹತ್ತಿನ ಮಠದ ಬಸವಲಿಂಗ ದೇವನಿಗೆ ಸಿದ್ಧಾಪುರದ ತಮ್ಮ ಮಠದಲ್ಲಿನ ಧರ್ಮಕಾರ್ಯ ನಡೆಸಲು ೧೦೪ ವರಹ ಭೂಮಿಯನ್ನು ಶಿರಗಲಿ, ಚಿಕ್ಕ ಬೈಲಹಳ್ಳಿ ಮತ್ತು ಹೊರಕಾಡುಗಳಲ್ಲಿ ಕೊಟ್ಟನು.

ಬಿಳಗಿಯ ಘಂಟೆಮ್ಮಾಜಿಯು ಮುಮ್ಮಡಿ ಘಂಟೇಂದ್ರನ ಮಗಳು ಹಾಗೂ ಕೆಳದಿ ಅರಸ ಭದ್ರಯ್ಯನ ರಾಣಿ ಶಾಸನವೊಂದರಲ್ಲಿ ಈಕೆಯನ್ನು 'ಶಿವಾಚಾರಸಂಪನ್ನೆ' ಎಂದು ಬಣ್ಣಿಸಲಾಗಿದೆ. ಈಕೆ ತನ್ನ ಮದುವೆಯಲ್ಲಿ ತಂದೆಯಿಂದ ಬಳುವಳಿಯಾಗಿ ಸಿಕ್ಕ ನಾಜೂರು ಮತ್ತು ಅರಮದೂರು (ಬಿಳಗಿ ಸೀಮೆ) ಗ್ರಾಮಗಳ ಉತ್ಪತ್ತಿಯನ್ನು ಪನಗುಂದಿ ವಿರೂಪಾಕ್ಷ ದೇವರ ಮಹತ್ತಿನ ಮಠಕ್ಕೆ ಕ್ರಿ.ಶ.೧೬೬೬ರಲ್ಲಿ ಉಂಬಳಿ ಕೊಟ್ಟಳು. ಬಿಳಗಿ ೮ನೇ ದೊರೆ ವೀರಪ್ಪನ ಪತ್ನಿಯಾದ ವೀರಾಂಬಿಕೆ ೧೫೭೦ರಲ್ಲಿ ವಿರೂಪಾಕ್ಷ ಮಂದಿರ ನಿರ್ಮಿಸಿ ಅದಕ್ಕೆ ಭೂದಾನ ನೀಡಿದಳು.

ಹಾಗಲವಾಡಿಯ ನಾಯಕನಾದ "ಮುದಿಯಪ್ಪ ನಾಯಕನ ಮಗಳಾದ ಚೆಂನಾಜಿ ಅಮ್ಮ ಒಂದು ಗ್ರಾಮವನ್ನು ದಾನ ನೀಡಿರುವಳು."[೧೨೩] ಹಾಗಲವಾಡಿಯಲ್ಲಿ ಮಠಗಳೂ, ಮಠಾಧಿಪತಿಗಳ ಗದ್ದುಗೆಗಳಿವೆ. ಮಠಾಧಿಪತಿಯಾದ ಗುರುಪಾದ ಸ್ವಾಮಿಯ ಗದ್ದುಗೆಯ ಜೊತೆಗೆ ಶರಣೆ ಕಲ್ಲಮ್ಮ ತಾಯಿಯ ಗದ್ದುಗೆಯು ಇರುವುದು ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಯರಿಗೂ ಪ್ರಾಧಾನ್ಯತೆ ಇತ್ತೆಂಬುದನ್ನು ಗುರುತಿಸಬಹುದು.

ಕಳಲೆ ರಾಣಿಯರು ಮಠಗಳನ್ನು ನಿರ್ಮಿಸುವುದರಲ್ಲಿ ಆಸಕ್ತಿ ವಹಿಸುತ್ತಿದ್ದರು. ಇದಕ್ಕೆ ಸಾಕ್ಷಿಯೆಂಬಂತೆ ಮೃತ್ಯುವಿನ ಅತಿಥಿಯಾದ ಮೈಸೂರಿನ ಪ್ರಭುವಿನ ಸ್ಮರಣಾರ್ಥವಾಗಿ ಅರಸಿ ದೇವಾಜಮ್ಮ ಕಳಲೆಯಲ್ಲಿ ಒಂದು ಮಠವನ್ನು ಕಟ್ಟಿಸಿ ಅದನ್ನು ವೀರಶೈವ ಮಹಾಮಹತ್ತಿನ ಮಠಕ್ಕೆ ಒಪ್ಪಿಸಿದಳು. ಆ ಮಠಕ್ಕೆ ಶಿವಾರ್ಪಿತವಾಗಿ ಕುರಹಟ್ಟಿ, ಸಂಬಪುರ, ಉಪ್ಪಿನಹಳ್ಳಿ ಗ್ರಾಮ ಗಳನ್ನು ದಾನವಾಗಿ ನೀಡಿದಳು. ಹಾಗೆಯೇ ಕಳಲೆಯ ರಾಜಕುಮಾರಿಯಾದ ಮಲ್ಲಾಜಮ್ಮ ಶಿಲಾಮಠವೊಂದನ್ನು ಕಟ್ಟಿಸಿದಳು. ಅರಸಿ ಲಕ್ಷ್ಮಮ್ಮಣಿಯು ಕಳಲೆಯ ಲಕ್ಷ್ಮೀಕಾಂತ ಸ್ವಾಮಿ ದೇವಾಲಯಕ್ಕೆ ಬೆಳ್ಳಿಯ ತಟ್ಟೆ ಕಂಚಿನ ಗಂಟೆಯನ್ನು ಕಾಣಿಕೆಯಾಗಿ ಅರ್ಪಿಸಿದಳು. ಬಸವರಾಜೈಯನ ಪತ್ನಿ ಮೀನಾಕ್ಷಮ್ಮ ಎಡೆಯೂರು ಸಿದ್ಧಲಿಂಗೇಶ್ವರ ಗುಡಿಗೆ ಗಂಟೆಯನ್ನು ಕೊಡುಗೆಯಾಗಿ ಕೊಟ್ಟಳೆಂದೂ, ಇಂದು ಸಹ ಕಳಲೆಯಲ್ಲಿ ಶ್ರೀ ಲಕ್ಷ್ಮೀಕಾಂತಸ್ವಾಮಿ ದೇವಾಲಯದ ಮುಂದೆ ಬಲಗಡೆ ಇರುವ ಅರಸಿ ಚೆಲುವಾಜಮ್ಮಣ್ಣಿ ನಿರ್ಮಿತ ಮಂಟಪದಲ್ಲಿ ನವರಾತ್ರಿ ೯ ದಿನಗಳು ದೇವರನ್ನು ವಿಜಯಮಾಡಿಸಿ ಉತ್ಸವಗಳನ್ನು ನಡೆಸಲಾಗುತ್ತದೆ. ಎಡಗಡೆ ಇರುವ ಲಕ್ಷ್ಮಮ್ಮಣ್ಣಿ ಕಟ್ಟಿಸಿದ ಮಂಟಪದಲ್ಲಿ ಕಾರ್ತಿಕ ಮಾಸದಲ್ಲಿ ೨ ದಿನಗಳು ದೀಪೋತ್ಸವ ಮಾಡಲಾಗುತ್ತದೆ. ಹೀಗೆ ಸ್ತ್ರೀಯರೂ ಧಾರ್ಮಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಿಗೆ ತಮ್ಮದೇ ಆದ ಕೊಡುಗೆ ಕೊಟ್ಟಿದ್ದಾರೆ.

ಕಳಲೆಯಲ್ಲಿ ಸೋಮೇಶ್ವರ ದೇಗುಲ, ಮಲ್ಲೇಶ್ವರ ದೇಗುಲ, ರೇವಣಸಿದ್ಧೇಶ್ವರ ದೇಗುಲ, ಅಲ್ಲೇ ಇರುವ ಪಟ್ಟದ ಚಾವಡಿ ಕಳಲೆ ಅರಸರಿಗೆ ಪಟ್ಟಗಟ್ಟುತ್ತಿದ್ದ ಸ್ಥಳವಾಗಿತ್ತು. ದೇಗುಲ ನಂಜರಾಜನು ಚಾಮರಾಜ ತಾಲ್ಲೂಕಿನ ಹರದನಹಳ್ಳಿಯ ದಿವ್ಯಲಿಂಗೇಶ್ವರ ದೇವಾಲಯಕ್ಕೆ

ತಾಂಡಲೇಶ್ವರ ವಿಗ್ರಹ ಮತ್ತು ಉತ್ಸವಮೂರ್ತಿ ಪಾರ್ವತಿ ಅಮ್ಮನವರ ವಿಗ್ರಹ ನೀಡಿದ್ದಾನೆ. ಹೀಗೆ ಕಳಲೆ ಮನೆತನದ ರಾಜರೊಂದಿಗೆ ರಾಣಿಯರೂ ಧಾರ್ಮಿಕ ಚಟುವಟಿಕೆಗಳಲ್ಲಿ ಪಾಲುದಾರರಾಗಿದ್ದಾರೆ.

ಉನ್ನತ ವ್ಯಕ್ತಿತ್ವವನ್ನು ಹೊಂದಿದ ಸಿರಸಂಗಿ ರಾಣಿ ಚೆನ್ನಮ್ಮ ಸರ್ವಧರ್ಮ ಸಮನ್ವಯಕಾರಳು. ಧರ್ಮನಿಷ್ಠೆ, ಉನ್ನತ ಗುಣ, ಶೀಲಗಳಿಂದ ಸಂಸ್ಥಾನದ ಜನತೆಯ ಪ್ರೀತಿಯನ್ನು ಗಳಿಸಿದ್ದಳು. ಸಂಸ್ಥಾನದ ಆಯಕಟ್ಟಿನ ಬಣಗು ಪ್ರದೇಶಗಳಲ್ಲಿ ಬಡವರಿಗಾಗಿ ಧರ್ಮಾರ್ಥ, ಅನ್ನದಾಸೋಹ, ಅರವಂಟಿಕೆಗಳನ್ನು ಏರ್ಪಡಿಸಲಾಯಿತು. ಗ್ರಾಮದೇವತೆಯಾದ ಕಾಳಿಕಾಂಬೆ, ವಿನಾಯಕ, ಈಶ್ವರ ಮುಂತಾದ ದೇವ ದೇವತೆಗಳು, ಜಾತ್ರೆ, ಉತ್ಸವ, ಪುರಾಣ, ಪುಣ್ಯಕಥೆಗಳು, ಬಯಲಾಟ, ಗ್ರಾಮೀಣ ಪ್ರದೇಶಗಳ ಕಲೆ ಹೀಗೆ ಹಲವಾರು ಪ್ರಜಾಹಿತ ಕಾರ್ಯಗಳನ್ನು ವರ್ಷದುದ್ದಕ್ಕೂ ಜರುಗಿಸಿ, ಸಿರಸಂಗಿಯ ಸರ್ವತೋಮುಖ ಏಳ್ಗೆಗೆ ಚೆನ್ನಾಂಬೆ ಬಹುಮುಖ ಸೇವೆಯನ್ನು ಸಲ್ಲಿಸಿದಳು.

ಸುಗಟೂರಿನ ರಾಣಿ ಹಲಸರಾ ಕ್ರಿ.ಶ.ಸು.೧೫೦೦ರಲ್ಲಿ ಆವನಿ ಬೆಟ್ಟದ ಧನುಷ್ಕೋಟಿ ತೀರ್ಥದ ಉತ್ತರ ಕಡೆಯ ಬಂಡೆಯ ಮೇಲೆ ದೇವತೆಗಳು ಬಂದು ಸೀತಾಭಗವತಿಗೆ ಪ್ರಸನ್ನವಾದ ಸ್ಥಳವೆಂದು ಉಲ್ಲೇಖಿಸುವ ಶಾಸನದ ಬಳಿಯಲ್ಲಿ ೧೬ ದೇವತೆಗಳ ಏಕಪಾದಗಳ ಶಿಲ್ಪವನ್ನು ಬಿಡಿಸಿ, ಅವುಗಳ ಕೆಳಗೆ ವಿಷ್ಣು, ರುದ್ರ, ಸೀತೆ, ಕಾರ್ತಿಕೇಯ, ಕಾಮದೇವ, ದಕ್ಷಿಣಾನ್ನಿ, ಅಹವಾನಿಯ, ಗ್ರಾಹಸ್ಪತ್ಯ ಮತ್ತು ವಾಲ್ಮಿಕಿ ಎಂದು ದೇವತೆಗಳ, ಋಷಿಗಳ ಹೆಸರನ್ನು ಕೆತ್ತಿಸಿ ಪಿತೃಗಳಿಗೆ ಪಿಂಡದಾನ ಮಾಡಿರುವ ವಿಷಯವಿದೆ.

ಬೆಣ್ಣಂಗೂರಿನ ಚೆನ್ನಮ್ಮನೆಂಬ ಶಿವಶರಣೆ, ಅಲ್ಲಮ ಪ್ರಭುಸ್ವಾಮಿ ಸಂಪ್ರದಾಯಕ್ಕೆ ಸೇರಿದ ಬಸಪ್ಪದೇವ ಎಂಬುವವನಿಗೆ ಚೌಡೇಪಲ್ಲಿ ಗ್ರಾಮದಲ್ಲಿ ಹೊಸದಾಗಿ ಮಠವನ್ನು ಕಟ್ಟಿಸಿದ್ದಾಳೆ. ಆಗ ಕ್ರಿ.ಶ.೧೭೪೪ರಲ್ಲಿ ಇಮ್ಮಡಿ ಚಿಕ್ಕರಾಯ ತಮ್ಮೇಗೌಡನು ದತ್ತಿ ನೀಡಿ ಆ ಮಠದ ನಿರ್ವಹಣೆಗೆ ಕಾರಣನಾದನು. ಪುಂಗನೂರಿನ ಲಿಂಗಾಯತ ಮಠದಲ್ಲಿರುವ ಶಾಸನ ೧೬೪೭ಕ್ಕೆ ಸೇರಿದ್ದು ಇಮ್ಮಡಿ ಚಿಕ್ಕರಾಯ ತನ್ನ ತಾಯಿಗೆ ಪುಣ್ಯವಾಗಲೆಂದು ದತ್ತಿ ಬಿಟ್ಟನು.

"ಮುಮ್ಮಡಿ ತಮ್ಮೇಗೌಡನು ನಗರತೇಶ್ವರ ದೇವರ ಶಿಷ್ಯರಾದ ಮಹಾದೇವರಿಗೆ ಕೋಟೂರು, ಹೊಸಹಳ್ಳಿ>ವೀರಪುರವನ್ನು ತನ್ನ ತಂದೆತಾಯಿಗಳಿಗೆ ಪುಣ್ಯವಾಗಬೇಕೆಂದು ದತ್ತಿ ನೀಡಿ, ಆ ಊರಿನ ಬಸವಲಿಂಗದೇವರ ಗುಡಿಯನ್ನು ಮಠವನ್ನಾಗಿಸಿ ಕಟ್ಟಿಸಿದನೆಂದು"[೧೨೪] ದಾಖಲಾಗಿದೆ.

ಕುರುಗೋಡು ಸಿಂಧವಂಶದ ರಾಣಿಯಾದ ಏಚಲದೇವಿಯು ಕುರುಗೋಡದ ಉಜಾಳೇಶ್ವರ ದೇವಾಲಯದ ಅಂತರಾಳದ ದ್ವಾರಶಾಖೆಗಳ ಕೆಳಭಾಗದಲ್ಲಿ ಚೌರಿಯನ್ನು ಹಿಡಿದು ನಿಂತಿರುವ

೨ ಮೂರ್ತಿಗಳನ್ನು ಕೆತ್ತಲಾಗಿದೆ. ತ್ರಿಭಂಗಿಯಲ್ಲಿರುವ ಇವುಗಳ ಕೆಳಗೆ 'ಶ್ರೀ ಲೋಕಾಪುರದ ಏಚಲದೇವಿ' ಎಂಬ ಶಾಸನವನ್ನು ಬರೆಯಲಾಗಿದ್ದು, ಪ್ರಸ್ತುತ ಉಜಾಳೇಶ್ವರ ದೇವಾಲಯವನ್ನು ಏಚಲದೇವಿ ಕಟ್ಟಿಸಿರಬೇಕು. ಇವಳ ತವರುಮನೆ ಲೋಕಾಪೂರವಾಗಿರಬೇಕೆಂದು ಹಿರೇಮಠರು ಅಭಿಪ್ರಾಯಪಡುತ್ತಾರೆ. ೨ನೇ ಸೊಮೇಶ್ವರನ ಅಗ್ರಮಹಿಷಿ ಗಂಗಾಮಹಾದೇವಿಯು ವೀರ ಸೋಮೇಶ್ವರ ಮತ್ತು ಗಂಗಾಧರೇಶ್ವರ ಎಂಬ ೨ ಶಿವ ದೇವಾಲಯ ಕಟ್ಟಿಸಿ, ಅವುಗಳ ಪೂಜಾದಿ ಕಾರ್ಯಗಳಿಗೆ 'ಕೆರಮರ್ಕ' ಎಂಬ ಊರನ್ನು ದಾನವಾಗಿ ಬಿಡುತ್ತಾಳೆ. "ಕುರುಗೋಡಿನ ಮಲ್ಲಪ್ಪ ನಾಯಕನ ಹೆಂಡತಿಯಾದ ಬಲ್ಲಕುಂದೆಯ ಮಲ್ಲಮ್ಮನು ಹೂಜೇಹಾಳ ಶಾಂತಮಲ್ಲಿಕಾರ್ಜುನ ದೇವರ ದೇವಾಲಯದ ಬಾವಿಯನ್ನು ಜೀರ್ಣೋದ್ಧಾರ ಮಾಡಿ ಅದಕ್ಕೆ ತೋಟವನ್ನು ದಾನವಾಗಿ ಬಿಟ್ಟಳೆಂದು ಉಲ್ಲೇಖಿಸಲಾಗಿದೆ."[೧೨೫]

ಹಾಲೇರಿಯ ಕೊನೆಯ ದೊರೆಯಾದ ಚಿಕ್ಕವೀರರಾಜೇಂದ್ರನ ಪಟ್ಟದರಾಣಿ ನಂಜಮ್ಮಾಜಿ ಇಂಗ್ಲೆಂಡಿನಲ್ಲಿಯೇ ಮರಣ ಹೊಂದಿದ ಅರಸನ ಶವವನ್ನು ರಾಣಿ ವಿಕ್ಟೋರಿಯಾಳ ಅನುಮತಿ ಪಡೆದು ಸ್ವದೇಶಕ್ಕೆ ತಂದು, ಕಾಶಿ ಜಂಗಮವಾಡಿ ಮಠದ ಲಿಂಗಮುದ್ರೆ ಕಲ್ಲಿನೊಳಗೆ ಕ್ರಿ.ಶ.೧೮೬೨ರಲ್ಲಿ ಸಮಾಧಿ ಮಾಡಲಾಯ್ತು.

'ಶವಕ್ಕೆ ವಿಧಿವತ್ತಾದ ಸಂಸ್ಕಾರವಿಲ್ಲದೆ ಹೋದರೆ ಆತ್ಮಕ್ಕೆ ತೃಪ್ತಿಯಿಲ್ಲವೆಂಬ ಸಾಂಪ್ರದಾಯಿಕ ನಂಬಿಕೆ ಹಾಗೂ ಪರದೇಶದೊಳಗೆ ಪರದೇಶಿಯಾಗಿ ತನ್ನ ಪತಿಯ ದೇಹ ಉಳಿಯಬಾರದೆಂಬ' ಉದ್ದೇಶದಿಂದ ರಾಣಿ ಶವಕ್ಕೆ ವಿಧಿವತ್ತಾದ ಸಂಸ್ಕಾರಕ್ರಿಯೆ ಮಾಡಿದಳು. ಮಗನಾದ ಲಿಂಗರಾಜೇಂದ್ರನ ಸಮಾಧಿಯೂ ಇಲ್ಲೇ ಇದೆ. ವೀರೇಶ್ವರ, ಲಿಂಗೇಶ್ವರ ಹೆಸರಿನ ಎರಡು ದೇವಾಲಯ ನಿರ್ಮಿಸಲಾಗಿದೆ. ಸಮಾಜದಲ್ಲಿ 'ಲಿಂಗಧಾರಣೆ' ಪದ್ಧತಿ ರೂಢಿಯಲ್ಲಿತ್ತು. ಮುದ್ದುರಾಜನು ತನ್ನ ವಿಧವೆ ಮಗಳಾದ ನೀಲಮ್ಮಾಜಿಯ ಮಾನಸಿಕ, ನೈತಿಕ ನೆಮ್ಮದಿಗಳಿಗೆ ಹಾಗೂ ಸದ್ಬೋಧೆಗಾಗಿ ಕ್ರಿ.ಶ.೧೯೪೦ರಲ್ಲಿ ಅರಮೇರಿಯಲ್ಲಿ ಮಠವನ್ನು ಕಟ್ಟಿಸಿ, ಗುರುಸಿದ್ಧಲಿಂಗ ದೇವನನ್ನು ನೇಮಿಸಿದನು. ಆ ಮಠದ ಗುರುವಿನಲ್ಲಿ ಉಪದೇಶ ಪಡೆದು ಲಿಂಗೈಕ್ಯಳಾದ ಮೇಲೆ ಅರಮೇರಿಯ ನಾಯಕಂಡ ಓನ್‌ಮನೆ ಎದುರು ಕೈಮಡ ಕಟ್ಟಿ, ವಾರ್ಷಿಕವಾಗಿ ಇಂದಿಗೂ ಆಕೆಗೆ ಸಿಹಿಮೀದಿ(ಎಡೆ) ಇಟ್ಟು ಈ ಮನೆತನದವರು ಪೂಜಿಸುತ್ತಾರೆ. ಕ್ರಿ.ಶ.೧೮೧೨ರಲ್ಲಿದ್ದ ಶಿವಾನಂದ ಸ್ವಾಮಿಗಳು ರಾಣಿ ದೇವಮ್ಮಾಜಿಯ ಕುಲಗುರುಗಳಾಗಿದ್ದರೆಂದು ತೋರುತ್ತದೆ.

ಮಧುಗಿರಿ, ಬಜ್ಜಾವರದ ರಾಣಿಯಾದ ಸೋಮಾಂಬೆಯು ಕರಿತಿಮ್ಮ ಚಿಕ್ಕಪ್ಪಗೌಡರ ಮಗಳೂ, ಇಮ್ಮಡಿ ಚಿಕ್ಕಭೂಪಾಲನ ಪತ್ನಿಯೂ ಆದ ಈಕೆ ರೂಪವತಿಯಾಗಿದ್ದಳು.

ರಾಣಿ ಚೆನ್ನಬಸಮ್ಮ ಧಾರ್ಮಿಕ ಪ್ರವೃತ್ತಿಯವಳಾಗಿದ್ದು, ಪತಿ ತೋಟೇಂದ್ರ ಯುದ್ಧದಲ್ಲಿ ಮಡಿದಾಗ, ಪರಮ ಪಂಚಾಕ್ಷರಿ ಮಂತ್ರ ಜಪಿಸುತ್ತಾ ಶ್ರೀಗುರು ಸಿದ್ದಮಲ್ಲಿಕಾರ್ಜುನನ ಚರಣವನ್ನು ಮಂಡೆಯೊಳಿಟ್ಟು ಲಿಂಗವ ನೋಡಿ ಲಿಂಗವ ಬೆರೆಸಿದಳು ಆತ್ಮವಲ್ಲಭನ ಎಂದು ವರ್ಣಿಸಿರುವುದು ಸತಿಪದ್ಧತಿಯ ಆಶಯವಿದ್ದರೂ ಲಿಂಗಾಯತ ಧರ್ಮದ 'ಶರಣಸತಿ ಲಿಂಗಪತಿ' ತತ್ವ ಹಾಗೂ 'ಮರಣವೇ ಮಹಾನವಮಿ' ಎಂಬ ತತ್ವಾಚರಣೆಯ್ನು ಸೂಚಿಸುತ್ತದೆ. "ಕ್ರಿ.ಶ.೧೫೩೦ರಲ್ಲಿ ಶ್ರೀ ವ್ಯಾಸರಾಯ ಗುರುಗಳು ಶಿಷ್ಯರೊಡನೆ ಬಿಜ್ಜಾವರಕ್ಕೆ ದಯಮಾಡಿಸಿದಾಗ ಅವರು ಶ್ರೀ ಚಕ್ರವನ್ನು ಸ್ಥಾಪಿಸಿ, ಅದರ ಮೇಲೆ ಬಿಜ್ಜಮಹಾದೇವಿಯ ಸುಂದರವಾದ ವಿಗ್ರಹ ಪ್ರತಿಷ್ಠಾಪಿಸಿ, ಪೂಜೆಯನ್ನು ಮಾಡಲು ಆದೇಶವಿತ್ತರು. ಮುಂದೆ ಈ ದೇವಿ ರಕ್ಷಣಾದೇವಿಯಾಗಿ ದಂಡಿನ ಮಾರೆಮ್ಮನೆನಿಸಿ ಕೊಂಡು ಪ್ರಸಿದ್ಧಳಾಗಿ ಇಂದಿಗೂ ಪೂಜೆಗೊಳ್ಳುತ್ತಿದ್ದಾಳೆಂಬ ಉಲ್ಲೇಖವಿದೆ."[೧೨೬] ಸಾಮಾನ್ಯ ಮಹಿಳೆಯರು ಧಾರ್ಮಿಕ ಕಾರ್ಯದಲ್ಲಿ ಪಾಲ್ಗೊಳ್ಳುತ್ತಿದ್ದರು. 'ಕೂಡುತ್ತಿ' ಎಂಬ ಕೋಟೆ ದೇವಾಲಯಗಳ ನಿರ್ಮಾಣದಲ್ಲಿ ಊರಗೌಡರು ಹಾಗೂ ಸಾರ್ವಜನಿಕರು ಸೇವೆ ಸಲ್ಲಿಸಿದರು. ಅದರಲ್ಲೂ 'ಜಿರಲೆ ಮಲ್ಲಮ್ಮ' ೧೮೯೨ ವರಹಗಳ ಸಾಲವನ್ನು ತೀರಿಸುವುದಲ್ಲದೆ, "ದೇವಾಲಯಗಳ ಮುಂದೆ ಮಣ್ಣುಹಾಕಲು ೨೦ ವರಹ, ಕಲ್ಲುಹಾಕಲು ೨೦ ವರಹ, ಬಾವಿ ತೋಡಲು ೧೦ ವರಹ, ಪುಣ್ಯ ಮಾಡಿಸಲು ೧ ವರಹ, ಅನ್ನ ಸಂತರ್ಪಣೆಗೆ ೬೦ ವರಹ, ಗುರುಗಳಿಗೆ ೭ ವರಹ ಒಟ್ಟಾರೆಯಾಗಿ ೨೦೪ ವರಹಗಳನ್ನು ಸಾಮಾನ್ಯ ಸ್ತ್ರೀಯೊಬ್ಬಳು ದಾನ ಮಾಡಿದ್ದು, ಕರ್ನಾಟಕ ಇತಿಹಾಸದಲ್ಲೇ ಅತ್ಯದ್ಭುತ ದಾನವಾಗಿದೆ."[೧೨೭]

ಕಿತ್ತೂರಿನ ರಾಣಿ ಚೆನ್ನಮ್ಮಾಜಿಯು ಜಂಗಮ ಭಕ್ತೆ. ಕಿತ್ತೂರು ಸಂಸ್ಥಾನದ ೮೦೦ ಹಳ್ಳಿಗಳಲ್ಲಿ ಒಂದೊಂದು ಜಮೀನು ಹಾಗೂ ಅದಕ್ಕೆ ಒಂದೊಂದು ಮಠ, ಅದಕ್ಕೆ ತಕ್ಕ ಜಮೀನು ಹಾಗೂ ಅದಕ್ಕೊಬ್ಬ ಸ್ವಾಮಿಗಳು ಇದ್ದರು. ಮಠಕ್ಕೆ ಬಂದ ಅತಿಥಿ ಅಭ್ಯಾಗತರಿಗೆ ಅಲ್ಲಿ ಆಶ್ರಯ ದೊರೆಯುತ್ತಿತ್ತು. ಈ ಆಡಳಿತಕ್ಕಾಗಿ 'ಸಾವಿರಮಠ' ಎಂಬ ಗುರುಪೀಠವನ್ನು ನಿರ್ಮಿಸಲಾಗಿತ್ತು.

ಕಿತ್ತೂರ ನಾಡು ಥ್ಯಾಕರೆಯ ದುರಾಡಳಿತಕ್ಕೆ ಒಳಗಾದಾಗ ಸಂಸ್ಥಾನದ ಖಜಾನೆಯು ಬೀಗಮುದ್ರೆಯಲ್ಲಿ ಸಿಕ್ಕಿಕೊಂಡಾಗ ರಾಣಿ ಚೆನ್ನಮ್ಮ ಬ್ರಿಟಿಷ್ ಗೌರ್ನರನಿಗೆ ಬರೆದ ಪತ್ರವು ರಾಣಿಯ ಜಂಗಮನಿಷ್ಠೆಯನ್ನು ಪ್ರತಿಪಾದಿಸುತ್ತದೆ. "Mr.Thackery requested an interview with us we feeling that the Samsthan was in his hands and that to him we must look for every thing Replied to all respecting which he asked us he begged for the keys. we gave them and he opening the treasary counted the treasure and sealed it with his own seal. The expenses of the samstan are great. `Many Jangamas' are

Constantly coming here for giving alms to whom no appropriate place has been reserved we never go out. for friendships sake. However. we had an interview with Mr.Thackary to this God has reduses"[೨೭] ಎಂಬ ಮಾತುಗಳು ಚೆನ್ನಮ್ಮನ ಧರ್ಮ ಪ್ರಿಯತೆಯನ್ನು, ಜಂಗಮನಿಷ್ಠೆಯನ್ನು ವ್ಯಕ್ತಪಡಿಸುತ್ತವೆ.

ಗೆಜ್ಜಲಗಟ್ಟೆ ರಾಣಿ ಲಕ್ಷ್ಮೀದೇವಿಯು ದಿವ್ಯತಪಸ್ವಿಗಳಾದ ಸಂತೆಕಲ್ಲೂರಿನ ಘನಮಠದ ಸ್ವಾಮಿಗಳ ದರ್ಶನ ಪಡೆಯಲು ಬಯಸಿ, ತಾನು ಬರುವಾಗ ಹತ್ತು ವರ್ಷದ ಹುಡುಗರ ಹೊರತಾಗಿ ಯಾವ ಗಂಡಸು ಅಲ್ಲಿರಬಾರದೆಂದು ಕಟ್ಟಳೆ ವಿಧಿಸಿ, ಸ್ವಾಮಿಗಳ ಪೂಜೆಗೆಂದು ಬೆಳ್ಳಿಯ ಸಾಮಾನುಗಳನ್ನು ಒಯ್ದು, ಅವನ್ನು ಸ್ವೀಕರಿಸಬೇಕೆಂದು ಸ್ವಾಮಿಗಳಲ್ಲಿ ವಿನಂತಿಸಿಕೊಂಡಳು. 'ಏನಮ್ಮ ತಾಯಿ ನಿನ್ನನ್ನು ನನ್ನ ತಲೆಯ ಮೇಲೆ ಹೊತ್ತುಕೊಂಡು ಹೋಗಲೇ' ಎಂದು ರಾಣಿಯ ವಿಳಾಸವಿರುವ ವಸ್ತುಗಳನ್ನು ನಿರಾಕರಿಸಿದರು. ಇದರಿಂದ ರಾಣಿಯು ಎಚ್ಚೆತ್ತುಕೊಂಡಳು. ಅಧಿಕಾರ, ರಾಜಭೋಗ, ವಿಲಾಸಗಳು ನಶ್ವರ ಎಂಬುದನ್ನು ಅರಿತು ಸಮಾಜ ಸೇವೆಯನ್ನು ಮಾಡಿದಳು. ಗುರು-ಲಿಂಗ ಜಂಗಮರಲ್ಲಿ ಶ್ರದ್ಧೆಯುಳ್ಳವಳಾಗಿ ದಾಸೋಹ ಕಾಯಕದಲ್ಲಿ ನಿರತಳಾದಳು. ಪಾಠಶಾಲೆ, ಮಠ-ಮಂದಿರ ನಿರ್ಮಿಸಿ, ನಿತ್ಯದಾಸೋಹ ಏರ್ಪಡಿಸಿದಳು. ಅಲ್ಲದೆ ತನ್ನ ಜಹಗೀರ್ ಗ್ರಾಮಗಳಲ್ಲಿರುವ ೧೪-೧೫ ಮಠ ದೇವಾಲಯಗಳಲ್ಲಿ ನಿತ್ಯ ಆರಾಧನೆ ಮತ್ತು ಪೂಜಾಕೈಂಕರ್ಯಗಳು ನಡೆಯಲು ಭೂಮಿಯನ್ನು ಇನಾಮಾಗಿ ನೀಡಿದಳು. ತಮ್ಮ ಮನೆತನದ ಕುಲದೈವವಾದ ಕೊಳ್ಳದ ಅಮರೇಶ್ವರ ದೇವಸ್ಥಾನಕ್ಕೆ ೨೦೦ ಎಕರೆ ಭೂಮಿ ನೀಡಿ ದೈವಭಕ್ತಿಯನ್ನು ಮೆರೆದಳು. ಜಡಿಸ್ವಾಮಿಮಠ, ರುದ್ರಸ್ವಾಮಿಮಠ, ಕೋಡಿಮಠ, ಸಾಲಿಮಠ, ಉದ್ದಾನಮಠ, ಪಟ್ಟದ ಕಾಂತಿಮಠಗಳಿಗೆ ಸಾಕಷ್ಟು ಇನಾಮು ಹಾಕಿಕೊಟ್ಟಿರುವಳು. ನಂದವಾಡಗಿ ಸ್ವಾಮಿಗಳು, ಹಲದಿಮಾನ ಸ್ವಾಮಿಗಳು, ಪರ್ವತಶಾಸ್ತ್ರಿಗಳು ಮೊದಲಾದ ಮಠದ ಸ್ವಾಮಿಗಳಿಗೆ ಭೂಮಿ ನೀಡಿ ಸತ್ಕರಿಸಿದಳು. ಬಳ್ಳಾರಿಯ ಸಕ್ರಿ ಕರಡೆಪ್ಪ ಪಾಠಶಾಲೆ ಮತ್ತು ಜಂಗಮ ದಾಸೋಹ ಮೂರ್ತಿಗಳಿಗೆ ಭೂಮಿಯನ್ನು ನೀಡಿ ಅವರನ್ನು ಪೋಷಿಸಿದಳು.

ಜವಳಗೆರೆ ಉಮನಾಬಾಯಿ ಧರ್ಮಕ್ಕೆ ಅಪಾರವಾದ ಕೊಡುಗೆ ನೀಡಿದ್ದಳು. ಸಂಸ್ಥಾನಕ್ಕೆ ಆಸ್ಥಾನ ಪಂಡಿತ ಮನೆತನವನ್ನು ತಂದುಕೊಟ್ಟ ಕೀರ್ತಿ ಈ ರಾಣಿಗೆ ಸಲ್ಲುತ್ತದೆ. ಆಂಧ್ರಪ್ರದೇಶದ ಬದಗಾನಪಲ್ಲಿ ಮಠದ ಚರಪಟ್ಟಾಧ್ಯಕ್ಷರಾದ ಪಂಡಿತಾರಾಧ್ಯ ಶಾಸ್ತ್ರಿಗಳನ್ನು ಮಠ ಕಟ್ಟಲು ಭೂದಾನವನ್ನು ಮಾಡಿದಳು. ಜವಳಗೆರೆಯ ಅಂಬಾದೇವಿಯ ದೇವಸ್ಥಾನದ ತೇರಿಗೆ ಕಳಸಾರೋಹಣ ಹಕ್ಕಿಗಾಗಿ ಜವಳಗೆರೆ ಮತ್ತು ಸೋಮಲಾಪುರದ ದೇಸಾಯರಿಗೂ ಬಹುದಿನಗಳಿಂದ ಇದ್ದ ವ್ಯಾಜ್ಯವನ್ನು ಜವಳಗೆರೆಯ ಯುವಕ ವೆಂಕಟರಾವ್‌ನು ತೇರಿನ ಮೇಲೇರಿ ಕಳಸಾರೋಹಣ ಮಾಡಿ ಸಂಕಲ್ಪವನ್ನು ಪೂರೈಸಿದನು.

### ೪.೩.೫. ಇಸ್ಲಾಂಧರ್ಮ

ಭಾರತದ ಚರಿತ್ರೆ ಕೇವಲ ರಾಜರ ಏಳು ಬೀಳಿನ ಕಥೆಯಾಗಿರದೇ ಅನೇಕ ಧರ್ಮ ಸಂಸ್ಕೃತಿಗಳ ಸಂಗಮವಾಗಿದೆ. ವ್ಯಾಪಾರದ ಉದ್ದೇಶದಿಂದ ಭಾರತವನ್ನು ಪ್ರವೇಶಿಸಿದ ಅರಬ್ಬರು ಭಾರತದಲ್ಲಿ ನೆಲೆಯೂರಿ, ಮುಸ್ಲಿಂಧರ್ಮ ಪ್ರಚಾರ, ಮತಾಂತರಗಳಿಗೆ ಆದ್ಯತೆ ನೀಡಿದರು. ಮೇಲ್ವರ್ಗದ ಹಿಂದೂಗಳಿಂದ ಕಡೆಗಣಿಸಲಾದ ಹಿಂದೂಗಳನ್ನು ಮುಸ್ಲಿಮರು ಮತಾಂತರಿಸಿದರು. ಮಹಮದ್ ಪೈಗಂಬರನಿಂದ ಮುಸ್ಲಿಂ ಧರ್ಮದ ಜ್ಞಾನವು ವಿಸ್ತಾರ ರೂಪವನ್ನು ಪಡೆಯಿತು. ಜೀವನದ ಸತ್ಯತೆ, ಸಾರ್ಥಕತೆ, ಸಿದ್ಧಿಯನ್ನು ಜನಪ್ರಿಯಗೊಳಿಸಲಾಯ್ತು. ಪವಿತ್ರ ಗ್ರಂಥವಾದ ಖುರಾನ್ ದೇವರೊಬ್ಬನೇ, ಆತನೇ ಅಲ್ಲಾ! ಅವನನ್ನು ನಂಬಿದರೆ ಸದ್ಗತಿ ದೊರೆಯುವುದೆಂಬುದಾಗಿ ಉಪದೇಶಿಸಲಾಯ್ತು. ಈ ಹಿನ್ನೆಲೆಯಲ್ಲಿ ವಿಶ್ವದ ವಿವಿಧ ಭಾಗಗಳಲ್ಲಿಯ ಜನರನ್ನು ಇಸ್ಲಾಂ ಧರ್ಮಕ್ಕೆ ಪರಿವರ್ತಿಸಲು ವಿಶ್ವಪ್ರಯತ್ನ ಮಾಡಿತು. ಹೀಗೆ ಹೊರರಾಷ್ಟ್ರದಿಂದ ಬಂದ ಇಸ್ಲಾಂ ಧರ್ಮ ಭಾರತದಲ್ಲಿ ರಾಜ್ಯ ಕಟ್ಟಿ ಆಳಿತು. ಅಲ್ಲದೆ ಅನ್ಯಮತೀಯ ರಾಜರಿಂದ, ರಾಣಿಯರಿಂದ ಮಾನ್ಯತೆಯನ್ನು ಪಡೆಯಿತೆನ್ನಬಹುದು.

ಇಸ್ಲಾಂಧರ್ಮಕ್ಕೆ ಇಕ್ಕೇರಿ ಸಂಸ್ಥಾನಿಕರು ಅಮೂಲ್ಯ ಸಹಕಾರ ನೀಡಿದರು. ಹಿರಿಯ ವೆಂಕಟಪ್ಪನಾಯಕರು ಭುವನಗಿರಿ ಮಾರ್ಗದಲ್ಲಿ ಕ್ರಿ.ಶ.೧೬೨೮ರಲ್ಲಿ ಇಸ್ಲಾಂಧರ್ಮದ ರಕ್ಷಣೆ ಹಾಗೂ ಅಭಿವೃದ್ಧಿಗೆ ಮಸೀದಿಯೊಂದನ್ನು ನಿರ್ಮಿಸಿದನು. ಕೆಳದಿಯ ವೀರ ರಾಣಿಯಾದ ಚೆನ್ನಮ್ಮಾಜಿಯು "ಹಿಂದೂ-ಮುಸ್ಲಿಂ ಐಕ್ಯದ ಸಂಕೇತವಾದ ಬಾಬಾಬುಡನ್ ಗಿರಿಯಲ್ಲಿ ದೇಗುಲವನ್ನು ನಿರ್ಮಿಸಿದಳೆಂದು ಅಧಿಕೃತ ಮೂಲವೊಂದು ತಿಳಿಸುತ್ತದೆ."[೧೨೯] ವಿದೇಶಿ ಪ್ರವಾಸಿ ಜಾನ್ ಫ್ರೈಯರ್‌ನು ಮೂರ್(ಮಹಮ್ಮದೀಯ) ಗೌರ್ನರನ ಮೋಸದಿಂದ ಈ ಕೋಟೆಯ ಬಿದನೂರ ಶಿವಪ್ಪನಾಯಕನನ್ನು ಕರ್ನಾಟಿಕ್ ರಾಣ್ಣಾ ಮಡಿದನೆಂದೂ, ಈ ಬೀದಿಯ ಕೊನೆಯಲ್ಲಿ ಮೂರ್‌ರ ಗೋರಿಗಳಿವೆ ಎಂದು ದಾಖಲಿಸಿದ್ದಾನೆ."[೧೩೦] ರಾಣಿಚೆನ್ನಮ್ಮಾಜಿ ರಾಜಾರಾಮನಿಗೆ ಅರಮನೆಯ ದಾಸೋಹದಲ್ಲಿ ಊಟ ಉಪಚಾರ ಮಾಡಿಸಿದುದು ಆಕೆಯ ಧಾರ್ಮಿಕ ಸಹಿಷ್ಣುತೆಗೆ ಸಾಕ್ಷಿಯಾಗಿದೆ. ಜವಳಗೆರೆ ಉಮನಾಬಾಯಿಯು ಮಸೀದಿ ವಿಚಾರವಾಗಿ ಎದ್ದ ಗೊಂದಲವನ್ನು ತೊಲಗಿಸಿ, ಹಿಂದೂ-ಮುಸ್ಲಿಂ ಭಾವೈಕ್ಯತೆಯ ಕೇಂದ್ರವಾಗಿ ಮಸೀದಿಯನ್ನು ಪರಿವರ್ತಿಸಿದಳು.

ಸ್ವಾದಿ ಸಂಸ್ಥಾನದಲ್ಲಿ ಮುಸ್ಲಿಮರಿಗೆ ಸಹಭಾಗಿತ್ವದ ಅವಕಾಶ ನೀಡಿದ್ದರು. ಸ್ವರ್ಣದಲ್ಲಿ ನಾಗರ ತೇರಿನ ಅಲಂಕರಣವನ್ನು ಇಂದಿನ ಸ್ಥಳೀಯ ಮುಸ್ಲಿಮರೇ ಮಾಡುತ್ತಾರೆ. ಅನೇಕ ಮಸೀದಿಗಳು ನಿರ್ಮಾಣವಾಗಿದ್ದು ಬಿಳಗಿಯನ್ನು ಸಂಸ್ಥಾನದಲ್ಲಿ ಮುಸ್ಲಿಂ ಮನೆಗಳೇ ಹೆಚ್ಚಾಗಿದ್ದುದನ್ನು ೧೯ನೇ ಶತಮಾನದ ಆರಂಭದಲ್ಲಿ ಬಿಳಗಿ ಸಂದರ್ಶಿಸಿದ ಬುಕಾನನ್ ವರದಿ ಮಾಡಿದ್ದಾನೆ.

ಕಿತ್ತೂರ ಸಂಸ್ಥಾನಿಕರು ಇಸ್ಲಾಂ ಧರ್ಮಾನುಯಾಯಿಗಳಿಗೆ ಮಸೀದಿಗಳ ನಿರ್ಮಾಣಕ್ಕೆ ಸಹಾಯ ಮಾಡಿದ್ದರು. ಬೆಳವಡಿ ಸಂಸ್ಥಾನ ಅಷ್ಟಾಗಿ ಇಸ್ಲಾಂಮತಕ್ಕೆ ಪ್ರಾಮುಖ್ಯ ಕೊಟ್ಟಿಲ್ಲವೆನ್ನ ಬಹುದು. ಸಿರಸಂಗಿ ಸಂಸ್ಥಾನಿಕರು ತಮ್ಮ ಆಸ್ಥಾನದ ಜಮೀನುಗಳ ಕೆಲಸಕ್ಕೆ ಮುಸಿಮರಿಗೂ ಅವಕಾಶ ನೀಡಿದ್ದರೆಂಬುದನ್ನು ಡಾ.ವಿರೂಪಾಕ್ಷ ಬಡಿಗೇರರು ದಾಖಲಿಸಿದ್ದಾರೆ.

**೪.೩.೬. ಕ್ರಿಶ್ಚಿಯನ್ ಧರ್ಮ**

ಏಸುಕ್ರಿಸ್ತನಿಂದ ಪ್ರಾರಂಭವಾದ ಕ್ರಿಶ್ಚಿಯನ್ ಧರ್ಮ ಬ್ರಿಟಿಷರೊಂದಿಗೆ ಸಹಜವಾಗಿಯೇ ಭಾರತವನ್ನು ಸೇರಿತು. ಇಂಗ್ಲಿಷ್ ವರ್ತಕರು ಪೌರ್ವಾತ್ಯ ದೇಶಗಳೊಡನೆ ಸಂಪರ್ಕ ಹೊಂದಲು ಮೊದಲಿನಿಂದಲೂ ಆಸಕ್ತರಾಗಿದ್ದರು. ಕ್ರಿ.ಶ.೧೫೯೧ ಮತ್ತು ೯೩ರ ನಡುವೆ ಜೇಮ್ಸ್ ಮಿಲ್ಡನ್ ಹಾಲ್ ಎಂಬ ಲಂಡನ್ನಿನ ಸಾಹಸಿ ವರ್ತಕ ೧೫೯೯ರಲ್ಲಿ ಮೆಡಿಟರೇನಿಯನ್ ಸಮುದ್ರ ಮಾರ್ಗದ ಮೂಲಕ ಭಾರತವನ್ನು ತಲುಪಿದ. ಕ್ರಿ.ಶ.೧೬೦೦ ಡಿಸೆಂಬರ್ ೩೧ರಂದು ಈಸ್ಟ್ ಇಂಡಿಯಾ ಕಂಪನಿಯು ೧೫ ವರ್ಷ ಕಾಲ ಪ್ರಾಚ್ಯವಾಣಿಜ್ಯದಲ್ಲಿ ಸ್ವಾಮ್ಯ ಪಡೆಯುವ ಸನ್ನದನ್ನು ಎಲಿಜಬೆತ್ ರಾಣಿಯಿಂದ ಪಡೆಯುವ ಮೂಲಕ ಭಾರತದಲ್ಲಿ ನೆಲೆಯೂರಲು ಮೊದಲು ಹೆಜ್ಜೆಯನ್ನು ಹಾಕಿತು. ಬ್ರಿಟಿಷ್ ಉದ್ದೇಶ ವ್ಯಾಪಾರದ ಜೊತೆಗೆ ಧರ್ಮಪ್ರಚಾರವೂ ಆಗಿತ್ತು. ಹೀಗಾಗಿಯೇ ನೊಂದ ಹಿಂದೂ ಧರ್ಮೀಯರನ್ನು ಮತಾಂತರಿಸುವ ಕಾರ್ಯದಲ್ಲಿ ಇವರು ನಿರತರಾಗಿದ್ದರು. ಮತದ ದೃಷ್ಟಿಯಿಂದ ೧೬ ಮತ್ತು ೧೭ನೇ ಶತಮಾನದಲ್ಲಿ ಕೇವಲ ಸಾಮಾನ್ಯರಷ್ಟೇ ಅಲ್ಲದೆ ಮತಾಂತರದ ಪರಮಾವಧಿಗೆ ಅರಸುಮನೆತನದ ರಾಣಿಯೂ ಪ್ರಭಾವಿತಳಾಗಿದ್ದೆಂಬುದು ಪರಮಾವಧಿಯ ಒಂದು ನಿದರ್ಶನವಾಗಿದೆ.

ಭಾರತವನ್ನು ಯಾರೂ ಗೆಲ್ಲಲಿಲ್ಲ. ಭಾರತೀಯರು ತಮಗೆ ತಾವೇ ಸೋತರು. ಅವರಲ್ಲಿದ್ದ ಅನೈಕ್ಯಮತ್ಯ, ದ್ವೇಷ, ಅಸೂಯೆ, ಆಯೋಗ್ಯತೆಗಳೇ ಅವರ ಪತನಕ್ಕೆ ಕಾರಣವಾದವು. ಜಾತೀಯತೆ, ಪ್ರಾಂತೀಯತೆಗಳು ರಾಷ್ಟ್ರೀಯತೆಯನ್ನು ಕಡೆಗಣಿಸುವಂತೆ ಮಾಡಲು ಬ್ರಿಟಿಷರು 'ಒಡೆದು ಆಳುವ ನೀತಿ'ಯನ್ನು ತನ್ನದಾಗಿಸಿಕೊಂಡರು. ಕೆಳದಿ ಸಂಸ್ಥಾನಿಕರು ಕ್ರೈಸ್ತ ಧರ್ಮೀಯರಿಗೂ ಆಶ್ರಯ ನೀಡಿದ್ದರು. ಶಿವಪ್ಪನಾಯಕನ ಪ್ರಜೆಗಳಲ್ಲಿ ೩೦,೦೦೦ಕ್ಕಿಂತ ಹೆಚ್ಚು ಕ್ರೈಸ್ತರಿದ್ದರೆಂದು ತಿಳಿದುಬರುತ್ತದೆ. ಕ್ರೈಸ್ತರಿಗೆ ಹಿಂದೂ ಸ್ತ್ರೀಯರನ್ನು ಮದುವೆಯಾಗಲು ಅನುಮತಿ ನೀಡುತ್ತಿರಲಿಲ್ಲ. ಅಬೆಕಾರ್ ವಿದೇಶಿ ಪ್ರವಾಸಿಗನಾದ ಈತ ಕೆಳದಿಯ ಗೌರ್ನರ್ ಇಂಗ್ಲಿಷರನ್ನು ಕಂಡು "ದಯಮಾಡಿ ಇಲ್ಲೊಂದು ಫ್ಯಾಕ್ಟೊರಿ ಹಾಕಿ ಎಂದು ಕೇಳಿಕೊಂಡನು. ಬಹುಶಃ ಈತನೇ ಬಿದನೂರಿನ ಪರವಾಗಿ ರಾಜ್ಯಭಾರ ಮಾಡುತ್ತಿದ್ದ ತಿಮ್ಮನಾಯಕ ಅಥವಾ ತಿಮ್ಮಣ್ಣನಾಯಕ"[೧೩೧] ಎಂಬುದಾಗಿ ದಾಖಲಿಸಿದ್ದಾರೆ.

ರಾಣಿ ಚೆನ್ನಮ್ಮಾಜಿಯು ಭಟ್ಕಳ ಮತ್ತು ಚಂದೋರಗಳಲ್ಲಿ ಚರ್ಚುಗಳನ್ನು ಕಟ್ಟಲು ಅನುಮತಿ ನೀಡಿದ್ದಳು. ಕ್ರಿ.ಶ.೧೬೪೦ರಲ್ಲಿ ಫಾದರ್ ಪಲ್ಸಿವೇಲನ್‌ನು ಧಾರ್ಮಿಕ ಪ್ರಸಾರಕ್ಕಾಗಿ ಕೆಳದಿ ರಾಜ್ಯದಲ್ಲಿ ತಿರುಗಾಡಿ ಚೆನ್ನಮ್ಮಾಜಿಯ ಆಳ್ವಿಕೆ ಇತ್ತೆಂದು ದಾಖಲಿಸಿದ್ದಾನೆ. "ರಾಣಿ ಚೆನ್ನಮ್ಮಾಜಿಯು ರೋಮನ್ ಕ್ಯಾಥೋಲಿಕರಿಗಾಗಿ ಮಂಗಳೂರಿನ ಹಂಪನಕಟ್ಟೆಯಲ್ಲಿ ಮಿಲಾಗ್ರಿಸ್ ಇಗರ್ಜಿ ಕಟ್ಟಲು ನಿವೇಶನವನ್ನು ಧರ್ಮಾರ್ಥವಾಗಿ ನೀಡಿದ್ದಳು."[೧೩೨]

ರಾಣಿ ವೀರಮ್ಮಾಜಿಯು ಪಶ್ಚಿಮ ಕರಾವಳಿಯಲ್ಲಿ ತಳವೂರಿದ್ದ ಆಂಗ್ಲ ವ್ಯಾಪಾರಿಗಳಿಗೆ ಅನೇಕ ನಿರ್ಬಂಧನೆಗಳನ್ನು ಹೇರಿ "ಹೊನ್ನಾವರದಲ್ಲಿ ಒಂದು ಕೋಟೆ ಕಟ್ಟಿಕೊಳ್ಳಲು ಅನುಮತಿ ನೀಡಿದಳು. ಆ ನಿರ್ಬಂಧನೆಗಳಲ್ಲಿ ತನ್ನ ರಾಜ್ಯದಲ್ಲಿ ಪ್ರಾಣಿವಧೆ ಮಾಡಕೂಡದು ಎಂಬುದಾಗಿತ್ತು. ಇದು ರಾಣಿಯ ಅಹಿಂಸಾ ಮನೋವೃತ್ತಿಯ ಪ್ರತೀಕವಾಗಿದೆ. ವೀರಮ್ಮಾಜಿಯ ಸರ್ವಧರ್ಮ ಸಮನ್ವಯತೆಗೆ ಸಾಕ್ಷಿಯಾಗಿದೆ.

ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ಸ್ವಾದಿ ಸಂಸ್ಥಾನಿಕರು ಕರಾವಳಿಯಲ್ಲಿ ವ್ಯಾಪಾರ ಮಾಡಿಕೊಂಡಿದ್ದ ಪೋರ್ಚುಗೀಸರು, ಡಚ್ ಹಾಗೂ ಇಂಗ್ಲಿಷರ ಸಂಪರ್ಕಕ್ಕೆ ಬಂದಿದ್ದರು. "ಕ್ರಿ.ಶ.೧೭೧೪ರಲ್ಲಿ ಸ್ವಾದಿ ಅರಸರು ಆಂಗ್ಲರೊಡನೆ ಒಡಂಬಡಿಕೆಯಲ್ಲಿ ಕ್ರಿಶ್ಚಿಯನ್ನರು ಹಿಂದೂಗಳಾಗಿದ್ದುದನ್ನು ದಾಖಲಿಸಲಾಗಿದೆ."[೧೩೩]

"ಬಿಳಗಿ ಸಂಸ್ಥಾನದ ಕಕ್ಷೆಯಲ್ಲೂ ಕ್ರೈಸ್ತಧರ್ಮ ಪ್ರಸಾರದಲ್ಲಿತ್ತೆಂಬುದನ್ನು ಪೋರ್ಚುಗೀಸ್ ದಾಖಲೆಗಳು ತಿಳಿಸುತ್ತವೆ.[೧೩೪] ಪಿಯಾಟ್ರೊ ದೆಲ್ಲಾವಲ್ಲೆ ಎಂಬ ಇಟಲಿ ದೇಶದ ಪ್ರವಾಸಿಯ ವರದಿಗಳು, ಇನ್ನಿತರ ಪೋರ್ಚುಗೀಸ್ ದಾಖಲೆಪತ್ರಗಳು, ಆಂಗ್ಲ ಭಾಷೆಯ ಪ್ರವಾಸಿ ವರದಿಗಳು ಕ್ರಿ.ಶ.೧೬೩೭ರಲ್ಲಿ ಬಂದ ಪೀಟರ್‌ಮಂಡಿ ಕ್ರಿ.ಶ.೧೬೯೫ರಲ್ಲಿ ಬಂದ ಇಟಲಿಯ ಗ್ಯಾಮಿಲಿ ಕ್ಯಾರಿ ಮುಂತಾದವರ ವರದಿಗಳಿಂದ ಕ್ರೈಸ್ತಧರ್ಮದ ಪ್ರಸಾರವಿದ್ದುದನ್ನು ಗುರುತಿಸಬಹುದು.

ಕ್ರಿ.ಶ.೧೬ ಮತ್ತು ೧೭ನೇ ಶತಮಾನದಲ್ಲಿ ಮತಾಂತರವೆಂಬುದಕ್ಕೆ ಸಾಮಾನ್ಯರಂತೆ ಅರಸನು ಪ್ರಭಾವಗೊಂಡಿದ್ದಾನೆ. ಹಾಲೇರಿ ಮನೆತನದ ಕೊನೆಯ ದೊರೆಯಾದ ಚಿಕ್ಕವೀರ ರಾಜೇಂದ್ರನು ತನ್ನ ಮಗಳಾದ ಗೌರಮ್ಮ ಕ್ರಿಶ್ಚಿಯನ್ ಧರ್ಮದ ಸಿದ್ಧಾಂತಗಳನ್ನು ಅಳವಡಿಸಿ ಕೊಳ್ಳಬೇಕೆಂದು ಬಯಸಿದನು. ಇದುವರೆಗೂ ಯಾವ ದೇಶೀಯ ರಾಜನೂ ಇಂಥ ಆಲೋಚನೆ ಯನ್ನು ಮಾಡಿರಲಿಲ್ಲ. ಅಷ್ಟೇ ಅಲ್ಲದೆ ವಿಕ್ಟೋರಿಯಾ ರಾಣಿಯ ಆಶ್ರಯದಲ್ಲೇ ಮಗಳು ಬೆಳೆಯಬೇಕು. ಕ್ರಿಶ್ಚಿಯನ್ ಸಂಪ್ರದಾಯವನ್ನು ಅಳವಡಿಸಿಕೊಳ್ಳಬೇಕೆಂದು ಬಯಸಿದನು.

ರಾಣಿ ಗೌರಮ್ಮ ತಂದೆಯ ಇಷ್ಟದಂತೆ ಕ್ರಿಶ್ಚಿಯನ್ನಳಾಗಿ ಪರಿವರ್ತಿತಳಾದಳಾದರೂ ಭಾರತೀಯ ಸಂಪ್ರದಾಯದ ತದ್ವಿರುದ್ಧ ಧರ್ಮದ ಆಚರಣೆಗಳಿಗೆ ಒಗ್ಗಿಕೊಳ್ಳುವುದು ವಿಕ್ಟೋರಿಯಾ ಗೌರಮ್ಮಗೆ ಕಷ್ಟವಾಯಿತ್ತೆಂಬುದು ಕೊಡಗಿನ ಇತಿಹಾಸದಿಂದ ತಿಳಿದುಬರುತ್ತದೆ.

### ೪.೩.೬. ದೇವಾಲಯದ ಸ್ತ್ರೀಯರು

ಪುರಾತನ ಪದ್ಧತಿಗಳಲ್ಲಿ ಒಂದಾದ ದೇವಾಲಯದ ಸ್ತ್ರೀಯರು, ಅಂದರೆ ನಿರ್ದಿಷ್ಟ ಜನಾಂಗದ ಅವಿವಾಹಿತ ಹೆಣ್ಣು ಮಕ್ಕಳನ್ನು ದೇವಸ್ಥಾನಕ್ಕೆ ಬಿಟ್ಟುಕೊಡುವ ಸಂಪ್ರದಾಯ ಪ್ರಾಚೀನ ಕಾಲದಿಂದಲೂ ನಡೆದುಕೊಂಡೇ ಬಂದಿದೆ. ಈ ಕುರಿತ ಪ್ರಥಮ ದಾಖಲೆ ಕ್ರಿ.ಶ.೭೭೮–೭೯ರ ಪಟ್ಟದಕಲ್ಲಿನ ಶಾಸನದಲ್ಲಿ ದಾಖಲಾಗಿರುವ 'ದೇಗುಲದ ಸೂಳೆ' ಎಂಬುದು ಕರ್ನಾಟಕದ ಪ್ರಥಮ ದೇವದಾಸಿ ಉಲ್ಲೇಖವಾಗಿದೆ. ದೇವಾಲಯದಲ್ಲಿ ಗೀತ ಮತ್ತು ನೃತ್ಯಗಳ ಮೂಲಕ ದೇವರ ಸೇವೆಯಲ್ಲಿದ್ದು, ಬದುಕು ಸಾಗಿಸುವ ವೃತ್ತಿ ಇವಳದು. ದೇವರ ಭೋಗಲಾಲಸೆಗೆ ಒಪ್ಪಿಸಲ್ಪಟ್ಟವಳು. ಈ ವೃತ್ತಿಗಾಗಿ ಸಮರ್ಪಕ ಹಣ, ಭೂಮಿ, ಇತರ ಕಾಣಿಕೆಗಳನ್ನು ಆಕೆ ಪಡೆಯುತ್ತಿದ್ದಳು.

"ಡಾ.ಚಿದಾನಂದಮೂರ್ತಿಯವರು 'ಪಾತ್ರ' ಮತ್ತು 'ಸೂಳೆ' ಎಂಬ ಪದಗಳನ್ನು ಭಿನ್ನ ಅರ್ಥಗಳಲ್ಲಿ ಗ್ರಹಿಸುತ್ತಾರೆ. 'ಪಾತ್ರ'ವೆಂಬುದು ಸಂಗೀತ ಮತ್ತು ನೃತ್ಯಗಳ ಮೂಲಕ ಕೈಗೊಳ್ಳುವ ವೃತ್ತಿಯಾದರೆ, 'ಸೂಳೆ' ಎಂಬುದು ಇನ್ನಿತರ ಸೇವಾಕಾರ್ಯಗಳಿಗೆ ಸಂಬಂಧಿಸಿದುದಾಗಿದೆ ಎಂದು ದಾಖಲಿಸಿದ್ದಾರೆ."[೧೩೫]

ಪಾತ್ರ>ಪಾತರ, ಪಾತರದವಳು ಎಂಬುದು ಇಂದು 'ವೇಶ್ಯೆ' ಎಂಬ ಅರ್ಥವನ್ನು ಪಡೆದುಕೊಂಡಿದ್ದರೂ, ಹಿಂದಿನ ಕಾಲದಲ್ಲಿ 'ಪಾತ್ರ' ಎಂಬುದು ದೇವಾಲಯದಲ್ಲಿ ಸಂಗೀತ, ನೃತ್ಯ, ಸೇವಾಕಾರ್ಯದಲ್ಲಿ ನಿರತರಾದ ಸ್ತ್ರೀಯರಿಗೆ ಗೌರವಪೂರ್ವಕವಾಗಿ ಬಳಸುವ ಪದ ಇದಾಗಿತ್ತು.

ಕನ್ನಡ ಕಾವ್ಯಗಳಲ್ಲಿ ಅಷ್ಟಾದಶ ವರ್ಣನೆಗಳಲ್ಲಿ ವೇಶ್ಯಾವಾಟಿಕೆಯೂ ಒಂದಾಗಿತ್ತು. ವಿದ್ಯುಚ್ಚೋರನ ಕಥೆಯಲ್ಲಿ ರಾಜನು ಬಸದಿಗೆ ಹೊರಟ ಸಂದರ್ಭದಲ್ಲಿ ಇಬ್ಬರು ಸೂಳೆಯರು ಚಾಮರ ಬೀಸುತ್ತಿರುವ, ಜನ್ನನ ಅನಂತನಾಥ ಪುರಾಣದಲ್ಲಿ ರಾಣಿವಾಸ, ಪೆಂಡವಾಸ ಎಂಬ ಎರಡು ಮಾತುಗಳು ಬರುತ್ತದೆ. ಪೆಂಡವಾಸ ಎಂಬುದು ಸೂಳೆಯರಿಗೆ ಸಂಬಂಧಿಸಿರಬೇಕು. ಪಂಪನೂ ಕೂಡ ಈ ಪದ ಬಳಸುತ್ತಾನೆ. ಪುರುಷರ ಸೇವೆಯನ್ನು ಮಾಡುತ್ತಿದ್ದವರು ಸೂಳೆಯರು. ದೇವರುಗಳ ಸೇವಗೆ ನಿಯಮಿತರಾಗಿದ್ದವರು 'ದೇವಸೂಳೆಯರು'. ಪ್ರಾಚೀನ ಕಾಲದ ಒಂದು ಸಾಮಾಜಿಕ ಸಂಸ್ಥೆಯಾದ ದೇವಾಲಯಗಳ ಕಂಭ ಹಾಗೂ ಗೋಡೆಗಳಲ್ಲಿ

ಸ್ತ್ರೀಯರ ಉಬ್ಬು ಚಿತ್ರಗಳು, ವಾದ್ಯ ಹಿಡಿದ ನೃತ್ಯಾಂಗನೆಯರ ಶಿಲ್ಪಗಳನ್ನು ಸಾಮಾನ್ಯವಾಗಿ ಕಾಣಬಹುದು.

ಕೆಳದಿ ಸಂಸ್ಥಾನದಲ್ಲಿ ಮೇಳದ ಪುಟ್ಟತಾಯಿ, ಮೇಳದ ಶಿವಲಿಂಗಿ, ಜಂಬುಖಂಡಿಯ ಚನ್ನಿ ಇವರು ದೇವಾಲಯದ ಸೇವೆಯಲ್ಲಿದ್ದವರು. ಇವರು ದೇವರ ಸೇವೆಯನ್ನು ಕೈಗೊಳ್ಳುವುದರ ಜೊತೆಗೆ ದಾನ, ದತ್ತಿಯಂಥ ಧಾರ್ಮಿಕ ಕಾರ್ಯಗಳನ್ನು ಕೈಗೊಳ್ಳುವ ಸ್ವಾತಂತ್ರ್ಯವೂ ಅವರಿಗಿದ್ದಿತು. 'ಮೇಳ' ಎಂಬುದು ಸಮೂಹ, ಗುಂಪು ಎಂಬುದನ್ನು ನಿರ್ದೇಶಿಸುತ್ತದೆ. ಸಮೂಹನೃತ್ಯದ ಸಂಕೇತವಾಗಿ ಮೇಳ ಎಂಬುದನ್ನು ಬಳಸುತ್ತಿರಬಹುದು.

"ವಿದೇಶಿ ಪ್ರವಾಸಿ ಪಿಯಾಟ್ರೊ ದೆಲ್ಲವೆಲ್ಲಿಯು ವಿವರಿಸುವಂತೆ ವೆಂಕಟಪ್ಪನಾಯಕನ ಓಲಗದಲ್ಲಿ ಒಬ್ಬ 'ಪಾತರದವಳು' ಇದ್ದು, ಆಕೆ ಪೋರ್ಚುಗೀಸ್ ರಾಯಭಾರಿಯ ಸಮಕ್ಷಮದಲ್ಲಿ ಅನೇಕ ಪ್ರಕಾರದ ಮಣಿತ, ಕುಣಿತಗಳನ್ನು ಮಾಡಿ ತೋರಿಸಿದಳು. ಡೋಲು ಮತ್ತಿತರ ವಾದ್ಯ ಭಾರಿಸುತ್ತಿರಲು ಆಕೆ ಒಂದೇ ಕಾಲಿನ ಮೇಲೆ ನಿಂತು, ಇನ್ನೊಂದರಿಂದ ದೊಡ್ಡದೊಂದು ಕಬ್ಬಿಣದ ಗಾಲಿ ತಿರುಗಿಸುತ್ತಾ ಕೆಳಗೆ ಬೀಳದಂತೆ ಕುಣಿಯುತ್ತಿದ್ದಳೆಂದು ದಾಖಲಿಸಿದ್ದಾನೆ."[೧೩೬]

ವಿದೇಶಿ ಪ್ರವಾಸಿಯಾದ ಪೀಟರ್‌ಮಂಡಿಯು ನರ್ತಕಿಯರ ಉಡುಗೆ-ತೊಡುಗೆ, ನರ್ತನದ ಬಗ್ಗೆ ದಾಖಲಿಸಿದ್ದಾನೆ. ನರ್ತಕಿಯರು ಚಿನ್ನದ ನಡುಪಟ್ಟಿ, ಕಾಮುಬಳೆ, ಕಂಠಾಭರಣಗಳಿಂದ ಅಲಂಕಾರ, ಪೋಣಿಸಿದ ನವರತ್ನಗಳು, ಹರಳುಗಳು ಪೋಣಿಸಿದ ಸರಗಳನ್ನು ಹಾಕಿಕೊಳ್ಳುತ್ತಿದ್ದರು. ಇವರು ಮಾಡುವ ನರ್ತನವು ಇಟಲಿಯ 'ಮೋರಿಸ್' ನೃತ್ಯದಂತಿತ್ತೆಂದು ದಾಖಲಿಸಿದ್ದಾನೆ. ನರ್ತಕಿಯರು ಹಾಡುತ್ತಾ, ಕುಣಿಯುತ್ತಿದ್ದರೆಂದು ದಾಖಲಿಸಿದ್ದಾನೆ. ಈ ನರ್ತಕಿಯರು ಮೊದಮೊದಲು ಸಾರ್ವಜನಿಕವಾಗಿ ನಾಟ್ಯ, ನೃತ್ಯ ಕೈಗೊಳ್ಳುತ್ತಿದ್ದು, ಕಾಲಾನಂತರದಲ್ಲಿ ಇವರ ಸೌಂದರ್ಯಕ್ಕೆ ಮಾರು ಹೋದ ಅರಸರ ಅಥವಾ ಶ್ರೀಮಂತರ ಆಸ್ತಿಯಾಗುತ್ತಾ ಬಂದಂತೆ ಕಾಣುತ್ತದೆ. ಹಾಲೇರಿ ವಂಶದ ಅಪ್ಪಾಜಿರಾಜನು 'ಸಾಮಾನ್ಯ ಸ್ತ್ರೀ'ಯಲ್ಲಿ ಅನುರಕ್ತನಾಗಿದ್ದನೆಂದೂ ಹಾಗೂ ದೊಡ್ಡವೀರ ರಾಜೇಂದ್ರನು ತನ್ನ ಪಟ್ಟದ ರಾಣಿಯರಲ್ಲಿ ಜನಿಸಿದ ಹೆಣ್ಣು ಮಕ್ಕಳಿಗೆ ಗಂಡು ಮಗು ಜನಿಸಿದ್ದಾದಲ್ಲಿ ಅವನಿಗೆ ಪಟ್ಟವಾಗಬೇಕು. ಇಲ್ಲದಿದ್ದರೆ 'ಸಾಮಾನ್ಯ ಸ್ತ್ರೀ'ಯಲ್ಲಿ ಜನಿಸಿದ ಜ್ಯೇಷ್ಠತೆಯನ್ನು ಆಧರಿಸಿ ಪಟ್ಟಗಟ್ಟಬೇಕೆಂದೂ ಹೇಳುವನು. ಇಲ್ಲಿ ಬಳಕೆಯಾದ 'ಸಾಮಾನ್ಯ ಸ್ತ್ರೀ' ಎಂಬುದು ವೇಶ್ಯಾವೃತ್ತಿಯಲ್ಲಿರುವವರಿಗೆ ಬಳಸುವ ಪದವಾಗಿದೆಯೆಂದು ಡಾ.ಎಂ.ಚಿದಾನಂದ ಮೂರ್ತಿಯವರು ದಾಖಲಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಇವರಿಗೆ ಪಟ್ಟದ ರಾಣಿಗೆ ದೊರೆಯುವ ಯಾವುದೇ ಸೌಲಭ್ಯಗಳು ದೊರೆಯುತ್ತಿರಲಿಲ್ಲ. ಅಧಿಕಾರದಿಂದ ದೂರವೇ ಇವರನ್ನು ಇಟ್ಟಿದ್ದರು ಎಂಬ ಅಂಶ ತಿಳಿದುಬರುತ್ತದೆ. ಸಿರಸಂಗಿ ದೇವಸ್ಥಾನದಲ್ಲಿಯೂ ದೇವರ

ಸೇವೆಗೆಂದು ರಮಾಸಾನಿ, ತಾಯಿ ದೇವಸಾನಿ ಪಾತರದ ಹಾಗೂ ಗಂಗಾಸಾನಿ ಪಾತರದ ಎಂಬುವವರು ಲಿಂಗರಾಜರ ಆಸ್ಥಾನದ ಸಂಗೀತ ಮತ್ತು ನೃತ್ಯ ಸೇವೆಯಲ್ಲಿದ್ದರು. ಬಿಳಗಿ ಸಂಸ್ಥಾನದ ರತ್ನತ್ರಯ ಬಸದಿಯಲ್ಲೂ ನಾಲ್ವರು ಪಾತ್ರದವರಿದ್ದರೆಂದು ತಿಳಿದುಬರುತ್ತದೆ. ಕಿತ್ತೂರ ಸಂಸ್ಥಾನದಲ್ಲಿ ನರ್ತಕಿಯರಿದ್ದರು. ಕಿತ್ತೂರು ಫಕೀರರುದ್ರ ಸರ್ಜನ ಪ್ರೇಯಸಿಯಾದ 'ನಿರಂಜನಿ' ನೃತ್ಯಗಾರ್ತಿಯಾಗಿದ್ದು, ಕಡೆಗೆ ಅರಸನ ಪ್ರೇಯಸಿಯಾದ ಸಂಗತಿಯನ್ನು ಮಠದರು ದಾಖಲಿಸಿದ್ದಾರೆ.

ಭಾರತ ಹಲವು ಧರ್ಮಗಳ ತವರೂರು. ಜೈನ, ಬೌದ್ಧ, ವೈದಿಕ, ಶೈವ, ಲಿಂಗಾಯತ ಧರ್ಮಗಳು ಧರ್ಮ ಮತ್ತು ಆಧ್ಯಾತ್ಮಿಕ ಗುರಿ ಸಾಧನೆಯಲ್ಲಿ ತೊಡಗಿದವು. ಮಠಗಳು ಧರ್ಮ ಮತ್ತು ಆಧ್ಯಾತ್ಮಿಕ ಸಾಧನೆಯ ಜೊತೆಗೆ ಜ್ಞಾನ ಪ್ರಸಾರವನ್ನು ಮಾಡಿರುವುದು ವಿಶೇಷ. ಹಿಂದೂ ಧರ್ಮದ ಪ್ರಬಲ ಧರ್ಮವೆಂದೇ ಹೆಸರಾದ "ವೈದಿಕ ಧರ್ಮದ ಪ್ರತಿಭಟನಾತ್ಮಕವಾಗಿ ಹುಟ್ಟಿದ್ದು ಆಗಮಿಕ ಸಂಪ್ರದಾಯ. ಪುರಾಣ ಕಾಲಕ್ಕಿಂತ ಪೂರ್ವದಲ್ಲಿಯೇ ಆಗಮಿಕ ಸಂಪ್ರದಾಯದ ಮಠಗಳಿದ್ದವು."[೧೩೭] ಮಠಗಳ ಮಹತ್ವವನ್ನರಿತ ಶ್ರೀ ಶಂಕರಾಚಾರ್ಯರು ಭಾರತದ ನಾಲ್ಕು ದಿಕ್ಕುಗಳಿಗೂ ಮಠವನ್ನು ಸ್ಥಾಪಿಸಿದರು. ಈ ಮಠಗಳು ಪ್ರಮುಖ ವಿದ್ಯಾಕೇಂದ್ರಗಳಾಗಿ, ಧರ್ಮ ಪ್ರಚಾರಕ ಕೇಂದ್ರಗಳಾಗಿ ಪ್ರಮುಖ ಪಾತ್ರ ವಹಿಸುತ್ತವೆ. "ಕ್ರಿ.ಶ.೬ನೇ ಶತಮಾನದಿಂದಲೂ ಮಠಗಳು ಅಸ್ತಿತ್ವದಲ್ಲಿದ್ದವೆಂದೂ, ಕರ್ನಾಟಕ ಮಠಗಳ ಪ್ರಾಚೀನತೆಯನ್ನು ವಿದ್ವಾಂಸರಾದ ಡಾ.ಕೆ.ರವೀಂದ್ರನಾಥರು ಜೈನರಿಂದ ಗುರುತಿಸುತ್ತಾರೆ. "ಕದಂಬ ದೊರೆ ಬೊಪ್ಪದೇವನು ಜೈನಮಠವೊಂದರ ನಿರ್ವಹಣೆಗೆ ಭೂಮಿದಾನ ನೀಡಿದ ಉಲ್ಲೇಖವನ್ನು ದಾಖಲಿಸಿದ್ದಾರೆ."[೧೩೮]

ಮಠ ಎಂದರೆ ಮಠತಿ, ವಾಸಿಸು, ವಾಸಸ್ಥಾನ ಎಂಬ ಅರ್ಥಗಳಿವೆ. ಮಠವೆಂದರೆ ಆಧ್ಯಾತ್ಮಿಕ ವಿದ್ಯಾಕೇಂದ್ರ, ತಪಸ್ಸಿನ, ಜ್ಞಾನಾನ್ವೇಷಣೆಯ ಕೇಂದ್ರ, ಅದು ವಿದ್ಯಾರ್ಥಿಗಳ ಇಲ್ಲವೇ ಗುರುಗಳ ವಾಸಸ್ಥಾನ. ಸಾಮಾನ್ಯವಾಗಿ ಗುರುಪೀಠಗಳು ಶಾಶ್ವತವಾಗಿರುವ ನೆಲೆಗಳಿಗೆ ಮಠಗಳೆನ್ನುವರು. ಮಠಗಳಿಗೆ ಪೀಠಾಧಿಪತಿಗಳು, ಮಠಾಧಿಪತಿಗಳು ಇರುವುದು ಸಹಜ. ಮಠಾಧಿಪತಿಗಳು ಬಾಲ್ಯದಿಂದಲೂ ವೇದ ವಿದ್ಯೆಯನ್ನು ಕಲಿತು, ದೇವರುಗಳ ನಿತ್ಯಪೂಜಾವಿಧಿಗಳ ನೇತೃತ್ವ ವಹಿಸಿ, ಮಠದ ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದರು. ಅಲ್ಲದೆ ಹಲವಾರು ಜನರಿಗೆ ಆಶ್ರಯ ನೀಡಿ, ಅನ್ನ ದಾಸೋಹದೊಂದಿಗೆ ಜ್ಞಾನ ದಾಸೋಹವನ್ನೇ ಒದಗಿಸುವ ಕೇಂದ್ರ ಇವಾಗಿದ್ದವು. ಇಂಥ ಮಠಗಳಿಗೆ ಅನೇಕ ಅರಸರು ದಾನ-ದತ್ತಿ ನೀಡಿದಂತೆ, ರಾಣಿಯರೂ ಹಲವಾರು ಮಠಗಳನ್ನು ಸ್ಥಾಪಿಸಿ, ಭೂದಾನ ನೀಡಿರುವ ಉಲ್ಲೇಖಗಳು ದೊರೆಯುತ್ತವೆ.

ಕೆಳದಿ ಅರಸರ ಕಾಲದಲ್ಲಿ ರಾಜ್ಯದ ಉದ್ದಗಲಕ್ಕೂ ನೂರಾರು ವೀರಶೈವ ಮಠಗಳು ನಿರ್ಮಾಣವಾದವು. ಕೆಳದಿ ರಾಜ್ಯದ ವೀರಶೈವ ಮಠಗಳಲ್ಲಿ ಮಹತ್ತಿನ ಮಠ, ಮಹಾಮಹತ್ತಿನ

ಮಠ, ವಿರಕ್ತಮಠ, ಕಲ್ಲುಮಠ, ವಶೀಕೃತ ಮಠ, ವಿರೂಪಾಕ್ಷದೇವರಮಠ, ಸೋಮನಾಥದೇವರ ಮಠ, ಗದ್ದಿಗಿಮಠ ಇತ್ಯಾದಿ ಹೆಸರಿನ ಮಠಗಳು ಸ್ಥಾಪನೆಗೊಂಡವು. ಮಹತ್ತಿನ ಮಠದ ಶಾಸನಗಳಲ್ಲಿ "ಶ್ರೀ ಮತ್ಸಜ್ಜನ ಶುದ್ಧ ಶಿವಾಚಾರ ಸಂಪಂನ ದ್ಯಾವಾಪೃಥ್ವಿ ಮಹಾಮಹತ್ತಿಗೊಳಗಾದ ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಪಾದಕ ಶಿವಗುರು ಭಕ್ತಿಪಾರಾಯಣರೆಂದು"[೧೩೯] ಇವರ ಬಹುಪಾಲು ಶಾಸನಗಳು ಪ್ರಾರಂಭವಾಗುವುದನ್ನು ಕಾಣುತ್ತೇವೆ. ಅರಸರಿಗಿಂತ ಒಂದು ಕೈ ಮೇಲೆಂಬಂತೆ ರಾಣಿಯರು ಮಠಗಳನ್ನು ಸೃಷ್ಟಿಸುವುದಷ್ಟೇ ಅಲ್ಲದೆ ಅವುಗಳ ನಿರ್ವಹಣೆಗೆ ದಾನ-ದತ್ತಿಗಳನ್ನು ನೀಡಿದ್ದಾರೆ.

ರಾಣಿ ಕೆಳದಿ ಚೆನ್ನಮ್ಮಾಜಿಯು ಶೃಂಗೇರಿ ಮಠಕ್ಕೆ ದಾನ ನೀಡಿ 'ಶೃಂಗೇರಿ ಸಂಸ್ಥಾನ' ಧರ್ಮವನ್ನು ನಡೆಸಿಕೊಂಡು ಬಂದಳು. "ಚೆನ್ನಮ್ಮಾಜಿಯು ಶಿವಭಕ್ತ-ಗುರಿಕಾರ, ಶೈವ, ವೈಷ್ಣವ, ಬ್ರಾಹ್ಮಣ, ಗುರಿಕಾರರ ಮುಖದಿಂ ಮಠಮಾನ್ಯ ದೇವಸ್ಥಾನಾಗ್ರಹಾರಾದಿ ನಾನಾ ವಿಧ ದಾನ ಧರ್ಮಾಧಿಗಳನ್ನಾಗಿಸಿ ಶಾಶ್ವತ ಧರ್ಮಕೀರ್ತಿಗಳಂ ಸಂಪಾದಿಸಿ"[೧೪೦] ಎಂಬ ದಾಖಲೆಯಿದೆ. ಕೂಡಲಿ, ಸೋಮಪುರಗಳಲ್ಲಿ ಮಠಗಳನ್ನು, ಉಳವಿ, ಶಿವಪುರ, ಹೊಸಳ್ಳಿ, ಸಿದ್ಧಗಿರಿ ಮುಂತಾದ ಸ್ಥಳಗಳಲ್ಲಿ ಮಹತ್ತಿನ ಮಠಗಳನ್ನು ಸ್ಥಾಪಿಸಿದಳು. ಅಲ್ಲದೆ ಬೇರೆಯವರು ಸ್ಥಾಪಿಸಿದ ಮಠಗಳಿಗೆ ಉದಾರವಾಗಿ ದತ್ತಿ ನೀಡಿದಳು. "ಚೆಂನಂಮಾಜಿಯವರು ಅಂದಿಗೆ ಸೀಮೆಪಾತಗೆರೆ ಗ್ರಾಮದಲ್ಲು ಬಸವಲಿಂಗಂಮಾಜಿಯವರು ಮಟವ ಕಟ್ಟಿಸಿ ಶರಣ ಮಾಡಿ ವಶೀಕೃತ ಮಟದ ನವಿಲುಗುಂದದ ದಶಮುಖದ ಬಸವಲಿಂಗ ದೇವರ ಶಿಷ್ಯರು ಶಾಂತಮಲ್ಲಿಕಾರ್ಜುನ ದೇವರಿಗೆ ಬರೆಸಿಕೊಟ್ಟ ಶಾಸನ"[೧೪೧] ಎಂಬ ಉಲ್ಲೇಖವಿದೆ. ರಾಣಿ ಮುದುಗೊಪ್ಪದಲ್ಲಿ ಶಾಂತವೀರಪ್ಪನು, ಎಡೆಹಳ್ಳಿಯಲ್ಲಿ ಪುಟ್ಟಣ್ಣನು ಹಾಗೂ ಆಗುಂಬೆಯಲ್ಲಿ ತನ್ನ ತಾಯಿ ಪಾರ್ವತಿ ಅಮ್ಮಾಜಿಯು ಸ್ಥಾಪಿಸಿದ ಮಠಗಳಿಗೆ ದಾನ ಕೊಟ್ಟಿದ್ದಾಳೆ.

ಚೆನ್ನಮ್ಮಾಜಿಯ ಶಾಸನವೊಂದರಲ್ಲಿ ಶಾಸನವನ್ನು ಸರಿಯಾಗಿ ಮಠಧರ್ಮಕ್ಕೆ ಉಪಯೋಗಿಸಿ ಕೊಂಡು ಷಡ್ದರ್ಶನಕ್ಕೂ ನೀಡಿ ಮಾಡಿಕೊಂಡು ಮಹತ್ತು ಪರಂಪರೆಯಾಗಿ ಮಠಧರ್ಮವನ್ನು ನಡೆಸಿಕೊಂಡು ಬರುವಂತಹುದು ಎಂಬುದಾಗಿ ತಿಳಿಸುವ ಮಾತು ಚೆನ್ನಮ್ಮಾಜಿಯ ಮಠದ ಬಗೆಗಿನ ಪ್ರೀತಿಯ ಪ್ರತೀಕವಾಗಿದೆ. ಚೆನ್ನಮ್ಮಾಜಿಯು ವೆಂಕಟಪ್ಪನಾಯಕನು ಮಠಕ್ಕೆ ಬಿಟ್ಟಿದ್ದ ದಾನವನ್ನು ಮುಂದುವರೆಸಿಕೊಂಡು ಬರುವುದರ ಜೊತೆಗೆ ಆ ಮಠದ ರುದ್ರಮುನಿದೇವ ಮತ್ತು ಅವನ ಅನುಯಾಯಿಗಳು ಮಠದಲ್ಲಿ ಸ್ತ್ರೀಯರನ್ನು ಹೊಂದಬಾರದು ಎಂಬುದಾಗಿ ಆಜ್ಞೆಯನ್ನು ಹೊರಡಿಸಿದ್ದಳು. ಕೆಲವು ಮಠಗಳು ತಮ್ಮ ಮೂಲ ಉದ್ದೇಶ ತೊರೆದು ಭೋಗ ಲಾಲಸೆಗೆ ಮಠಗಳನ್ನು ಬಳಸುತ್ತಿದ್ದರೆಂಬ ಅಂಶ ಇದರಿಂದ ತಿಳಿದುಬರುತ್ತದೆ.

"ಕೆಳದಿ ಚೆನ್ನಮ್ಮಾಜಿಯು ಕೋಳಿವಾಡದ ಬೊಮ್ಮಯ್ಯ ಮತ್ತು ಕರಣಿಕ ಕೋನಯ್ಯನ ಕೋರಿಕೆಯಂತೆ ಕೂಡಲಿಮಠ ಮತ್ತು ವಿದ್ಯಾಶಂಕರ ದೇವಾಲಯಕ್ಕೆ ವಿಶೇಷ ದೀಪದ ಪೂಜೆಗಾಗಿ ದಾನ ಮಾಡಿದಳು."[೧೪೨] ಚೆನ್ನಮ್ಮಾಜಿಯು ಕೋಟಿಪುರ ಗ್ರಾಮದ ರಾಮಾಜಿಕೂಟದ ಮಠ ಧರ್ಮಕ್ಕೆ ಯೆಲ್ಲಿಶೆಟ್ಟಿ ಎಂಬುವನು ಕೇಳಿಕೊಂಡ ಸಂಬಂಧ ಕಟ್ಟಡ ಕಟ್ಟುವುದಕ್ಕೆ ಭೂಮಿದಾನ ಮಾಡಿದಳು."[೧೪೩] ಕೆಳದಿ ಕಾಲದ ಶಾಸನಗಳಲ್ಲಿ ಅನೇಕ ಧರ್ಮಾಧಿಕಾರಿಗಳ ಉಲ್ಲೇಖವನ್ನು ಕಾಣುತ್ತೇವೆ. ಜೀವೋತ್ತಮ ಮಠದ ಒಂಬತ್ತನೆಯ ಗುರು ಶ್ರೀಗುರು ಲಕ್ಷ್ಮೀನಾರಾಯಣ ತೀರ್ಥರು ಕೆಳದಿ ರಾಜಧಾನಿಗೆ ಸಂದರ್ಶನವಿತ್ತಾಗ ಚೆನ್ನಮ್ಮಾಜಿಯು ಅವರನ್ನು ಸನ್ಮಾನಿಸಿ, ಶಂಕ, ಚಕ್ರ, ದೀವಟಿಗೆ ಮೊದಲಾದವುಗಳನ್ನಿತ್ತು ಗೌರವಿಸಿ ಸತ್ಕರಿಸಿದಳು. ಕುಪಸ್ತ ಕಂಥೇಹರೀಶ್ವರದ ಸಿದ್ಧಮಲ್ಲಿಕಾರ್ಜುನದೇವರ ಶಿಷ್ಯರಾದ ಗುರುಲಿಂಗ ದೇವರು, ಅರಸಿನಗೋಡೆಯ ಸಿದ್ಧಬಸವಣ್ಣಾರಾಧ್ಯ, ಹುರುಳಿಯ ಗುರು ಚೆನ್ನಮಲ್ಲದೇವರು, ಕೆಳದಿ ಕಾಶಿಮಠದ ಶಿವಲಿಂಗಸ್ವಾಮಿ, ಸಿದ್ಧಗಿರಿ ಮಠದ ರೇವಣಸಿದ್ಧ ದೇವರಿಗೆ ಮಹತ್ತು, ಮಲ್ಲಿಕಾರ್ಜುನ ದೇವರ ಶಿಷ್ಯ ಮನೋಹರ ದೇವರಿಗೆ, ಸಿದ್ಧ ವೀರಣ್ಣೊಡೆಯರ ಶಿಷ್ಯರು ಬಸವಲಿಂಗದೇವ, ಸಿದ್ಧಲಿಂಗದೇವ, ಇಕ್ಕೇರಿ ಹೊಸಪೇಟೆ ಮಠದ ಮಹಾಂತದೇವ, ಶ್ರೀರಂಗಪಟ್ಟಣದ ಹೋಳಿನ ಹಿರಿಯ ಹಂಪಯ್ಯ ಇತ್ಯಾದಿ ಧರ್ಮಗುರುಗಳ ಹೆಸರುಗಳ ಉಲ್ಲೇಖವಿದೆ. ಚೆನ್ನಮ್ಮಾಜಿಯ ಕಾಲದಲ್ಲಿ 'ಶಿವಲಿಂಗ ಸ್ವಾಮಿ'ಯವರು ಆಸ್ಥಾನದ ರಾಜಗುರುಗಳಾಗಿದ್ದರು.

ಕೆಳದಿಯ ಮತ್ತೊಬ್ಬ ಸಮರ್ಥ ರಾಣಿಯಾದ ವೀರಮ್ಮಾಜಿಯು ಶೃಂಗೇರಿ ಮಠಕ್ಕೆ ದಾನ ನೀಡಿದಳು. ದತ್ತು ಮಗನಾದ ೨ನೇ ಸೋಮಶೇಖರ ನಾಯಕನ ಪಟ್ಟಾಭಿಷೇಕ ಕಾಲದಲ್ಲಿ ಪಂಚಪೀಠಾಧೀಶರಿಗೆ ವಿಶೇಷ ಪೂಜೆ ಮಾಡಿಸಿದಳು. ವೀರಮ್ಮಾಜಿಯ ಮಗನಾದ ಸೋಮ ಶೇಖರನಾಯಕನು 'ಮಠದಲ್ಲಿ ನಡೆದ ಪರ್ಜನ್ಯಕ್ಕಾಗಿ ತೆಂಗಿನಕಾಯಿ, ಎಲೆ, ಅಡಿಕೆ, ಮೊದಲಾದವನ್ನು ಕಳಿಸಿದನೆಂಬ ಮಾಹಿತಿಯನ್ನು ಎ.ಕೆ.ಶಾಸ್ತ್ರಿಯವರು ನೀಡುತ್ತಾರೆ. ರಾಣಿ ವೀರಮ್ಮಾಜಿ ಶೃಂಗೇರಿ ಮಠದ ಶ್ರೀ ಅಭಿನವ ಸಚ್ಚಿದಾನಂದ ಭಾರತಿ ಸ್ವಾಮಿಗಳನ್ನು ಕರೆಯಿಸಿ ಭಿಕ್ಷೆಯನ್ನು ಮಾಡಿಸಿದಳು. ಸ್ಫಟಿಕಲಿಂಗ, ರತ್ನಖಚಿತ ಗೋಪಾಲ ಕೃಷ್ಣಮೂರ್ತಿಗೆ ಅಮೂಲ್ಯ ಆಭರಣಗಳನ್ನಿತ್ತು ಗೌರವಿಸಿದಳು. ಅಲ್ಲದೆ ಮಠದ ಸಾಲವನ್ನು ತೀರಿಸಿದಳು. ಹಂಗರದಲ್ಲಿದ್ದ ಮುರಗಿಸಮಯದ ಮಠಕ್ಕೆ ಚನ್ನವೀರ ದೇವರನ್ನು ನಿಯಮಿಸಿ ಪ್ರಜೆಗಳಲ್ಲಿ ಸದಾಚಾರ ಸದ್ಭಕ್ತಿ ನೆಲೆಯುವಂತೆ ಮಾಡಿದಳು.

ಸ್ವಾದಿ ಸಂಸ್ಥಾನದ ಇಮ್ಮಡಿ ಅರಸಪ್ಪನಾಯಕನು ಕ್ರಿ.ಶ.೧೫೫೬ರಲ್ಲಿ ಸ್ವರ್ಣವಲ್ಲಿ ಮಠ ಕಟ್ಟಿಸಿ ೫೨ ಗ್ರಾಮಗಳನ್ನು ಉಂಬಳಿ ಬಿಟ್ಟನು. ಕ್ರಿ.ಶ.೧೬೩೮ರಲ್ಲಿ ಸೋದೆಯ ರಾಜ್ಯಾಡಳಿತವನ್ನು ಒಪ್ಪಿಕೊಂಡ ಮಧುಲಿಂಗನಾಯಕನ ಮಡದಿ ವೀರಮ್ಮಾಜಿಯು ಶಿವಪೂಜಾಸಕ್ತಳಾಗಿದ್ದಳು. ಬೃಹನ್ಮಠದ

ರಾಜಗುರುಗಳ ಪ್ರಭಾವದಿಂದ ಸೋದೆ ಮತ್ತು ಬೆಳವಡಿಗಳ ನಡುವೆ ವೈವಾಹಿಕ ಸಂಬಂಧವೇರ್ಪಟ್ಟಿತು. ಬೆಳವಡಿಯ ಸಮರ್ಥದೊರೆ ಈಶಪ್ರಭುವಿನ ಪತ್ನಿ ಸ್ವಾದಿ ಮಲ್ಲಮ್ಮ, ಬೆಳವಡಿ ಅರಸುಮನೆತನದ ಅಭಿವೃದ್ಧಿ, ಸ್ವಾತಂತ್ರ್ಯ, ಸನ್ಮಾರ್ಗ ದರ್ಶನಕ್ಕೆ ಪ್ರೇರಣೆ ನೀಡಿದುದು ಪೂವಲ್ಲಿ ಪಂಚವಣ್ಣಿಗೆ ಬೃಹನ್ಮಠ. ಈ ಮಠದ ಚರಪೀಠಾಧಿಕಾರಿಗಳಾದ ಶ್ರೀ ಸಿದ್ಧವೀರ ಶಿವಾಚಾರ್ಯರು ಮಲ್ಲಮ್ಮನಿಗೆ ಸ್ಫೂರ್ತಿಯನ್ನಿತ್ತರು.

"ರಾಣಿ ಮಲ್ಲಮ್ಮಾಜಿಯು ತನ್ನ ಮಗನಾದ ನಾಗಭೂಷಣನ ಚೌಲಕರ್ಮದ ನಿಮಿತ್ಯ ಪೂವಲ್ಲಿ ಪಂಚವಣ್ಣಿಗೆ ಮಠದ ಸಿದ್ಧವೀರ ಶಿವಾಚಾರ್ಯ ಸ್ವಾಮಿಗಳಿಗೆ ಪಟ್ಟಹಾರ ಪುರವನ್ನು, ಸಹಸ್ರನಾಣ್ಯಗಳನ್ನು ದಾನವಾಗಿ ಕೊಟ್ಟಳು.[೧೪೪] ಬೆಳವಡಿ ಮಲ್ಲಮ್ಮನ ಕಾಲದ ಪತ್ರೆಪ್ಪಜ್ಜನ ಮಠ, ದುರದುಂಡೀಶ್ವರ ಮಠ, ರೊಟ್ಟಿಯ್ಯನವರ ಮಠ, ಕೆಂಜಡಿ ಮಠ, ಹೊಸಮಠ, ವಿರಕ್ತಮಠ, ಪಟದಯ್ಯನವರ ಮಠಗಳು ಬೆಳವಡಿ ಸಂಸ್ಥಾನಿಕರಿಂದ ಭೂದಾನ ಪಡೆಯುತ್ತಿದ್ದವು. ಹೂಲಿಯ ಬೃಹನ್ಮಠದಲ್ಲಿರುವ ಮಲ್ಲಮ್ಮನ ದಾನಶಾಸನದಲ್ಲಿ ಅವಳ ದಾನದ ವಿವರಗಳಿವೆ. "ಸಿದ್ಧವೀರ ಶಿವಾಚಾರ್ಯೊ ದತ್ತ ಶಾಪ ವಿಮೋಚನಂ । ಕೃತ್ವಾಸರ್ವ ತುರುಷ್ಕಾರಿ ಪಂಚಮಾನಾಂ ಗೃಹೇ ಗೃಹೇ"[೧೪೫] ಅಂದರೆ ಗುರುಗಳಿಂದ ಬಂದ ಶಾಪವನ್ನು ಪರಿಹರಿಸಿದ ಕೀರ್ತಿ ಮಲ್ಲಮ್ಮನಿಗೆ ಸಲ್ಲುವುದನ್ನು ದಾನ ಶಾಸನದಲ್ಲಿ ದಾಖಲಿಸಿದೆ.

ನವಲಗುಂದ-ಸಿರಸಂಗಿ ಸಂಸ್ಥಾನದ ಎರಡನೆಯ ಜಾಯಪ್ಪ ದೇಸಾಯಿ "ಬಸವಲಿಂಗ ದೇವರು ವಾಯದೇವ ಹಿರೇಮಠ ಇವರಿಗೆ ಅಳಗವಾಡಿ ಮಠದ ಇನಾಮ ಹೊಲಾ ಪ್ರಮಾಣ ಪೂರ್ವಕ ನಡೆಯಬೇಕೆಂದು ಸೂಚಿಸಿ ದಾನ ನೀಡಿದ್ದಾರೆ.[೧೪೬] "ನಾಲ್ಕನೆಯ ಜಾಯಪ್ಪ ದೇಸಾಯಿ ಸಿರಸಂಗಿಯಲ್ಲಿ ಕಾಡಸಿದ್ಧೇಶ್ವರ ಮಠವನ್ನು ಕಟ್ಟಿಸಿದನು."[೧೪೭] ಲಿಂಗವ್ವ ದೇಸಾಯಿಣಿಗೆ ನವಿಲುಗುಂದ ಗವಿಮಠದ ಮೃತ್ಯುಂಜಯ ಸ್ವಾಮಿಗಳು ಮಾರ್ಗದರ್ಶನ ನೀಡುತ್ತಿದ್ದರು[೧೪೮] ಎಂಬ ಉಲ್ಲೇಖವಿದೆ.

ಬಿಳಗಿ ಸಂಸ್ಥಾನಿಕರು ಬಸದಿಗಳನ್ನು ನಿರ್ಮಿಸಿದಂತೆ ವೀರಶೈವ ಮಠಗಳನ್ನು ಸ್ಥಾಪಿಸಿದರು. ಬಿಳಗಿ ಸಂಸ್ಥಾನಿಕರು ಹಿರೇಮಠ, ಕಲ್ಯಾಣದೇವರ ಮಠ, ಕಾನನ ಮಠ, ಚಿಲುಮೆ ಮಠ, ಮಹಾಂತನ ಮಠಗಳಿಗೆ ದಾನ ದತ್ತಿ ನೀಡಿದ ವಿವರಗಳಿವೆ.

ಹಾಗಲವಾಡಿ ಸಂಸ್ಥಾನದ ಪಕ್ಕದಲ್ಲಿರುವ ಕುಣಿಗಲ್ ಬಳಿಯ ಎಡೆಯೂರು ಸಿದ್ಧಲಿಂಗೇಶ್ವರರು, ಹಾಗಲವಾಡಿ ಮನೆತನದೊಂದಿಗೆ ಸಂಪರ್ಕವನ್ನಿಟ್ಟುಕೊಂಡಿದ್ದರು. ಯುಗೆನಾಗಿ ನಾಯಕನ ಮಗ ಸಾಲಿನಾಯಕನು ಸಿದ್ಧೇಶ್ವರ ಸ್ವಾಮಿಯ ಭಕ್ತನಾಗಿದ್ದನು. ಹಿರಿಯ ಮುದಿಯಪ್ಪ ನಾಯಕನು ಧರ್ಮನಿಷ್ಠನಾಗಿದ್ದು ತನ್ನ ಆಸ್ಥಾನದಲ್ಲಿ ಸೋಸಲೆ ರೇವಣಾರಾಧ್ಯರಿಗೆ ಆಶ್ರಯ ನೀಡಿ ವೀರಶೈವ

ಪರ ಕೃತಿಗಳನ್ನು ಬರೆಯಲು ಉತ್ತೇಜನ ನೀಡಿದನು. ಮಹಾಜ್ಞಾನಿಗಳಾದ ಮುದ್ದುವೀರ ಸ್ವಾಮಿಗಳಿಂದ ವೀರಶೈವ ತತ್ವಜ್ಞಾನೋಪದೇಶವನ್ನು ಪಡೆದುಕೊಂಡರು. ಹಾಗಲವಾಡಿ ಸಂಸ್ಥಾನಿಕರ ಕಾಲದಲ್ಲಿ ಮಹಾಮತ್ತಿನ ಮಠ, ಮಹಂತಿನಮಠ, ಕಂತೇಸ್ವಾಮಿ ಮಠ, ಒಪ್ಪತ್ತೈಯ್ಯನ ಮಠ, ಕಣಗೀಲು ಮಠ, ಗುರುಪಾದಸ್ವಾಮಿ ಮಠ, ವಿರಕ್ತಮಠ, ನಿರಂಜನ ಸ್ವಾಮಿ ಮಠ, ಅಂಗಪ್ಪನವರ ಮಠ, ದಾಸೋಹ ಮಠ, ಸಿದ್ಧಪ್ಪನವರ ಮಠ, ಕಾಡಸಿದ್ಧೇಶ್ವರ ಮಠ, ಕಲ್ಲುಮಠ ಇತ್ಯಾದಿ ಮಠಗಳು ಇದ್ದವು. ಈ ಮಠಗಳೆಲ್ಲವು ವಿದ್ಯಾಕೇಂದ್ರಗಳಾಗಿದ್ದವು.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಗುರುವಿಗೆ ವಿಶಿಷ್ಟ ಸ್ಥಾನವಿದೆ. ಗುರುಗಳನ್ನು ವಿದ್ಯಾಗುರು ಹಾಗೂ ಧರ್ಮಗುರುವೆಂದು ವಿಭಜಿಸಬಹುದು. ಶಿಕ್ಷಣವನ್ನು ಕೊಡುವವನು ವಿದ್ಯಾಗುರುವಾದರೆ, ಧರ್ಮದಂಡವನ್ನು ಹಿಡಿದು ಸದಾ ಎಚ್ಚರಿಕೆಯಿಂದ ರಾಜನನ್ನು, ರಾಜ್ಯವನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತಾ, ನಿತ್ಯವೂ ಜಪ, ತಪ, ಪಾಠ ಪ್ರವಚನ, ಗ್ರಂಥ ರಚನೆಯಲ್ಲಿ ಕಾಲಕಳೆಯುತ್ತಾ, ಆತ್ಮೋನ್ನತಿಯೊಂದಿಗೆ ಸಮಾಜೋನ್ನತಿ, ದೇಶೋನ್ನತಿಯನ್ನು ಮಾಡುತ್ತಿದ್ದವನು ಧರ್ಮಗುರು. ಧರ್ಮರಕ್ಷೆಯಲ್ಲಿ ಸಾಗಿಬಂದ ಹಾಗಲವಾಡಿ ಮನೆತನಕ್ಕೆ ಎಡೆಯೂರು ಸಿದ್ಧಲಿಂಗೇಶ್ವರರು, ಮದ್ವೀರ ಸ್ವಾಮಿಗಳು ರಾಜಗುರುಗಳು, ಧರ್ಮಗುರುಗಳು ಆಗಿದ್ದರು.

ಬಳ್ಳಾರಿ ಹಂಡೆ ಪಾಳೇಗಾರರು ಲಿಂಗಾಯತ ಧರ್ಮೀಯರಾಗಿದ್ದು, ಹಲವಾರು ಮಠಗಳಿಗೆ ದಾನ ದತ್ತಿ ನೀಡಿದರು. ಈ ಪ್ರದೇಶದಲ್ಲಿ ಶ್ರೀ ಜಗದ್ಗುರು ಕೊಟ್ಟೂರು ಸಂಸ್ಥಾನ ಮಠದ ರಾಜಗುರು ಪರಂಪರೆ ಇದೆ. ಶ್ರೀ ಕಪ್ಪಿನ ಚನ್ನಬಸವ ಸ್ವಾಮಿಗಳು ರಾಜಗುರುಗಳಾಗಿದ್ದರು. ಶ್ರೀಶೈಲ ನಿಡುಮಾಮಡಿ ಪೀಠದ ಕರಿಬಸವ ದೇಶಿಕೇಂದ್ರರು ಈ ಪಾಳೇಗಾರರನ್ನು ರಕ್ಷಿಸುತ್ತಾ ಬಂದಿದ್ದರು. ಹಂಡೆ ನೀಲಮ್ಮ ಸಮರ್ಥ ಆಡಳಿತ ನಡೆಸುವುದರೊಂದಿಗೆ ಕೊಟ್ಟೂರು ಮಠಕ್ಕೆ ದಾನ, ದತ್ತಿ ನೀಡಿದಳು.

ಹೀಗೆ ಮಠಗಳು ಧರ್ಮಜಾಗೃತಿ, ಧರ್ಮಾಚರಣೆ, ಶೈಕ್ಷಣಿಕ ಸೇವೆ, ಸಮಾಜ ಸುಧಾರಣೆ, ಮಾನವೀಯ ಮೌಲ್ಯಗಳ ಪ್ರಸಾರ, ಕರ್ತವ್ಯಗಳಿಗಾಗಿ ನಿರ್ಮಾಣಗೊಂಡು ಹಲವಾರು ರಾಜ ರಾಣಿಯರಿಂದ ಪೋಷಣೆಗೊಳ್ಳುತ್ತಲೇ ಬಂದಿವೆ.

ಗೆಜ್ಜಲಗಟ್ಟೆ ಲಕ್ಷ್ಮೀದೇವಿಯು ಸಂತೆ ಕಲ್ಲೂರಿನ ಘನಮಠದಾರ್ಯರ ಭಕ್ತಳಾಗಿದ್ದಳು. ಇವರ ಪೂಜೆಗೆಂದು ಬೆಳ್ಳಿಯ ಸಾಮಾನುಗಳನ್ನು ಒಯ್ದು, ಅವನ್ನು ಪೂಜ್ಯರ ಪಾದಕ್ಕೆ ಸಲ್ಲಿಸಿ, ಅವನ್ನು ಸ್ವೀಕರಿಸಲು ವಿನಂತಿಸಿಕೊಂಡಳು. ಆಗ ಘನ ಮಠದಾರ್ಯರು 'ಏನಮ್ಮ ತಾಯಿ, ನಿನ್ನನ್ನು ನನ್ನ ತಲೆಯ ಮೇಲೆ ಹೊತ್ತುಕೊಂಡು ಹೋಗಲೇ. ಆ ಬೆಳ್ಳಿಪಾತ್ರೆಯ ಮೇಲೆ

ರಾಣಿಯ ವಿಳಾಸವಿದ್ದಿತು' ಎಂಬ ಮಾತಿನಿಂದ ರಾಣಿಗೆ ಸದ್ವಿವೇಕ ಉಂಟಾಯಿತು. ಅಧಿಕಾರದ ಅಹಂಕಾರ ಇಳಿಯಿತು. ಅಧಿಕಾರ, ರಾಜಭೋಗ, ವಿಲಾಸಗಳು ನಶ್ವರವೆಂಬ ಅರಿವು ರಾಣಿಗಾಯಿತು. ಆಗ ಘನಮಠದಾರ್ಯರು ರಾಣಿಗೆ ಗುರುಬೋಧೆ ನೀಡಿದರು. ಧರ್ಮಾಚರಣೆ, ಗುರು-ಲಿಂಗ-ಜಂಗಮ ಸೇವೆಯಲ್ಲಿ ರಾಣಿ ನಿರತಳಾದಳು. ರಾಣಿ ನಿತ್ಯ ದಾಸೋಹದ ಮಹಿಮೆಯಿಂದ ಗೆಜ್ಜಲಗಟ್ಟೆ 'ಮರಿಕಲ್ಯಾಣವಾಗಿ' ಮಾರ್ಪಟ್ಟಿತು.

ರಾಣಿ ಲಕ್ಷ್ಮೀದೇವಿಯು ತನ್ನ ಜಹಗೀರ್ ಗ್ರಾಮಗಳಲ್ಲಿರುವ ೧೪-೧೫ ಮಠ, ದೇವಾಲಯಗಳಲ್ಲಿ ನಿತ್ಯ ಆರಾಧನೆ ಮತ್ತು ಪೂಜಾ ಕೈಂಕರ್ಯಗಳು ನಡೆಯಲು ಅವಕ್ಕೆ ಭೂಮಿಯನ್ನು ಇನಾಮಾಗಿ ನೀಡಿದರು. ಶ್ರೀ ರಾಘವೇಂದ್ರಸ್ವಾಮಿ ಮಠಕ್ಕೆ ೧೪ ಎಕರೆ ಭೂಮಿ ಇನಾಮ ನೀಡಿ, ಪರಧರ್ಮ ಸಮಾನತೆಯನ್ನು ತೋರಿದಳು. ಅದರಂತೆ ಜಡಿಸ್ವಾಮಿ ಮಠ, ರುದ್ರಸ್ವಾಮಿ ಮಠ, ಕೋಡಿಮಠ, ಉದ್ಧಾನಮಠ, ಪಟ್ಟದ ಕಾಂತಿ ಮಠಗಳಿಗೆ ಸಾಕಷ್ಟು ಇನಾಮು ಹಾಕಿಕೊಟ್ಟಿರುವಳು. ನಂದವಾಡಗಿ ಸ್ವಾಮಿಗಳು, ಹಲದಿಮಾನ ಸ್ವಾಮಿಗಳು, ಪರ್ವತ ಶಾಸ್ತ್ರಿಗಳು ಮೊದಲಾದ ಮಠದ ಸ್ವಾಮಿಗಳಿಗೆ ಭೂಮಿ ನೀಡಿ ಸತ್ಕರಿಸಿದಳು. ಬಳ್ಳಾರಿಯ ಸಕ್ರಿ ಕರಡೆಪ್ಪ ಪಾಠಶಾಲೆ ಮತ್ತು ಜಂಗಮ ದಾಸೋಹಮೂರ್ತಿಗಳಿಗೆ ಭೂಮಿದಾನ ನೀಡಿದಳು."[೧೪೯]

ಜವಳಗೆರೆ ಮೂಲ ಅರಸರು ಬಳ್ಳಾರಿಯ ಹಾವಿನಹಾಳ ಮರಿಸಿದ್ಧಯ್ಯ ಅವಧೂತರ ಎದ್ದಲುದೊಡ್ಡಿ ಸಿದ್ಧಲಿಂಗೇಶ್ವರ ವಿರಕ್ತಮಠದ ಭಕ್ತರಾಗಿದ್ದರು. ಜವಳಗೆರೆ ರಾಣಿ ಉಮನಾಬಾಯಿ ಆಂಧ್ರಪ್ರದೇಶದ ಬದಗಾನಪಲ್ಲಿ ಮಠದ ಸ್ವಾಮಿಗಳ ಭಕ್ತಳಾಗಿದ್ದಳು. ಇವರೇ ಆಸ್ಥಾನಪಂಡಿತ ಶಾಸ್ತ್ರಿಮಠದ ಮೂಲಪುರುಷರು. ಇವರಲ್ಲಿ ಪಂಡಿತಾರಾಧ್ಯ ಶಾಸ್ತ್ರಿಗಳು ಪ್ರಸಿದ್ಧರು. ಶಾಸ್ತ್ರಿಗಳ ವಿದ್ವತ್ತನ್ನು ಮೆಚ್ಚಿದ ರಾಣಿ ಮಠವನ್ನು ಕಟ್ಟಿಕೊಳ್ಳಲು ಇವರಿಗೆ ಭೂದಾನ ಮಾಡಿದಳು. ಅದು ಸಂಸ್ಕೃತ ಭಾಷೆಯಲ್ಲಿದ್ದು, ಶಿಲಾಶಾಸನ ಮಾದರಿಯಲ್ಲಿದೆ ಎಂಬುದಾಗಿ ಮುಕ್ಕುಂದಿಮಠರು ದಾಖಲಿಸಿದ್ದಾರೆ.

ಮಾನ್ವಿ ಜಡೆಯಮ್ಮ ಮತ್ತು ಚನ್ನಮಲ್ಲಪ್ಪ ದಂಪತಿಗಳು ಸುಸಂಸ್ಕೃತರು, ಸಚ್ಚಾರಿತ್ರ್ಯ ಸನ್ನಡತೆಯುಳ್ಳ ಇವರು ಧಾರ್ಮಿಕ ಕಾರ್ಯದಲ್ಲಿ ತೊಡಗಿದ್ದರು. ತಮ್ಮ ಮನೆಯ ದೈವವಾದ ಮಾನ್ವಿ ಬೆಟ್ಟದ ಮೇಲಿನ ಮಲ್ಲಿಕಾರ್ಜುನ ಸ್ವಾಮಿಯ ಪರಮಭಕ್ತರಾಗಿದ್ದರು. ಮಾನ್ವಿ ಕಲ್ಮಠದ ಸ್ವಾಮಿಗಳು ಇವರ ಗುರುಗಳಾಗಿದ್ದರು. ಅಂದಿನ ಕಲ್ಮಠದ ವಿರೂಪಾಕ್ಷ ಸ್ವಾಮಿಗಳಲ್ಲಿ ಇವರಿಗೆ ಭಕ್ತಿಯಿತ್ತು.

ಕಳಲೆಯ ರಾಣಿ ಅಮೃತಮ್ಮ ಹಂಗಳದಲ್ಲಿ ಕಲ್ಲುಮಠ ಕಟ್ಟಿಸಿದಳೆಂದು ಕ್ರಿ.ಶ.೧೬೫೬ರ ಗುಂಡ್ಲುಪೇಟೆ ತಾಲ್ಲೂಕಿನ ಹಂಗಳ ಶಾಸನವು ಉಲ್ಲೇಖಿಸಿದೆ. ಅಲ್ಲದೆ "ಕ್ರಿ.ಶ.೧೬೬೨ರ ಉಪ್ಪಿನಹಳ್ಳಿ

ಶಾಸನವು ಮೈಸೂರಿನ ದೊರೆ ರಣಧೀರ ಕಂಠೀರವ ನರಸರಾಜ ಒಡೆಯರ ನೆನಪಿಗಾಗಿ ಪತ್ನಿ ದೇವಾಜಮ್ಮಣ್ಣಿ ಕಳಲೆಯಲ್ಲಿ ಒಂದು ಮಠವನ್ನು ಕಟ್ಟಿಸಿ, ಮಹಾಮಹತ್ತಿನ ಮಠಕ್ಕೆ ವಹಿಸಿಕೊಟ್ಟ ಬಗೆಗೆ ಹಾಗೂ ಕಳಲೆ ಸೀಮೆಯ ಉಪ್ಪಿನಹಳ್ಳಿ ಗ್ರಾಮವನ್ನು ದತ್ತಿಯಾಗಿ ಕೊಟ್ಟ"[೧೫೦] ಬಗ್ಗೆ ದಾಖಲೆಯಿದೆ. ಅಲ್ಲದೆ "....ಕಳಲೆಯಲ್ಲಿ ಮಠವನ್ನು ಕಟ್ಟಿಸಿ ಮಹಾಮಹತ್ತಿಗೆ ನೇಮಕವ ಮಾಡಿ ಅವರಿಗೆ ಕೊಟ್ಟ ಸ್ವಾಸ್ಥೆ, ಕುರಕಟ್ಟೆ, ಸಂಬುಪುರ ಸಹ ಶಿವಾರ್ಪಿತವಾಗಿ ಲಿಂಗಮುದ್ರೆ ಕಲ್ಲನ್ನು ಸ್ಥಾಪಿತವ ಮಾಡಿದ..."[೧೫೧] ಎಂಬ ಇತ್ಯಾದಿ ವಿವರಗಳಿವೆ. ಕ್ರಿ.ಶ.೧೬೪೭ರ ಮೆಲ್ಲಾರ ಪಾಳ್ಯ ಶಾಸನವು ಕಳಲೆಯ ಪ್ರಭು ಮಲ್ಲರಾಜ ಅರಸನ ಮಗಳಾದ ಮಲ್ಲರಾಜಮ್ಮ ವೀರಶೈವ ಮಹಾಮಹತ್ತಿನ ಮಠವನ್ನು ಕಳಲೆಯಲ್ಲಿ ಸ್ಥಾಪಿಸಿದಳೆಂದು ತಿಳಿಸುತ್ತದೆ.

ಕಿತ್ತೂರು ಸಂಸ್ಥಾನದ ಕಲ್ಮಠವು ವಿರಕ್ತ ಸಂಪ್ರದಾಯದ್ದಾಗಿದ್ದು, ನಿತ್ಯವು ಪಾದೋದಕ ಸ್ವೀಕರಿಸುವ ಸಂಪ್ರದಾಯ ಮಲ್ಲಸರ್ಜನದಾಗಿತ್ತು. ಪುಣೆಯಲ್ಲಿ ಕೈದಿಯಾಗಿದ್ದ ಮಲ್ಲಸರ್ಜನಿಗೆ ಕುದುರೆ ಸವಾರರ ಮುಖಾಂತರ ಕಲ್ಮಠದಿಂದಲೇ ಪಾದೋದಕ ಮುಟ್ಟುತ್ತಿತ್ತು. ಇದು ಆತನ ಧಾರ್ಮಿಕ ಮನೋಭಾವದ ಪ್ರತೀಕವಾಗಿದೆ. ಈತ ಬೈಲಹೊಂಗಲದಲ್ಲಿ ರುದ್ರಾಕ್ಷಿಮಠ ಸ್ಥಾಪಿಸಿದನು. ಕಿತ್ತೂರು ಸಂಸ್ಥಾನದ ೮೦೦ ಹಳ್ಳಿಗಳಲ್ಲೂ ಒಂದೊಂದು ಮಠವಿದ್ದುದು ವಿಶೇಷ. ಆ ಮಠಕ್ಕೆ ಒಬ್ಬೊಬ್ಬ ಸ್ವಾಮಿಗಳಿದ್ದರು. ಮಠಕ್ಕೆ ಬಂದ ಅತಿಥಿಗಳಿಗೆ ಅಲ್ಲಿ ಆಶ್ರಯ ದೊರೆಯುತ್ತಿತ್ತು. ಇದರ ನಿರ್ವಹಣೆಗಾಗಿ 'ಸಾವಿರಮಠ' ಎಂಬ ಗುರುಪೀಠ ಸ್ಥಾಪನೆಯಾಯ್ತು. ರಾಣಿ ಚೆನ್ನಮ್ಮ ಮಠಕ್ಕೆ ದಾನ, ದತ್ತಿ ನೀಡುವುದರ ಜೊತೆಗೆ ಜಂಗಮರಿಗೂ ಪ್ರಾಶಸ್ತ್ಯ ನೀಡಿದಳು. ರಾಣಿಯು ಬ್ರಿಟಿಷ್ ಗೌರ್ನರನಿಗೆ ಬರೆದ ಪತ್ರದಿಂದ ಆಕೆ ಜಂಗಮರಿಗೆ ಪ್ರಾಶಸ್ತ್ಯ ನೀಡಿದ ವಿವರಗಳು ದೊರೆಯುತ್ತವೆ. "....Many Jangamas are constantly coming here for giving alms to whom no appropriate place has been reserved"[೧೫೨] ಎಂಬ ಮಾತು ಕಿತ್ತೂರಿಗೆ ಬಹು ಜನ ಜಂಗಮರು ಆಗಮಿಸುತ್ತಿದ್ದರೆಂದರೂ, ಇಲ್ಲಿ ನಿತ್ಯ ದಾಸೋಹ ನಡೆಯುತ್ತಿತ್ತೆಂದು ತಿಳಿದುಬರುತ್ತದೆ.

ದೇವಾಲಯಗಳು ನಮ್ಮ ನಾಡಿನ ಸಂಸ್ಕೃತಿಯ ಪ್ರತೀಕಗಳು. ಪ್ರಾಚೀನ ಕಾಲದಿಂದಲೂ ದೇವಾಲಯಗಳಿಗೆ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಬಹು ಮಹತ್ವದ ಸ್ಥಾನವಿದೆ. ಒಂದೊಂದು ದೇವಾಲಯವು ಸುವ್ಯವಸ್ಥಿತವಾದ, ನಿಯಮಬದ್ಧವಾದ ಒಂದು ಸಂಸ್ಥೆಯಂತೆ ಕಾರ್ಯ ನಿರ್ವಹಿಸುತ್ತಿದ್ದವು. ದೇವಸ್ಥಾನಗಳನ್ನು ಸ್ಥಾಪಿಸುವ ಸಂಪ್ರದಾಯವು ಅಶೋಕನಿಗಿಂತ ಈಚಿನದು. ಬೌದ್ಧರ ಭವ್ಯ ದೇವಾಲಯಗಳನ್ನು, ವಿಹಾರಗಳನ್ನು ನೋಡಿದ ಹಿಂದೂಗಳ ಮನಸಿನಲ್ಲಿ ಅಂಥ ಸಾರ್ವಜನಿಕ ಆರಾಧನಾ ಕೇಂದ್ರಗಳನ್ನು ಸ್ಥಾಪಿಸಬೇಕೆಂಬ ಬಯಕೆ ಉದಯಿಸಿರಬಹುದು. ಅದೇನೇ ಇರಲಿ ದೇವಸ್ಥಾನಗಳು ಸಾರ್ವಜನಿಕ ಪೂಜಾ ಕೇಂದ್ರಗಳಾಗಿದ್ದವು.

ವಾಗುತ್ತಿತ್ತು. ದೇವಾಲಯಗಳು ಉದಾತ್ತ ಸಂಸ್ಕೃತಿಯ ಸಾಧನಗಳು. ಹಾಗಾಗಿಯೇ ದೇವಾಲಯಗಳ ಸಂಖ್ಯೆ ಅಧಿಕವಾಗಿ ಬೆಳೆಯಿತು. ಭಕ್ತರ ಸಂಖ್ಯೆ ಅಧಿಕಗೊಂಡಂತೆ ದೇವಾಲಯಗಳ ಹರವು ವಿಸ್ತಾರಗೊಂಡಿತು. ಜನರಲ್ಲಿ ಸಮನ್ವಯ ಬುದ್ಧಿ ಬೆಳೆಸಲು ಇವು ಸಹಕಾರಿಯಾದವು. ಇದರ ಪರಿಣಾಮವಾಗಿ ಮೂಲ ದೇವತಾ ಉಪಾಸನೆಯೊಂದಿಗೆ ಇತರ ದೇವತೆಗಳ ಉಪಾಸನೆಯೂ ಬೆಳೆದು ಬಂದಿತು.

ಜೀವನದಲ್ಲಿ ಒಂದಾದರೂ ದೇವಾಲಯವನ್ನು ಕಟ್ಟಿಸಬೇಕು. ಇಲ್ಲವೆ ನಿರ್ಮಾಣಗೊಂಡ ದೇವಾಲಯಗಳಿಗೆ ದಾನ-ದತ್ತಿಯನ್ನಾದರೂ ಕೊಡಬೇಕು ಎಂಬುದು ನಮ್ಮ ಪ್ರಾಚೀನ ನಂಬಿಕೆಯಾಗಿತ್ತು. ಈ ಧಾರ್ಮಿಕ ಭಾವನೆಯಂತೆ ರಾಜರು, ರಾಣಿಯರು, ರಾಜಕುಮಾರರು ದಂಡನಾಯಕರು, ಸಾಮಂತರು, ಮಂತ್ರಿ, ಸಾಮಾನ್ಯ ಜನರು ಕೂಡ ದಾನ ಕೊಟ್ಟಿರುವ ದಾಖಲೆಗಳಿವೆ. ಗಳಿಸಿದ ಸಂಪತ್ತು ಶಾಶ್ವತವಾದುದಲ್ಲ. ಆದರೆ ನಿರ್ಮಿಸಿದ ದೇವಾಲಯ, ಕೊಟ್ಟ ದಾನದತ್ತಿಗಳು ಶಾಶ್ವತವಾದವುಗಳು. ಹೀಗಾಗಿಯೇ ಗಳಿಸಿದ ಐಶ್ವರ್ಯವನ್ನು ಸಾರ್ಥಕ್ಯಗೊಳಿಸಲು ಬದುಕನ್ನು ಸಾರ್ಥಕಗೊಳಿಸಿಕೊಳ್ಳಲು ದೇವಾಲಯ ನಿರ್ಮಾಣ ಮಾಡಿರುವುದು ಕಂಡುಬರುತ್ತದೆ.

ದೇವಸ್ಥಾನವನ್ನು ಕಟ್ಟಿಸಿದರೆ ಸಾಲದು, ಕಟ್ಟಿಸಿದ ದೇವಾಲಯದಲ್ಲಿ ನಿತ್ಯ ಪೂಜಾದಿ ಕಾರ್ಯಗಳು ನಿರಂತರ ಸಾಂಗವಾಗಿ ನಡೆಯಬೇಕು. ಹೀಗಾಗಿಯೇ ಕಟ್ಟಿಸಿದ ದೇವಾಲಯಗಳಿಗೆ ಕಟ್ಟಿಸಿದ ವ್ಯಕ್ತಿ, ರಾಜ, ರಾಣಿಯರು, ಮಂತ್ರಿ-ಮಹೋದಯರು, ಸಾಮಾನ್ಯ ಜನರು ಇತ್ಯಾದಿ ದತ್ತಿ ಬಿಟ್ಟಿರುವುದು ಕಂಡುಬರುತ್ತದೆ.

ಕೆಳದಿ ಸಂಸ್ಥಾನದ ಚೌಡಪ್ಪನಾಯಕನು ಶ್ರೀ ರಾಮೇಶ್ವರ ದೇವಾಲಯವನ್ನು ಮರದಿಂದ ಕಟ್ಟಿಸಿದನು. ನಂತರ ಅಧಿಕಾರಕ್ಕೆ ಬಂದ ಸದಾಶಿವನಾಯಕನು ರಾಮೇಶ್ವರ ದೇವಾಲಯವನ್ನು ಶಿಲೆಯಿಂದ ನಿರ್ಮಿಸಿದನು. ಕೆಳದಿ ಅರಸರು ಇಕ್ಕೇರಿಯ ಅಘೋರೇಶ್ವರ, ಕೆಳದಿ ಪಾರ್ವತಮ್ಮ ದೇವಾಲಯ, ವೀರಭದ್ರ ದೇವಾಲಯ, ಕಾಶಿಯಲ್ಲಿರುವ ಕರ್ದಮೇಶ್ವರ, ಭೀಮಚಂಡಿಕೆ, ವೃಷಭಧ್ವಜೇಶ್ವರ, ಧರ್ಮಸ್ಥಳ, ಗೋಕರ್ಣ, ಕೊಲ್ಲೂರು ಮೂಕಾಂಬಿಕಾ ದೇವಾಲಯಗಳಿಗೆ ದಾನ-ದತ್ತಿ ನೀಡಿರುವುದು ಕಂಡುಬರುತ್ತದೆ.

ಕೆಳದಿ ರಾಣಿ ಚೆನ್ನಮ್ಮಾಜಿಯು ಶಿವಮೊಗ್ಗ ಜಿಲ್ಲೆ ಬಿಳಕಿ ಗ್ರಾಮದ ವೀರಭದ್ರದೇವರಿಗೆ ನಂದಾದೀಪಕ್ಕಾಗಿ ದಾನ ಬಿಟ್ಟ ವಿವರವನ್ನು ಕ್ರಿ.ಶ.೧೬೬೯ರ ಶಾಸನವು ದಾಖಲಿಸುತ್ತದೆ. ಅಲ್ಲದೆ ಬಸವನಂದಿ ಹಳ್ಳಿಯಲ್ಲಿ ಮಂಟಪ ಕಟ್ಟಿಸಿದ ವಿವರವನ್ನು ಕ್ರಿ.ಶ.೧೬೭೨ರ ಶಾಸನ ದಾಖಲಿಸುತ್ತದೆ. "ಕೆಳದಿ ಶಿವಪ್ಪನಾಯಕನ ಪುತ್ರರಾದ ಸೋಮಶೇಖರ ನಾಯಕರ ಧರ್ಮಪತ್ನಿಯರಾದ ಚಂನಂಮಾಜಿಯವರು ಕಟ್ಟಿಸಿದ ಮಂಟಪಧರ್ಮ ಶ್ರೀ"[೧೫೫] ಎಂದು ದಾಖಲಿಸುತ್ತದೆ. ಹರಿಹರ

ವಾಗುತ್ತಿತ್ತು. ದೇವಾಲಯಗಳು ಉದಾತ್ತ ಸಂಸ್ಕೃತಿಯ ಸಾಧನಗಳು. ಹಾಗಾಗಿಯೇ ದೇವಾಲಯಗಳ ಸಂಖ್ಯೆ ಅಧಿಕವಾಗಿ ಬೆಳೆಯಿತು. ಭಕ್ತರ ಸಂಖ್ಯೆ ಅಧಿಕಗೊಂಡಂತೆ ದೇವಾಲಯಗಳ ಹರವು ವಿಸ್ತಾರಗೊಂಡಿತು. ಜನರಲ್ಲಿ ಸಮನ್ವಯ ಬುದ್ಧಿ ಬೆಳೆಸಲು ಇವು ಸಹಕಾರಿಯಾದವು. ಇದರ ಪರಿಣಾಮವಾಗಿ ಮೂಲ ದೇವತಾ ಉಪಾಸನೆಯೊಂದಿಗೆ ಇತರ ದೇವತೆಗಳ ಉಪಾಸನೆಯೂ ಬೆಳೆದು ಬಂದಿತು.

ಜೀವನದಲ್ಲಿ ಒಂದಾದರೂ ದೇವಾಲಯವನ್ನು ಕಟ್ಟಿಸಬೇಕು. ಇಲ್ಲವೆ ನಿರ್ಮಾಣಗೊಂಡ ದೇವಾಲಯಗಳಿಗೆ ದಾನ-ದತ್ತಿಯನ್ನಾದರೂ ಕೊಡಬೇಕು ಎಂಬುದು ನಮ್ಮ ಪ್ರಾಚೀನ ನಂಬಿಕೆಯಾಗಿತ್ತು. ಈ ಧಾರ್ಮಿಕ ಭಾವನೆಯಂತೆ ರಾಜರು, ರಾಣಿಯರು, ರಾಜಕುಮಾರರು ದಂಡನಾಯಕರು, ಸಾಮಂತರು, ಮಂತ್ರಿ ಸಾಮಾನ್ಯ ಜನರು ಕೂಡ ದಾನ ಕೊಟ್ಟಿರುವ ದಾಖಲೆಗಳಿವೆ. ಗಳಿಸಿದ ಸಂಪತ್ತು ಶಾಶ್ವತವಾದುದಲ್ಲ. ಆದರೆ ನಿರ್ಮಿಸಿದ ದೇವಾಲಯ, ಕೊಟ್ಟ ದಾನದತ್ತಿಗಳು ಶಾಶ್ವತವಾದವುಗಳು. ಹೀಗಾಗಿಯೇ ಗಳಿಸಿದ ಐಶ್ವರ್ಯವನ್ನು ಸಾರ್ಥಕ್ಯಗೊಳಿಸಲು ಬದುಕನ್ನು ಸಾರ್ಥಕಗೊಳಿಸಿಕೊಳ್ಳಲು ದೇವಾಲಯ ನಿರ್ಮಾಣ ಮಾಡಿರುವುದು ಕಂಡುಬರುತ್ತದೆ.

ದೇವಸ್ಥಾನವನ್ನು ಕಟ್ಟಿಸಿದರೆ ಸಾಲದು, ಕಟ್ಟಿಸಿದ ದೇವಾಲಯದಲ್ಲಿ ನಿತ್ಯ ಪೂಜಾದಿ ಕಾರ್ಯಗಳು ನಿರಂತರ ಸಾಂಗವಾಗಿ ನಡೆಯಬೇಕು. ಹೀಗಾಗಿಯೇ ಕಟ್ಟಿಸಿದ ದೇವಾಲಯಗಳಿಗೆ ಕಟ್ಟಿಸಿದ ವ್ಯಕ್ತಿ, ರಾಜ, ರಾಣಿಯರು, ಮಂತ್ರಿ-ಮಹೋದಯರು, ಸಾಮಾನ್ಯ ಜನರು ಇತ್ಯಾದಿ ದತ್ತಿ ಬಿಟ್ಟಿರುವುದು ಕಂಡುಬರುತ್ತದೆ.

ಕೆಳದಿ ಸಂಸ್ಥಾನದ ಚೌಡಪ್ಪನಾಯಕನು ಶ್ರೀ ರಾಮೇಶ್ವರ ದೇವಾಲಯವನ್ನು ಮರದಿಂದ ಕಟ್ಟಿಸಿದನು. ನಂತರ ಅಧಿಕಾರಕ್ಕೆ ಬಂದ ಸದಾಶಿವನಾಯಕನು ರಾಮೇಶ್ವರ ದೇವಾಲಯವನ್ನು ಶಿಲೆಯಿಂದ ನಿರ್ಮಿಸಿದನು. ಕೆಳದಿ ಅರಸರು ಇಕ್ಕೇರಿಯ ಅಘೋರೇಶ್ವರ, ಕೆಳದಿ ಪಾರ್ವತಮ್ಮ ದೇವಾಲಯ, ವೀರಭದ್ರ ದೇವಾಲಯ, ಕಾಶಿಯಲ್ಲಿರುವ ಕರ್ದಮೇಶ್ವರ, ಭೀಮಚಂಡಿಕೆ, ವೃಷಭಧ್ವಜೇಶ್ವರ, ಧರ್ಮಸ್ಥಳ, ಗೋಕರ್ಣ, ಕೊಲ್ಲೂರು ಮೂಕಾಂಬಿಕಾ ದೇವಾಲಯಗಳಿಗೆ ದಾನ-ದತ್ತಿ ನೀಡಿರುವುದು ಕಂಡುಬರುತ್ತದೆ.

ಕೆಳದಿ ರಾಣಿ ಚೆನ್ನಮ್ಮಾಜಿಯು ಶಿವಮೊಗ್ಗ ಜಿಲ್ಲೆ ಬಿಳಕಿ ಗ್ರಾಮದ ವೀರಭದ್ರದೇವರಿಗೆ ನಂದಾದೀಪಕ್ಕಾಗಿ ದಾನ ಬಿಟ್ಟ ವಿವರವನ್ನು ಕ್ರಿ.ಶ.೧೬೭೯ರ ಶಾಸನವು ದಾಖಲಿಸುತ್ತದೆ. ಅಲ್ಲದೆ ಬಸವನಂದಿ ಹಳ್ಳಿಯಲ್ಲಿ ಮಂಟಪ ಕಟ್ಟಿಸಿದ ವಿವರವನ್ನು ಕ್ರಿ.ಶ.೧೬೭೭ರ ಶಾಸನ ದಾಖಲಿಸುತ್ತದೆ. "ಕೆಳದಿ ಶಿವಪ್ಪನಾಯಕನ ಪುತ್ರರಾದ ಸೋಮಶೇಖರ ನಾಯಕರ ಧರ್ಮಪತ್ನಿಯರಾದ ಚಂನಂಮಾಜಿಯವರು ಕಟ್ಟಿಸಿದ ಮಂಟಪಧರ್ಮ ಶ್ರೀ" ಎಂದು ದಾಖಲಿಸುತ್ತದೆ. ಹರಿಹರ

ಕ್ರಮಿತರು ಕಟ್ಟಿಸಿದ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ರಾಣಿ ಚೆನ್ನಮ್ಮಾಜಿಯವರು "ತುಂಗಾ ತೀರದಲ್ಲು ಶ್ರೀ ಹರಿಹರ ಕ್ರಮಿತರು ಕಟ್ಟಿಸಿದ ಮಲ್ಲಿಕಾರ್ಜುನ ದೇವರ ದೇವಾಲಯದ ಧರ್ಮಕ್ಕೆ ಬರೆಸಿಕೊಟ್ಟ ಎತ್ತಿನ ಮಾನ್ಯದ ಶಾಸನ ಕ್ರಮವೆಂತೆಂದರೆ ದೇವಾಲಯದ ಧರ್ಮಕ್ಕೆ ಆರೆತ್ತಿನ ಮಾನ್ಯ ಶಿವಾರ್ಪಿತವಾಗಿ ಬಿಟ್ಟದೇವೆ"[೧೫೬] ಎಂದು ಕ್ರಿ.ಶ.೧೬೭೪ರ ಶಾಸನ ದಾಖಲಿಸುತ್ತದೆ. ಗೋವೆಯ ಪರ್ತಗಾಳಿ ಮಠದಲ್ಲಿರುವ ಕ್ರಿ.ಶ.೧೬೭೪ರ ತಾಮ್ರಶಾಸನವು ಮುಗುವಿನ ಸೀಮೆ ಗಂಗುವಳಿಯಲು ನಾರಾಯಣ ಮಲ್ಲೆನು ಕಟ್ಟಿಸಿದ ವೆಂಕಟೇಶ್ವರ ದೇವರ ದೇವತಾ ವೆಚ್ಚಕ್ಕೆ ಬಿಟ್ಟ ದಾನದ ವಿವರವನ್ನು ದಾಖಲಿಸದೆ. ಚಿಕ್ಕಮಗಳೂರು ಕಿಗ್ಗದ ಶೃಂಗೇಶ್ವರ ದೇವಸ್ಥಾನದ ಉತ್ಸವ ವಿಗ್ರಹದಲ್ಲಿನ ಪೀಠದಲ್ಲಿರುವ ಕ್ರಿ.ಶ.೧೬೭೮ರ ಶಾಸನವು "ಚೆಂನಮ್ಮಾಜಿಯವರು ಸುಖ ಸಂತೋಷದಿಂದ ರಾಜ್ಯವಾಳುತ್ತಿರುವಾಗ ಪ್ರಧಾನಿ ಗುರುಬಸವಪ್ಪ ದೇವರು ಮಾಡಿಸಿ ಕಿಗ್ಗದ ಶೃಂಗೇಶ್ವರ ಸ್ವಾಮಿಗೆ ಸಮರ್ಪಿಸಿದ ಸೇವೆ ಮಂಗಳ ಮಹಾಶ್ರೀ"[೧೫೭] ಎಂಬ ವಿವರವನ್ನು ದಾಖಲಿಸಿದೆ.

ಸಾಮಾನ್ಯವರ್ಗದ ಜನರೂ ಕೂಡಾ ದೇವಾಲಯ ನಿರ್ಮಾಣ ಮಾಡಿದ ದಾಖಲೆಗಳು ದೊರೆಯುತ್ತವೆ. ದಕ್ಷಿಣ ಕನ್ನಡ ಕೋಡ್ಲಾದಿ ಕ್ರಿ.ಶ.೧೬೮೧ರ ತಾಮ್ರಶಾಸನವು "ಕಡಲಿ ಸೀಮೆಯ ಭಾಂಡದ ವೇಣುನದಿ ತೀರದಲ್ಲೂ ಬುಸನಿ ಕೃಷ್ಣೆಯನು ಪ್ರತಿಷ್ಠೆಯ ಮಾಡಿದ ತ್ರಿಯಂಬಕೇಶ್ವರ ದೇವರ ದೇವತಾ ವೆಚ್ಚ ಸತ್ರ ಮುಂತ್ತಾದ್ದಕ್ಕೆ... ಚಂನಂಮ್ಮಾಜಿಯವರು ಕೊಟ್ಟ ಧರ್ಮಶಾಸನದ ಕ್ರಮ"[೧೫೮] ಎಂಬ ವಿವರವಿದೆ. ಶಿವಮೊಗ್ಗ ಜಿಲ್ಲೆಯ ಸೊರಬ ವೀರಭದ್ರ ದೇವಾಲಯದ ಬಳಿ ನೆಟ್ಟ ಕಲ್ಲ ಮೇಲಿನ ಶಾಸನದ ಕಾಲ ಕ್ರಿ.ಶ.೧೬೮೨. ಈ ದೇವಾಲಯಕ್ಕೆ ರಾಣಿ ಚಂನಂಮಾಜಿಯವರು "ಆಲದಲು ಬೆಟ್ಟೂರ ಸೀಮೆ ಹಿರೇಕಸವೆ ಗ್ರಾಮದಿಂದ ಗ ೬ ಆರು ವರಹಾನ ಭೂಮಿಯನು ಯೀ ಗ್ರಾಮದ ವೀರಭದ್ರದೇವರಿಗೆ ವರ ವೆಚ್ಚಕ್ಕೆ ಶಿವಾರ್ಪಿತವಾಗಿ ಬಿಟ್ಟು"[೧೫೯] ಎಂಬ ವಿವರವಿದೆ. ಶಿವಮೊಗ್ಗೆಯ ಗಾಜನೂರಿನ ಪಟೇಲ ಚನ್ನಪ್ಪನ ಹಿತ್ತಲಲ್ಲಿ ನೆಟ್ಟ ಕಲ್ಲಿನಲ್ಲಿರುವ ಶಾಸನದ ಕಾಲದ ಉಲ್ಲೇಖವಿಲ್ಲ. ಗಾಜನೂರಿನ ದೇವಾಲಯಕ್ಕೆ ರಾಣಿ ಚೆನ್ನಮ್ಮಾಜಿಯವರು ಬಿಟ್ಟ ದಾನದ ಉಲ್ಲೇಖವಿದೆ. ಚಿಕ್ಕಮಗಳೂರಿನ ಕುಡುನೆಲ್ಲಿ ಕ್ರಿ.ಶ.೧೬೯೯ರ ಶಾಸನವು ರಾಣಿಯು ಗಂಗಾಧರೇಶ್ವರ ದೇವಾಲಯಕ್ಕೆ ಬಿಟ್ಟ ದತ್ತಿ ವಿವರಿಸಿದೆ.

ಕೆಳದಿ ಮತ್ತೊಬ್ಬ ಸಮರ್ಥ ರಾಣಿ ವೀರಮ್ಮಾಜಿ ಕೊಲ್ಲೂರು ಮೂಕಾಂಬಿಕೆ ದೇವಾಲಯಕ್ಕೆ ದತ್ತಿ ನೀಡುವುದಲ್ಲದೆ, ದೇವಿಗೆ ಎರಡು ಕಂಚಿನ ವಿಗ್ರಹಗಳನ್ನು ಮಾಡಿಸಿಕೊಟ್ಟಳು.

ಸೋದೆ ಅರಸ ಇಮ್ಮಡಿ ಅರಸಪ್ಪೊಡೆಯರು ಕ್ರಿ.ಶ.೧೫೭೫ರಲ್ಲಿ ನರಸಿಂಹದೇವರಿಗೆ ಗ್ರಾಮವೊಂದನ್ನು ದತ್ತಿ ಬಿಟ್ಟನು. "ಬನವಶಿ ಸ್ಥಳದ ಕೈಫಿಯತ್ತು-೩ರಲ್ಲಿ ಸ್ವಾದಿ ಅರಸರು

ಬನವಾಸಿ ಮಧುಕೇಶ್ವರ ದೇವರಿಗೆ ತೋರಿಸಿದ ಭಕ್ತಿ ವಿಶೇಷತೆಗಳನ್ನು ದಾಖಲಿಸಿದ್ದಾರೆ."[೧೬೦] ಇಮ್ಮಡಿ ಅರಸಪ್ಪನಾಯಕರ ಕಾಲಕ್ಕೆ ೧೬೯೮ರಲ್ಲಿ ಮಧುಕೇಶ್ವರ ದೇವರಿಗಾಗಿ ಒಂದೂವರೆ ಅಂಕಣದ ಮಂಟಪ ಕಟ್ಟಿಸಿ, ಅಲ್ಲಿ ನಂದಿಯನ್ನು ಪ್ರತಿಷ್ಠಾಪಿಸಿದರಲ್ಲದೇ ಧ್ವಜಸ್ತಂಭವನ್ನು ನಿರ್ಮಿಸಿದರು. ಕ್ರಿ.ಶ.೧೬೨೪ರಲ್ಲಿ ರಘುನಾಥರಾಯರು ಮಧುಕೇಶ್ವರ ದೇವರಿಗೆ ಕಲ್ಲುಮಂಟಪವನ್ನು ಕಟ್ಟಿಸಿದರು. ಸದಾಶಿವರಾಯ ಅಮ್ಮನವರ ದೇವಾಲಯವನ್ನು ನಿರ್ಮಿಸಿದರು.

ಸೋದೆ ಅರಸನ ಮಗಳಾದ ಮಲ್ಲಮ್ಮ ಬೆಳವಡಿ ಪಾರ್ವತಿ ಅಮ್ಮನವರ ದೇವಸ್ಥಾನಕ್ಕೆ ಮಂಟಪವನ್ನು ಕಟ್ಟಿಸಿದಳು. ಅಲ್ಲದೆ ವೀರಭದ್ರದೇವರ ಪೂಜೆಗಾಗಿ ವೇದಮೂರ್ತಿ ಶ್ರೀಪಾದಭಟ್ಟ ಜೋಶಿಯವರಿಗೆ ಗುಡಿಕಟ್ಟಿ ಗ್ರಾಮದ ಒಂದು ಮಾರು ಹೊಲವನ್ನು ದಾನಪತ್ರ ಮಾಡಿಕೊಟ್ಟಳು. ಮಗ ನಾಗಭೂಷಣನ ಮದುವೆಯನ್ನು ಸೊಗಲ ಕ್ಷೇತ್ರದಲ್ಲಿ ನೆರವೇರಿಸಿ, ಶ್ರೀ ಪಾರ್ವತಿ-ಪರಮೇಶ್ವರರ ವಿವಾಹ ಮಂಟಪ ಕಟ್ಟಿಸಿದಳು ಮತ್ತು ದೇವರ ಪೂಜಾ ವಿನಿಯೋಗಕ್ಕೆ ಕೆಲವು ಭೂಮಿ ಉಂಬಳಿ ಹಾಕಿಕೊಟ್ಟಳು.

ಬಿಳಗಿಯನ್ನು ಕ್ರಿ.ಶ.೧೫೭೦ರಲ್ಲಿ ಆಳುತ್ತಿದ್ದ ವೀರಪ್ಪೊಡೆಯನ ರಾಣಿ ವೀರಾಂಬಿಕೆ ಸಂಪೂರ್ಣ ಶಿಲಾಮಯವಾದ ವಿರೂಪಾಕ್ಷ ದೇವಾಲಯ ಕಟ್ಟಿಸಿ, ಗೋಪುರ, ಪ್ರಾಕಾರ ಕಟ್ಟಿಸಿ, ಶಾಸನ ಹಾಕಿಸಿದಳು. ಕ್ರಿ.ಶ.೧೫೮೧ರಲ್ಲಿ ಬಿಳಗಿಯನ್ನು ಆಳುತ್ತಿದ್ದ ಘಂಟೇಂದ್ರ ಬಿಳಗಿಯಲ್ಲಿ ರತ್ನತ್ರಯ ಬಸದಿ ಕಟ್ಟಿಸಿದನು. ಅಲ್ಲದೆ ಇಟಗಿಯ ರಾಮೇಶ್ವರ ದೇವಾಲಯ ನಿರ್ಮಾಣ ಗೊಳಿಸಿದನು."

ಬಿಳಗಿಯ ಜಯಾಂಬೆಯು ತನ್ನ ಮಗ ಸಿದ್ಧಪ್ಪನ ಸ್ಮರಣಾರ್ಥ ಸಿದ್ಧಾಪುರದಲ್ಲಿ ಸಿದ್ಧಿ ವಿನಾಯಕ ದೇವಾಲಯ ಕಟ್ಟಿಸಿದಳು. ಕ್ರಿ.ಶ.೧೭೭೦ರಲ್ಲಿ ಸೋಮಶೇಖರನು ಗಂಗಾಧರೇಶ್ವರ ದೇಗುಲಕ್ಕೆ ಒಂದು ಗ್ರಾಮ ದಾನ ಬಿಟ್ಟನು.

ಕಳಲೆಯ ಅರಸ ನಂಜರಾಜ ಬೆಟ್ಟದ ಪುರದ ಮಲ್ಲಿಕಾರ್ಜುನ ದೇವಾಲಯದ ತಾಂಡವೇಶ್ವರ ಮತ್ತು ಚಂಡಿಕಾಂಬಿಕಾ ವಿಗ್ರಹಗಳ ಪಾದಪೀಠದಲ್ಲಿ ಇದು ನಂಜರಾಜನ ಸೇವೆ ಎಂಬ ಉಲ್ಲೇಖವಿದೆ. ಕಳಲೆ ಲಕ್ಷ್ಮೀಕಾಂತ ದೇವಾಲಯಕ್ಕೆ ಕಳಲೆಯ ದಳವಾಯಿ ಬಸವರಾಜಯ್ಯನವರ ಮಗಳು ದಾನದತ್ತಿ ನೀಡಿದಳೆಂದು, ಆಕೆಯ ಹೆಸರಿನ ಉಲ್ಲೇಖವಿಲ್ಲ. ಕಳಲೆಯ ಲಕ್ಷ್ಮೀಕಾಂತ ದೇವಸ್ಥಾನದಲ್ಲಿರುವ ಬೆಳ್ಳಿತಟ್ಟೆಯ ಮೇಲೆ ಮಹಾಮಾತೃ ಶ್ರೀ ಲಕ್ಷ್ಮಮ್ಮಣ್ಣಿಯವರ ಸೇವಾರ್ಥ ಎಂದು ಕೆತ್ತಲ್ಪಟ್ಟಿದೆ.

ಸಿರಸಂಗಿಯ ರಾಣಿ ಚೆನ್ನಾಂಬೆ ವಿನಾಯಕ, ಈಶ್ವರ, ಕಾಳಿಕಾಂಬಾ ದೇವಾಲಯಕ್ಕೆ ಉಂಬಳಿ ದಾನ ದತ್ತಿ ನೀಡಿದಳು. ಅಲ್ಲದೆ ದೇವದೇವತೆಗಳ ಜಾತ್ರಾ ಉತ್ಸವಕ್ಕೆ ಸಹಾಯಧನ ನೀಡಿದಳು.

ಗೆಜ್ಜಲಗಟ್ಟೆ ರಾಣಿ ಲಕ್ಷ್ಮೀದೇವಿ ಕೊಳ್ಳದ ಅಮರೇಶ್ವರ ದೇವಸ್ಥಾನಕ್ಕೆ ೨೦೦ ಎಕರೆ ಭೂಮಿ ನೀಡಿ ದೈವಭಕ್ತಿಯನ್ನು ಮೆರೆದಳು. ಜವಳಗೆರೆ ರಾಣಿ ಉಮನಾಬಾಯಿ ಕೊಳ್ಳದ ಅಮರೇಶ್ವರನಿಗೆ ನಡೆದುಕೊಳ್ಳುತ್ತಿದ್ದಳು. ಹಂಪೆ ವಿರೂಪಾಕ್ಷ, ಅಂಬಾದೇವಿ ದೇವಾಲಯಗಳಿಗೆ ದತ್ತಿ ನೀಡಿದಳು. ಮಾನ್ವಿ ರಾಣಿ ಜಡೆಯಮ್ಮ ಮಾನ್ವಿ ಮಲ್ಲಿಕಾರ್ಜುನ ಸ್ವಾಮಿಯ ಪರಮ ಭಕ್ತೆಯಾಗಿದ್ದಳು.

ಸಿಂಧ ಅರಸ ೨ನೇ ಸೋಮೇಶ್ವರನ "ರಾಣಿ ಗಂಗಮಹಾದೇವಿ ವೀರ ಸೋಮೇಶ್ವರ ಮತ್ತು ಗಂಗಾಧರೇಶ್ವರ ಎಂಬ ೨ ಶಿವದೇವಾಲಯಗಳನ್ನು ಕಟ್ಟಿಸಿ, ಅವುಗಳ ಪೂಜಾದಿ ಕಾರ್ಯಗಳಿಗೆ 'ಕೆರೆಕರ್ಮ' ಎಂಬ ಊರನ್ನು ದಾನವಾಗಿ ಬಿಟ್ಟಳು."[೯೬೧]

ಹಾಲೇರಿ ವೀರರಾಜೇಂದ್ರನು ತನ್ನ ಹಿರಿಮಗಳು ಹಾಗೂ ಅಳಿಯ ಬಸವಲಿಂಗರಾಜರ ಹೆಸರಿನಲ್ಲಿ ತಲಕಾವೇರಿ ಮತ್ತು ಭಾಗಮಂಡಲದ ದೇವಸ್ಥಾನಗಳಲ್ಲಿ ನಂದಾದೀಪವನ್ನು ಆಚಂದ್ರಾರ್ಕವಾಗಿ ಉರಿಯುವಂತೆ ವ್ಯವಸ್ಥೆ ಮಾಡಿದನು. ಹೀಗೆ ರಾಣಿಯರ ಉದಾರವಾದ ಧಾರ್ಮಿಕ ಪ್ರವೃತ್ತಿಯನ್ನು ದಾಖಲಿಸಬಹುದು.

### ೪.೪. ಸಾಮಾಜಿಕ ಅಧ್ಯಯನ

ಪರಸ್ಪರ ಸಂಬಂಧ ಹೊಂದಿರುವ ಒಂದು ವ್ಯವಸ್ಥಿತ ಸಮೂಹವನ್ನು ಸಮಾಜ ಎನ್ನುತ್ತೇವೆ. ಸಾಮಾಜಿಕ ವ್ಯವಸ್ಥೆಯು ಗತಿಶೀಲವಾದುದು. ಸಾಮಾಜಿಕ ಅಧ್ಯಯನವೆಂಬುದು ಸಮಾಜದ ದ್ವಂದ್ವ, ವೈರುಧ್ಯ, ಸಂಕೀರ್ಣತೆಗಳೆಲ್ಲವನ್ನು ಪ್ರತಿಧ್ವನಿಸುವ ಧ್ವನಿ. ನಮ್ಮ ಸಾಮಾಜಿಕ ಏಣಿ ಶ್ರೇಣಿಯಲ್ಲಿ ವರ್ಗ, ಜಾತಿ, ವರ್ಣಗಳು ಕಂಡುಬರುತ್ತವೆ. ಧರ್ಮಶಾಸ್ತ್ರಗಳ ಪ್ರಕಾರ ವರ್ಣಗಳು ನಾಲ್ಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳೇ ಕಾಲಾ ನಂತರ ನಾಲ್ಕು ವರ್ಗಗಳಾಗಿ, ಜಾತಿಗಳಾಗಿ ಪರಿವರ್ತಿತವಾದುದನ್ನು ಗಮನಿಸಬಹುದು. ವರ್ಣ, ವರ್ಗ, ಜಾತಿಗಳ ಬಗ್ಗೆ ವಡ್ಡಾರಾಧನೆಯಲ್ಲೂ ಉಲ್ಲೇಖವಿದೆ. ಬ್ರಾಹ್ಮಣರು ಪುರೋಹಿತರೆಂದೂ, ಇವರು ಉನ್ನತ ವರ್ಣಕ್ಕೆ ಸೇರಿದವರಾದರು. ಅರಸ, ರಾಣಿ, ಸಾಮಂತರು, ಮಾಂಡಲಿಕರು ಕ್ಷತ್ರಿಯರೆಂದೂ, ಇವರು ಮಿಲಿಟರಿ ವರ್ಗ ಶ್ರೇಣಿ ಅಂದರೆ ರಾಜ್ಯ ರಕ್ಷಕ ವೃತ್ತಿಯವರಾಗಿದ್ದರು. ಶ್ರೇಷ್ಠಿ, ಶೆಟ್ಟಿ ಮತ್ತು ಪುರದ ಒಕ್ಕಲು ಮಕ್ಕಳನ್ನು ಶೂದ್ರರೆಂದು ಪರಿಗಣಿಸಿದ್ದರು. ಇವರು ಪ್ರಮುಖವಾಗಿ ವ್ಯಾಪಾರಿ ವೃತ್ತಿಯವರಾಗಿದ್ದರು. ಹೊಲೆಯ, ಮಾದಿಗರನ್ನು ಶೂದ್ರರೆಂದೂ ಕರೆಯುತ್ತಿದ್ದರು. ಇವರು ಸಾಮಾಜಿಕ ಏಣಿ ಶ್ರೇಣಿಯಲ್ಲಿ ಅತ್ಯಂತ ಕೆಳಸ್ತರದಲ್ಲಿದ್ದರು.

ಸಂಸ್ಥಾನಿಕರ ಸಾಮಾಜಿಕ ವ್ಯವಸ್ಥೆಯನ್ನು ಪ್ರಭುವರ್ಗ ಮತ್ತು ಶ್ರಮಿಕವರ್ಗವೆಂದು ಎರಡು ರೀತಿಯಾಗಿ ವಿಂಗಡಿಸಬಹುದು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಪ್ರಭುವರ್ಗವನ್ನು ಪ್ರತಿನಿಧಿಸುವರು.

ಸಮಾಜ ವ್ಯವಸ್ಥೆಯಲ್ಲಿ ಉನ್ನತ ಸ್ತರದಲ್ಲಿರುವ ಬ್ರಾಹ್ಮಣರು ಧರ್ಮ ಮತ್ತು ರಾಜಧರ್ಮ ಎರಡನ್ನು ನಿಯಂತ್ರಿಸುತ್ತಿದ್ದರು. ಅಲ್ಲದೆ ಯೋಗ್ಯ ಮಾರ್ಗದರ್ಶನ ನೀಡುತ್ತಿದ್ದರು.

ವರ್ಣಾಶ್ರಮದಲ್ಲಿ ಪ್ರಥಮ ಸ್ಥಾನ ಪಡೆದ ಬ್ರಾಹ್ಮಣ ಜಾತಿಯೇ ಶ್ರೇಷ್ಠವಾಗಿದ್ದಿತು. ಇವರು ಅಗ್ರಹಾರ, ಬ್ರಹ್ಮಪುರಿ ಮತ್ತು ಘಟಿಕಾಸ್ಥಾನಗಳಲ್ಲಿ ವಾಸಿಸುತ್ತಿದ್ದರು. "ಕೆಳದಿ ಸಂಸ್ಥಾನದ ರಾಣಿ ಚೆನ್ನಮ್ಮಾಜಿಯು ತನ್ನ ಪತಿ ಸೋಮಶೇಖರ ನಾಯಕನ ಹೆಸರಿನಲ್ಲಿ 'ಸೋಮಶೇಖರ ಪುರ' ಎಂಬ ಅಗ್ರಹಾರವನ್ನು ನಿರ್ಮಿಸಿ ಶೋತ್ರೀಯ ಬ್ರಾಹ್ಮಣರಿಗೆ ಧಾರೆಯೆರೆದಳು."[೧೬೨] ಅಲ್ಲದೆ ಕೆಳದಿ ಸದಾಶಿವನಾಯಕ ಕುಶಾವತಿ ತೀರದಲ್ಲಿ 'ಸದಾಶಿವಪುರ' ಎಂಬ ಅಗ್ರಹಾರ ಕಟ್ಟಿಸಿ ಬ್ರಾಹ್ಮಣರಿಗೆ ದಾನ ನೀಡಿದನು. ಬಿಳಗಿ ಸಂಸ್ಥಾನದ ೨ನೇ ಘಂಟೇಂದ್ರನ ರಾಣಿ ವಿಘ್ನೇಶ್ವರ ದೇವಾಲಯ ನಿರ್ಮಿಸಿದಳು. ಜಟ್ಟೆಮ್ಮ ರಾಣಿ ಬ್ರಾಹ್ಮಣರಿಗೆ ದಾನ ನೀಡಿದಳು. ಅಲ್ಲಪ್ಪಗೌಡ ಸರದೇಸಾಯಿ ಕಾಲದಲ್ಲಿ ಕಿತ್ತೂರು ಸಂಸ್ಥಾನದ ದೊರೆಗಳ ಕಾಲದ ಪೂರ್ವದಲ್ಲಿಯೇ ದೇಗಾಂವ ಅಗ್ರಹಾರವಾಗಿದ್ದು, "ಮಹಾಜನರ ಉಲ್ಲೇಖವು ಕ್ರಿ.ಶ.೧೧೮೮ರ ಗೋವೆಯ ಕದಂಬರ ಶಾಸನದಲ್ಲಿ ಇದೆ."[೧೬೩] ಸಿರಸಂಗಿ ಸಂಸ್ಥಾನದ ಆಡಳಿತದಲ್ಲಿ ನಿಪುಣ ಹಾಗೂ ಕುಶಲರಾದ ಕುಲಕರ್ಣಿಗಳಿದ್ದರು. ಚೆನ್ನವ್ವ ದೇಸಾಯಿಣಿಯ ಕಾಲದಲ್ಲಿ ಕುಲಕರ್ಣಿ ವೆಂಕೋಬರಾಯ ಆಡಳಿತ ನಿರ್ವಹಿಸುತ್ತಿದ್ದನು.

### ೪.೪.೧. ಶ್ರಮಿಕ ವರ್ಗ

ಶ್ರಮಿಕ ವರ್ಗವೆಂದರೆ ದುಡಿವ ವರ್ಗ. ಕುಶಲಕರ್ಮಿಗಳು ಎಂದರ್ಥ. ಇವರು ವಿವಿಧ ವೃತ್ತಿಗಳನ್ನು ಆಶ್ರಯಿಸಿದವರು. ಅಕ್ಕಸಾಲಿ, ಕಂಚಗಾರ, ಕಮ್ಮಾರ, ಕಲ್ಲುಕುಟಿಗ ಮತ್ತು ಬಡಗಿಗಳನ್ನು ಪಂಚಾಳರೆಂದು ಕರೆಯುವರು. ಇವರನ್ನು ವಿಶ್ವಕರ್ಮರೆಂತಲೂ ಕರೆವರು. ವಿಶ್ವಕರ್ಮನ ಐದು ಮುಖದಿಂದ ಐದು ವಿವಿಧ ವೃತ್ತಿಗಳು ನಿರ್ಮಾಣಗೊಂಡವೆಂಬ ಪ್ರತೀತಿ ಇದೆ. ಇವರು ದೇವಾಲಯದ ಅಕ್ಕಪಕ್ಕದ ಬೀದಿಗಳಲ್ಲಿ ವಾಸಿಸುತ್ತಿದ್ದರು. ಅಕ್ಕಸಾಲಿಗರು ಸಿದ್ಧಗೊಳಿಸಿದ ಆಭರಣ ಗಳನ್ನು ಪೋರ್ಚುಗೀಸರು ಕೊಂಡು ವಿದೇಶಕ್ಕೆ ಸಾಗಿಸುತ್ತಿದ್ದರು."[೧೬೪] ಈ ವಿಶ್ವಕರ್ಮ ವೃತ್ತಿಗಳ ಜೊತೆಗೆ ಸ್ವಾದಿ ಸಂಸ್ಥಾನದಲ್ಲಿ "ಶಂಕವೃತ್ತಿ, ಸುಗ್ಗಿಯ ವೃತ್ತಿ, ಕಂಚಿನ ಕರಂಡದ ವೃತ್ತಿ, ಮೊಗವಾಡ ವೃತ್ತಿ, ಬಸವಗಾರ ವೃತ್ತಿ, ಕಣೌಲಿಯ ವೃತ್ತಿ ಪ್ರಚಲಿತವಿದ್ದವು."[೧೬೫] ಚಿನ್ನದ ಕೆಲಸ ಮಾಡುವ ಅಕ್ಕಸಾಲಿಗರು ಆಭರಣ ತಯಾರಿಸುವುದಲ್ಲದೆ ಅಪರೂಪವಾಗಿ ತಾಮ್ರ ಶಾಸನಗಳನ್ನು ಕೆತ್ತುತ್ತಿದ್ದರು. ಅಲ್ಲದೆ ಸರ್ಕಾರದ ಪರವಾನಿಗೆಯಿಂದ ನಾಣ್ಯಗಳನ್ನು ಟಂಕಿಸುತ್ತಿದ್ದರು. ನಾಣ್ಯ ಟಂಕಿಸುವ ಸ್ಥಳವನ್ನು 'ಕಮ್ಮಟ', ಅಚ್ಚಿನ ಟಂಕಶಾಲೆ ಎನ್ನುತ್ತಿದ್ದರು.

ಕೆಳದಿ ಅರಸರ ತಾಮ್ರಶಾಸನ, ಸೋದೆ ಅರಸರ ಕನ್ನಡ ಲಿಪಿಯ ೧೩೫೪ರ ಮಂಜುಗಣಿ ತಾಮ್ರಶಾಸನ, ಬಿಳಗಿ ಅರಸರ ಮೂಡಬಿದಿರೆ ಶಾಸನ, "ತೀರ್ಥಹಳ್ಳಿ ತಾಲ್ಲೂಕಿನ ಕವಲೇದುರ್ಗದ

ತಾಮ್ರಶಾಸನ[೧೧೬೬] ಇತ್ಯಾದಿ ಅಕ್ಕಸಾಲಿಗರ ನಿರ್ಮಿತಿಗಳಾಗಿವೆ. ರಾಜರು ಇವರಿಗೆ ವಾರ್ಷಿಕ ವೇತನ ಕೊಡುತ್ತಿದ್ದರು.

ತಾಮ್ರ ಮತ್ತು ಕಂಚಿನ ಉಪಕರಣಗಳ ಉಲ್ಲೇಖವನ್ನು ಹರಪ್ಪ ಮೆಹೆಂಜೊದಾರೋ ಕಾಲದಿಂದಲೂ ಕಾಣುತ್ತೇವೆ. ಭರ್ಚಿ, ಶೂಲ, ಬಾಣ, ಚಾಕು, ಕತ್ತಿಯಂಥ ಉಪಕರಣಗಳಲ್ಲದೆ, ಉಳಿ, ಗರಗಸ, ತಾಮ್ರದ ಕಾವಲಿ, ಕೊಡಲಿ, ಬೆಳ್ಳಿ ಪಾತ್ರೆ ಇತ್ಯಾದಿಗಳ ಉಲ್ಲೇಖವನ್ನು ಕಾಣುತ್ತೇವೆ. ಕೆಳದಿ ಕಾಲದಲ್ಲಿ ಅನೇಕ ಲೋಹದ ಮೂರ್ತಿಗಳಿದ್ದವು. ಬಿದನೂರಿನ ನೀಲಕಂಠೇಶ್ವರ ದೇವಾಲಯದಲ್ಲಿ ಬೃಹದಾಕಾರದ ಘಂಟೆ ಹಾಲೆಂಡಿನ ಆಮ್‌ಸ್ಟರ್ ಡ್ಯಾಮ್‌ನಲ್ಲಿ ತಯಾರಿಸಿದ. ಇದು ಈಗ ಶಿವಮೊಗ್ಗ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿದೆ. ದೇವಾಲಯದ ಮೇಲಿನ ಶಿಖರಕ್ಕೆ ಚಿನ್ನದ ಲೇಪನವನ್ನು ಕಂಚುಗಾರರೇ ಮಾಡಿದ್ದರು.

ಕಬ್ಬಿಣದ ಕೆಲಸ ಮಾಡುವ ಕಮ್ಮಾರರು ಕೃಷಿ ಉಪಕರಣ, ಖಡ್ಗ, ಗುರಾಣಿ, ಕೊಡಲಿ ಇತ್ಯಾದಿ ತಯಾರಿಸುತ್ತಿದ್ದರು. ಕ್ರಿ.ಶ.೧೬ನೇ ಶತಮಾನದ ವಿದೇಶಿ ಪ್ರವಾಸಿ ಡ್ಯುರೆಟ್ ಬಾರ್‌ಬಸ್ ಕಬ್ಬಿಣದ ಅದಿರು, ಅದಿರಿನ ನಿಕ್ಷೇಪಗಳ ಬಗ್ಗೆ ವರದಿ ಮಾಡಿದ್ದಾನೆ. ಕವಲೇದುರ್ಗದಲ್ಲಿ ಕಮ್ಮಾರರಿಂದ ನಾಡಬಂದೂಕುಗಳು ತಯಾರಾಗುತ್ತಿದ್ದವು. ಮದ್ದುಗುಂಡುಗಳು ಭುವನಗಿರಿ ಹಾಗೂ ಬಿದನೂರಿನಲ್ಲಿ ತಯಾರಾಗುತ್ತಿದ್ದವು. ಈ ಕಾರಖಾನೆಗೆ 'ನಿಂಬಯ್ಯನ ಕಾರ್ಖಾನೆ' ಎಂಬ ಹೆಸರಿದ್ದು, ಈತ ಇಲ್ಲಿಯ ಮೇಲ್ವಿಚಾರಕನಾಗಿದ್ದ. ಸ್ವಾದಿ ಸಂಸ್ಥಾನಿಕರು ಯುದ್ಧ ಸಾಮಗ್ರಿ, ಮದ್ದುಗುಂಡುಗಳನ್ನು ಪೋರ್ಚುಗೀಸರಿಂದ ಆಮದು ಮಾಡಿಕೊಳ್ಳುತ್ತಿದ್ದರು. ತೋಪು, ತುಪಾಕಿಗಳನ್ನು ಸಂಸ್ಥಾನದ ಸ್ಥಳೀಯ ಲೋಹ ತಜ್ಞ(ಕಮ್ಮಾರ) ನಿರ್ಮಿಸುತ್ತಿದ್ದನು. ಸೋದೆಯ ಗದ್ದುಗೆ ಮಠದ ಎದುರಿನ ಸಮಾಧಿ ಕಟ್ಟಡದ ಮೇಲೆ ಶಿಲ್ಪವೊಂದು ಆಕರ್ಷಕವಾಗಿದೆ. ಕಿತ್ತೂರು ಸಂಸ್ಥಾನದಲ್ಲಿ ಹಿತ್ತಾಳೆ ತೋಪು, ಬಂದೂಕು, ಖಡ್ಗ, ಬಿಲ್ಲು, ಬಾಣ, ಭರ್ಚಿ, ಕೊಡಲಿ, ಚಾಪಕೊಡ್ಲಿಯಂಥ ಆಯುಧಗಳಿದ್ದವು. ಕೆಳದಿ ಅರಮನೆಯಲ್ಲಿ ಚಿನ್ನ, ಬೆಳ್ಳಿ, ತಗಡಿನ ಕಲಾಪೂರ್ಣ ತೂಗುಮಂಟಪಗಳು ಇದ್ದವು.

ಶಿಲ್ಪಿಗಳಾದ ಇವರು ದೇವಾಲಯ ನಿರ್ಮಾಣ ಮತ್ತು ಶಾಸನಗಳ ಕಂಡರಣೆ ಕೆಲಸ ಮಾಡುತ್ತಿದ್ದರು. ಇವರಿಗೆ ಶಿಲ್ಪಿ, ರೂವಾರಿ, ಸ್ಥಪತಿ, ಸೂತ್ರಧಾರಿ, ಕಲ್ಲುಕುಟಿಗ ಮತ್ತು ಓಜರೆಂದೂ ಕರೆವರು. ಇವರು ತಮ್ಮ ಕಾರ್ಯನಿರ್ವಹಣೆಗೆ ಯೋಗ್ಯ ಹಣ, ಧಾನ್ಯ ಭೂಮಿಯನ್ನು ದಾನವಾಗಿ ಪಡೆಯುತ್ತಿದ್ದರು. ಚಾಲುಕ್ಯ ರಾಣಿ ಲಕ್ಷ್ಮೀದೇವಿಯ ತಂದೆ ಕಂಕೋಜನಾಗಿದ್ದು, ಇವರು ಶಿಲ್ಪಾಚಾರಿಯಾಗಿದ್ದನು. ಸ್ವಾದಿ ಅರಸಪ್ಪನಾಯಕನ ಕಾಲದ 'ಪಂಚಲಿಂಗ' ಗ್ರಾಮದ ಶಾಸನವನ್ನು

'ತಿಪ್ಪೋಜ' ಕಂಡರಿಸಿದನು. 'ಮಲ್ಲೋಜ, ಮಾಣಿಯೋಜ ಇವರು ದೇವಾಲಯದ ವಾಸ್ತು ಶಿಲ್ಪಿಯಾಗಿದ್ದರೆಂದು ಶಾಸನ ಉಲ್ಲೇಖಿಸಿದೆ."[೧೬೭]

ವಿದೇಶಿ ಪ್ರವಾಸಿ ಪಿಯಾಟ್ರೊ ಡೆಲ್ಲೆವೆಲ್ಲಿಯು ಬಿದನೂರಿನ ಸಸ್ಯ ಸಂಪತ್ತನ್ನು ದಾಖಲಿಸಿದ್ದಾನೆ. ಸಮೃದ್ಧ ಸಸ್ಯವೈವಿಧ್ಯವನ್ನು ಪರಿಚಯಿಸುತ್ತಾ, ಗಂಧ, ತೇಗ, ದೇವದಾರ್, ಆಕ್ರೋಟ್ ಮುಂತಾದ ಮರಗಳಿಂದ ಬಾಗಿಲು, ಕಿಟಕಿ, ಮಂಚಗಳನ್ನು ತಯಾರಿಸುತ್ತಿದ್ದರು. ಕಟ್ಟಿಗೆ ಕೆಲಸ ಮಾಡುವ ಬಡಗಿಗಳು ರೈತರಿಗೆ ಬೇಕಾದ ಉಪಕರಣ, ದೇವಾಲಯಕ್ಕೆ ಬೇಕಾದ ರಥ, ಮೇಣೆಗಳನ್ನು ತಯಾರಿಸುತ್ತಿದ್ದರು. ಸೊರಬ ಮತ್ತು ಸಾಗರ ಶ್ರೀಗಂಧ ಕೆತ್ತನೆಗೆ ಪ್ರಮುಖ ಕೇಂದ್ರಗಳಾಗಿದ್ದವು. ಶ್ರೀಗಂಧ ಕೆತ್ತನೆಯಲ್ಲಿ ತೊಡಗಿದವರನ್ನು 'ಗುಡಿಗಾರರು' ಎಂದು ಕರೆವರು. ಕೆಳದಿ ಸಂಸ್ಥಾನದಲ್ಲಿ ಮರದ ರಥ, ಪಲ್ಲಕ್ಕಿ, ಮರದ ವಾಹನಗಳು ಇದ್ದವು. ಹೆಂಗಸರು ಬೆಂಡಿನಿಂದ ಹಾರ, ಬಾಸಿಂಗ, ಹೂವುಗಳನ್ನು ತಯಾರಿಸುತ್ತಿದ್ದರು. ಈ ಬೆಂಡು ಶಿವಮೊಗ್ಗ ಮತ್ತು ಶಿಕಾರಿಪುರ ಪ್ರದೇಶದ ಕೆರೆಗಳಲ್ಲಿ ಬೆಳೆಯುವ ಒಂದು ಜಾತಿಯ ಸಸ್ಯವಾಗಿತ್ತು. "ಕ್ರಿ.ಶ.೧೬ ಮತ್ತು ೧೭ನೇ ಶತಮಾನದಲ್ಲಿ ಕೆಳದಿ ನಾಯಕರ ಕಾಲದಲ್ಲಿ ಬೆಂಡಿನಿಂದ ದೇವಾಲಯದ ರಥಗಳು ಮತ್ತು ಅರಮನೆಯ ಗೋಡೆಯನ್ನು ಅಲಂಕರಿಸುತ್ತಿದ್ದರು."[೧೬೮] ದೇವಾಲಯಕ್ಕೆ ಸಂಬಂಧಿಸಿದ ಮರಗೆಲಸ ಮತ್ತು ಮುರಿದು ಹೋದ ಸಾಮಾನು ಸರಿಪಡಿಸುವ ಕಾರ್ಯ ಇವರದಾಗಿತ್ತು. ಇವರಿಗೂ ಆಯದ ಪದ್ಧತಿ ರೂಢಿಯಲ್ಲಿತ್ತು. ಬಡಗಿಗಳು ಅತ್ಯಾಕರ್ಷಕ ಮರದ ರಥಗಳಿಗೆ ಬಣ್ಣವನ್ನು ಬಳಸಿದ ತೈಲ ಚಿತ್ರವನ್ನು ಬರೆಯುತ್ತಿದ್ದರು. "ಕ್ರಿ.ಶ.೧೬೨೩ರಲ್ಲಿ ಕೆಳದಿಗೆ ಬಂದ ಇಟಲಿ ಪ್ರವಾಸಿ ಪಿಯಾಟ್ರೋ ಡೆಲ್ಲೆವೆಲ್ಲಿ ನಾಲ್ಕು ಚಕ್ರಗಳ ಬೃಹದಾಕಾರದ ರಥವನ್ನು ವರ್ಣಿಸಿದ್ದಾನೆ."[೧೬೯] ಸೋದೆಯ ಸಂಸ್ಥಾನಿಕರು ಉಳವಿಯ ಬಸವನ ಮೂಲರಥವನ್ನು ಮಾಡಿಸಿಕೊಟ್ಟು, ರಥೋತ್ಸವಕ್ಕೆ ದಾನ ನೀಡಿದರೆಂದು ಉಳವಿ ಚೆನ್ನಬಸವೇಶ್ವರ ವಾರ್ಧಿಕದಿಂದ ತಿಳಿಯುತ್ತದೆ."[೧೭೦] ಬಿಳಗಿ ಸಂಸ್ಥಾನದ ೩ನೇ ಸೋಮೇಶ್ವರನು ಸಿದ್ಧಾಪುರದ ಗಂಗಾಧರೇಶ್ವರ ದೇವಾಲಯಕ್ಕೆ ರಥ ನೀಡಿ ರಥೋತ್ಸವ ನಡೆಯಲು ದಾನ ನೀಡಿದನು. ಕಿತ್ತೂರು ಸಂಸ್ಥಾನದ ದೊರೆ ಮಲ್ಲಸರ್ಜನು ಮರಾಠರಿಂದ ಬಿಡುಗಡೆಗೊಂಡು ಮೇಣೆಯಲ್ಲಿ ಕಿತ್ತೂರಿಗೆ ಬಂದನು. ಸಂಗೊಳ್ಳಿಯ ಬಡಿಗನೊಬ್ಬ ಕಿತ್ತೂರಿನ ಆಸ್ಥಾನದ ಕವಿಯಾಗಿದ್ದನು.

ದಿನನಿತ್ಯದ ಅಗತ್ಯಗಳಲ್ಲಿ ಒಂದಾದ ಮಡಿಕೆ, ಕುಡಿಕೆಗಳನ್ನು ತಯಾರಿಸುವ ಕುಂಬಾರರು ಹಂಚು, ಹೂಜಿಗಳನ್ನು ತಯಾರಿಸುತ್ತಿದ್ದರು. ಕಿತ್ತೂರು ಸಂಸ್ಥಾನದಲ್ಲಿ ಒಲೆಗಳಿದ್ದು, ಗಡಿಗೆ, ಮಡಿಕೆಗಳಲ್ಲಿ ಅಡುಗೆ ಮಾಡುತ್ತಿದ್ದರು.

ಬಟ್ಟೆಗಳನ್ನು ನೇಯುವ ವೃತ್ತಿಯವರು ಇವರು. "ಸೌದಿ ಸಂಸ್ಥಾನದ ಮಾರುಕಟ್ಟೆ ಪ್ರದೇಶವಾದ ಕಾರವಾರದಿಂದ ಹತ್ತಿ ರಫ್ತು ನಡೆಯುತ್ತಿತ್ತು."[೧೭೧] ನೇಕಾರರು ಆಕರ್ಷಕ ಬಟ್ಟೆ ನೇಯುತ್ತಿದ್ದರು. ಇವರ "ಮಗ್ಗಗಳಿಗೆ 'ಮಗ್ಗದೆರೆ' ಎಂಬ ತೆರಿಗೆಯನ್ನು ಹಾಕಿದ್ದರೆಂಬ ಉಲ್ಲೇಖವಿದೆ."[೧೭೨]

ಗಾಣದಿಂದ ಎಣ್ಣೆ ತೆಗೆಯುವವರು ತೆಲ್ಲಿಗರು ಅಥವಾ ಗಾಣಿಗರು. ತೈಲ ಅಥವಾ ಎಣ್ಣೆ ದಿನನಿತ್ಯದ ಗೃಹೋಪಯೋಗಿ ಅಲ್ಲದೆ ದೇವಸ್ಥಾನದ ನಂದಾದೀಪಕ್ಕೆ ಎಣ್ಣೆ ಅವಶ್ಯಕ. ಕೆಳದಿ ರಾಣಿ ಚೆನ್ನಮ್ಮಾಜಿ ನಂದಾದೀಪ, ಧೂಪ, ದೀಪಕ್ಕಾಗಿ ದಾನ ನೀಡಿದ ಉಲ್ಲೇಖಗಳು ಸಿಗುತ್ತವೆ. ಸಿರಸಂಗಿ ಲಿಂಗರಾಜರು ಹೊಸಬಾಳ ಗ್ರಾಮದ ಜೋಗೇಶ್ವರಿ ದೇವಿಯ ನಂದಾದೀವಿಗೆಗೆ ಕಾಣಿಕೆ ಸಲ್ಲಿಸಿದ್ದರು. ಸೋದೆ ತಾಲ್ಲೂಕಿನ ಭಟ್ಕಳ ಮುಂತಾದ ಸ್ಥಳಗಳಿಂದ ದೀಪಾರಾಧನೆಗೆ ಹಣ ಸಂದಾಯವಾಗುತ್ತಿತ್ತು. ಬೀಳಗಿ ಸಂಸ್ಥಾನದ ನಾಲ್ವಡಿ ಘಂಟೇಂದ್ರನಿಂದ ಹನಗಿಜಿ ಬಯಲು ಮತ್ತು ಚಪುಗನಹಳ್ಳಿಯಲ್ಲಿ ನಂದಾದೀಪಕ್ಕೆ ದಾನ ನೀಡಲಾಗಿತ್ತು.

ಹೀಗೆ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿದ ಪಾಂಚಾಳರು ವಾರ್ಷಿಕ ಹಣವನ್ನು, ಶಾಶ್ವತ ದಾನ-ದತ್ತಿಗಳನ್ನು ಪಡೆಯುತ್ತಿದ್ದರು.

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವ ಶೂದ್ರರು ಅಂತ್ಯಜರೆನಿಸಿಕೊಂಡಿದ್ದರು. ಇವರು ಊರಿನ ಹೊರಗೆ ವಾಸಿಸುತ್ತಿದ್ದು, ಪ್ರತ್ಯೇಕ ಒಂದು ಓಣಿಯಲ್ಲಿರುತ್ತಿದ್ದರು. ಆ ಓಣಿಗೆ 'ಕೇರಿ' ಎನ್ನುವರು. ಊರಿನಲ್ಲಿ ಸತ್ತ ದನಗಳನ್ನು ಎತ್ತಿ ಹಾಕುವ, ದನಗಳ ಚರ್ಮದಿಂದ ಪಾದರಕ್ಷೆ ತಯಾರಿಸುವ ಕಾರ್ಯದಲ್ಲಿ ತೊಡಗಿದವರಿವರು. ರೈತ ಸಮೂಹಕ್ಕೆ ಚರ್ಮದ ವಸ್ತುಗಳನ್ನು ತಯಾರಿಸಿ ಕೊಡುತ್ತಿದ್ದರು. ಇವರ ಸ್ಥಿತಿ ಹೀನಾಯವಾಗಿತ್ತು. ಕೆಳದಿ ಸಂಸ್ಥಾನದಲ್ಲಿ ದಲಿತರನ್ನು ಸಂತೆಯಲ್ಲಿ ಮಾರಾಟ ಮಾಡುತ್ತಿದ್ದರು. ದಲಿತರು ತಮ್ಮ ಕೊನೆಯ ಉಸಿರಿರುವವರೆಗೂ ಒಡೆಯನಿಗೆ ಅಧೀನವಾಗಿ ಬಾಳುತ್ತಿದ್ದರು.

### ೪.೪.೨. ಸ್ತ್ರೀಯರ ಸ್ಥಾನಮಾನ

ಸಾಮಾಜಿಕ ವ್ಯವಸ್ಥೆಯಲ್ಲಿ ದ್ವಿತೀಯ ದರ್ಜೆಯಲ್ಲಿರುವ ಸ್ತ್ರೀ ಎಷ್ಟೇ ಸಮರ್ಥಳಾಗಿದ್ದರೂ ನಮ್ಮ ಸಮಾಜದಲ್ಲಿ ತಾತ್ವಿಕ ಭಿನ್ನತೆ ಹೋಗಿಲ್ಲವೆನ್ನಬಹುದು. 'ಗಂಡನಿದಿರೊಳ್ ಪೆಂಡತಿ ನುಡಿಯಲಾಗದು' ಎಂಬಂಥ ಆದರ್ಶಗಳನ್ನು ಸ್ತ್ರೀಯರ ಮುಂದಿಟ್ಟು ಸ್ತ್ರೀಯರ ಬದುಕು ಹೀಗೆ ಇರಬೇಕೆಂದು ನಿರ್ದೇಶನ ಮಾಡುವ, ಆದರ್ಶಕ್ಕೆ ಸ್ತ್ರೀಯರನ್ನು ಗಂಟುಹಾಕುವ ಕಾರ್ಯ ಇತಿಹಾಸದುದ್ದಕ್ಕೂ ಸಾಗಿ ಬಂದಿದೆ. ಪುರುಷಪ್ರಧಾನ ವ್ಯವಸ್ಥೆಯ ಅಡಿಯಲ್ಲಿ ಇದು ಸಹಜಕ್ರಿಯೆ. ಆದರೆ ಯಾವುದೇ ಒಂದು ಸಂಸ್ಕೃತಿಯ ಏಳು ಬೀಳಿಗೆ, ಆ ಸಮಾಜದಲ್ಲಿರುವ ಸ್ತ್ರೀಯರ

ಸ್ಥಾನಮಾನವೂ ಕಾರಣವಾಗುತ್ತದೆ. ಕಾಲದಿಂದ ಕಾಲಕ್ಕೆ ವಿಭಿನ್ನ ದೃಷ್ಟಿಕೋನಗಳಲ್ಲಿ ಇವರ ಬದುಕು ಹಾಯ್ದು ಬಂದಿದೆ. ವೇದಗಳ ಕಾಲದಲ್ಲಿ ಸ್ತ್ರೀಯರಿಗೆ ಪುರುಷ ಸಮಾನ ಸ್ಥಾನ-ಮಾನಗಳಿದ್ದವು. ಪ್ರತಿಯೊಂದು ಕಾರ್ಯದಲ್ಲಿ ಪುರುಷನ ಜೊತೆಗಾತಿಯಾಗಿದ್ದಳು. ಜ್ಞಾನ ಗಳಿಸುವಂಥವಳು, ತನ್ನ ಭಾವನೆಗಳನ್ನು ಅಭಿವ್ಯಕ್ತಿಸುವಂಥವಳಾಗಿದ್ದಳು. ಸ್ಮೃತಿಗಳ ಕಾಲದಲ್ಲಿ ಸ್ತ್ರೀ ಸ್ವಾತಂತ್ರಕ್ಕೆ ಕಡಿವಾಣ ಬಿದ್ದು, 'ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಎಂಬ ಮನುಸ್ಮೃತಿಯ ಮಾತು ರೆಕ್ಕೆ ಪುಕ್ಕ ಪಡೆದು ಬಲಿಯಿತು. ಹೀಗಾಗಿ ಸ್ತ್ರೀ ಗಂಡಸಿನ ಕೈಗೊಂಬೆಯಗಿ, ಆಸ್ತಿಯ ಒಂದು ಭಾಗವಾಗಿ ಮಾತ್ರ ನೆಲೆಸುವಂಥಾದಳು. ಮುಸ್ಲಿಮರ ಆಗಮನದಿಂದ ಸ್ತ್ರೀಯರ ಸ್ಥಾನಮಾನ ಇನ್ನು ಬಿಗಡಾಯಿಸಿತು. ಸ್ತ್ರೀಯರನ್ನು ಅಪಹರಿಸುವ, ಸ್ತ್ರೀಯರನ್ನು ಕೇವಲ ಭೋಗದ ವಸ್ತುವಾಗಿ ಕಾಣುವ ಭಾವನೆ ಬಂದಿತು. 'ಹೆಣ್ಣು, ಹೊನ್ನು, ಮಣ್ಣಿಗಾಗಿ' ಯುದ್ಧಗಳು ನಡೆದಿರುವುದು ತಿಳಿದ ವಿಷಯವೇ ಆಗಿದೆ. ಭಾರತದಲ್ಲಿ ಸಂಭವಿಸಿದ ಭಕ್ತಿ ಚಳುವಳಿಯು ಸಮಾಜದಲ್ಲಿ ಸಮಾನತೆ, ಪರಸ್ಪರ ಪ್ರೀತಿ, ಸಹಬಾಳ್ವೆಯ ಬೀಜ ಬಿತ್ತಿತು. ಇದರಿಂದಾಗಿ ರಾಜಪರಿವಾರದ ರಾಣಿಯರು, ಸಾಮಾನ್ಯ ಮಹಿಳೆಯರು ಸಮಾಜದಲ್ಲಿ ಪುರುಷ ಸಮಾನ ಸ್ಥಾನಮಾನ ಗಳಿಸಿದರು. ಹೊಸ ಸಂಸ್ಕೃತಿಯನ್ನು ಸೃಷ್ಟಿಸುವ, ನವ ಸಮಾಜವನ್ನು ಹುಟ್ಟು ಹಾಕುವ ನೆಲೆಗೆ ಇವರು ಏರಿದರು. ಈ ಹಿನ್ನೆಲೆಯಲ್ಲಿ ಒಂದು ವ್ಯವಸ್ಥಿತ ಸಮಾಜ ನಿರ್ಮಾಣಕ್ಕೆ ರಾಣಿಯರೂ ಕಾರಣರಾದರು.

**ಕುಟುಂಬ:** ಸಮಾಜದ ಪ್ರಮುಖ ಅಂಗ ಕುಟುಂಬವಾದರೆ, ಒಂದು ಸುಂದರ ಕುಟುಂಬದ ಅಧಿದೇವತೆ ಮಹಿಳೆ ಎಂದರೆ ತಪ್ಪಾಗದು. ಕುಟುಂಬ ಪಿತೃಪ್ರಧಾನವಾಗಿದ್ದರೂ, ತಂದೆಯೇ ಮನೆಯ ಯಜಮಾನನಾಗಿ ವರ್ತಿಸುತ್ತಿದ್ದರೂ 'ತಾಯಿಯ' ಸ್ಥಾನ ವಿಶೇಷವಾದುದು. 'ತಂದೆ ಸತ್ತು ತಾಯಿ ಉಳಿಯಬೇಕು' ಎಂಬ ಮಾತು ನಮ್ಮ ಸಮಾಜದಲ್ಲಿ ಪ್ರಚಲಿತವಿದೆ. ಕೆಳದಿ ಸೋಮಶೇಖರ ಅಸಮರ್ಥ ಅರಸನಾಗಿ ಅಸುನೀಗಿದಾಗ ಇಡೀ ರಾಜ್ಯವನ್ನು ಕಾಪಾಡುವ ಹೊಣೆಯ ಜೊತೆಗೆ ದತ್ತು ಮಗನನ್ನು ರಕ್ಷಿಸುವ, ಪೋಷಿಸುವ, ಪಾಲಿಸುವ ಜವಾಬ್ದಾರಿಗಳೆಲ್ಲವನ್ನು ಯಶಸ್ವಿಯಾಗಿ ಸಾಧಿಸಿದ ರಾಣಿ ಚೆನ್ನಮ್ಮಾಜಿ ಮಹಾಮಾತೆಯಾಗಿ ಮೆರೆದಳು. ಅಲ್ಲದೆ ಕಿತ್ತೂರಿನ ಫಕೀರ ರುದ್ರಸರ್ಜನಿಗೆ 'ನಿರಂಜನಿಯ' ಪ್ರೇಮ ಮುಖ್ಯವಾಗುತ್ತದೆಯೇ ಹೊರತಾಗಿ ರಾಜ್ಯವಲ್ಲ. ಇಂಥ ಸಂದಿಗ್ಧ ಸಮಯದಲ್ಲಿ ಕಿತ್ತೂರಿನ ಮೊದಲ ರಾಣಿ ಮಲ್ಲಮ್ಮ, ರಾಜನ ಸ್ಥಾನ ತುಂಬಿ, ಇಡೀ ರಾಜ್ಯದ ಹೊಣೆ ಹೊತ್ತಳೆಂಬುದು ಗಮನಾರ್ಹವಾದುದು. ಇಡೀ ಸಮಾಜವೇ ಒಂದು ಕುಟುಂಬದಂತೆ ಇದ್ದು, ಇಲ್ಲಿ ರಾಜನೇ ಮನೆಯ ಯಜಮಾನನಾಗಿ, ರಾಣಿ ಕುಟುಂಬದ ನಿರ್ವಾಹಕಳಾಗಿ [illegible] ಮನೆ ಯಜಮಾನಿಯಾಗಿಯೂ ಮೆರೆದಿರುವಳು. ಸ್ತ್ರೀ ಸಂಬಂಧಿಸಿದ ಎರಡು ಕುಟುಂಬಗಳೆಂದರೆ ಅಪ್ಪನ ಮನೆ ಹಾಗೂ ಗಂಡನ ಮನೆ. ಈ ಎರಡೂ ಕುಟುಂಬಗಳಲ್ಲಿಯೂ ಅವಿಭಕ್ತ ಕುಟುಂಬ ವ್ಯವಸ್ಥೆಯಿದ್ದು, ಗಂಡು ಮನೆಯ ಯಜಮಾನ. ಸ್ತ್ರೀ

ತವರಿನಲ್ಲಿ ಮಗಳಾಗಿ, ತಂಗಿಯಾಗಿ, ಅಕ್ಕನಾಗಿ, ಅತ್ತಿಗೆ, ನಾದಿನಿ, ತಾಯಿಯಾಗಿ ತನ್ನ ಜೀವಮಾನವನ್ನೆಲ್ಲ ಗಂಡನ ಮನೆಯಲ್ಲಿಯೇ ಕಳೆಯುತ್ತಾಳೆ. ತಾನು ಹುಟ್ಟಿದ ಮನೆಯಲ್ಲಿ ತನ್ನ ಜೀವಿತದ ಇಡಿಯ ಕಾಲವನ್ನು ಕಳೆಯುವ ಹಕ್ಕಿನಿಂದ ದೂರವಾಗುತ್ತಾಳೆ. ಹೆಣ್ಣು ಹುಟ್ಟಿದ ಕೂಡಲೇ 'ಪರರ ಮನೆಯ ಸಿರಿದೇವಿ'ಯಾಗುತ್ತಾಳೆ. ತವರುಮನೆಗೆ 'ಎರವಾ'ಗುತ್ತಾಳೆ.

**ವಿವಾಹ:** ಕುಟುಂಬದ ಭದ್ರತೆಗೆ ವಿವಾಹವೇ ತಳಹದಿ. ವಿವಾಹವೆಂಬುದು ಎರಡು ಮನಸ್ಸುಗಳ ಮಿಲನವಾಗಿದೆ. ಪ್ರಾಚೀನ ಕಾಲದಲ್ಲಿ ಬ್ರಹ್ಮ, ದೈವ, ಅರ್ಷ, ಪ್ರಜಾಪತ್ಯ, ಅಸುರ, ಗಂಧರ್ವ, ರಾಕ್ಷಸ, ಪೈಶಾಚಿಕ ಎಂಬ ಎಂಟು ಬಗೆಯ ಪದ್ಧತಿಗಳಿದ್ದವು. ಭಾರತದಲ್ಲಿ ಕೆಲವು ಪದ್ಧತಿಗಳು ಮಾತ್ರ ಆಚರಣೆಯಲ್ಲಿವೆ. ವಿವಾಹ ಪದ್ಧತಿಗಳಲ್ಲಿ ವರನಿಗೆ ಉಡುಗೊರೆ ಕೊಡುವ, ವಧುವಿಗೆ ಉಡುಗೊರೆ ಕೊಡುವ ಪದ್ಧತಿಗಳಿದ್ದು, ಇವಕ್ಕೆ 'ವರದಕ್ಷಿಣೆ','ವಧುದಕ್ಷಿಣೆ', ತೆರ ಇತ್ಯಾದಿಯಾಗಿ ಕರೆವರು. ಇಂದು ಪ್ರಚಲಿತವಿರುವ ಪದ್ಧತಿಯೆಂದರೆ ವರದಕ್ಷಿಣೆ. ಇದು ಇಂದು ಸಾಮಾಜಿಕ ಪಿಡುಗಾಗಿ ಪರಿಣಮಿಸಿದೆ. ಹಿಂದಿನ ಕಾಲದಲ್ಲಿ ಅರಸರು ತಮ್ಮ ಶತ್ರು ಅರಸರೊಂದಿಗೆ ಹಾಗೂ ಬಲಿಷ್ಠ ಅರಸರೊಂದಿಗೆ ವೈವಾಹಿಕ ಸಂಬಂಧವನ್ನೇರ್ಪಡಿಸುವ ಮೂಲಕ ತಮ್ಮ ರಾಜ್ಯವನ್ನು ಸುರಕ್ಷತೆಯಲ್ಲಿಡುತ್ತಿದ್ದರು. ಕಂಕೋಜ, ಮಸಣಿಕವ್ವೆಯ ಮಗಳಾದ ಲಕ್ಷ್ಮೀದೇವಿಯನ್ನು ಚಾಲುಕ್ಯ ಅರಸ ೬ನೇ ವಿಕ್ರಮಾದಿತ್ಯನಿಗೆ ಕೊಟ್ಟು ವಿವಾಹ ಮಾಡಲಾಯ್ತು. ಕೆಳದಿ ವೆಂಕಟಪ್ಪ ನಾಯಕನ ಮಗಳಾದ ಹಿರಿಯಮ್ಮನನ್ನು ಜಂಬೂರ ವಿರಪ ಒಡೆಯನಿಗೆ ಕೊಟ್ಟು ವಿವಾಹ ಮಾಡಲಾಯ್ತು. ಬೇಲೂರು ವೀರಭದ್ರನಾಯಕನ ಕುಮಾರಿಯಾದ ಬಂಗಾರಮ್ಮನ ವಿವಾಹ ಸಂದರ್ಭದಲ್ಲಿ ಜಾಗರದ ಸೀಮೆ, ಕೋಟೆಯನ್ನು ಬಳುವಳಿಯಾಗಿ ಕೊಟ್ಟನು. ದುರ್ಗದ ಪಟ್ಟಣಶೆಟ್ಟರ ಮಗಳಾದ ಲಿಂಗಮ್ಮಾಜಿ ಮತ್ತು ಸೂರಿರಾಯನ ಬಸಪ್ಪನ ತಂಗಿಯಾದ ಶಾಂತಮ್ಮಾಜಿಯನ್ನು, ಶಿವಪ್ಪನಾಯಕನಿಗೆ ಕೊಟ್ಟು ವಿವಾಹ ಮಾಡಲಾಯ್ತು. ಸೂರಿರಾಯನ ಕಲ್ಲಪ್ಪನ ಮಗಳಾದ ಬೊಮ್ಮಮ್ಮಾಜಿ ಮತ್ತು ಮೈದುನ ಕೆಂಚಣ್ಣನ ಮಗಳಾದ ಸಿದ್ಧಮ್ಮಾಜಿಯರನ್ನು ಭದ್ರಪ್ಪನಾಯಕನಿಗೆ ಕೊಟ್ಟು ವಿವಾಹ ಮಾಡಲಾಯ್ತು. ಬಾದಾಮಿ ಲಿಂಗಪ್ಪಶೆಟ್ಟರ ಮಗಳಾದ ಬಸವಲಿಂಗಮ್ಮಜಿಯನ್ನು ಸಿದ್ಧಪ್ಪಶೆಟ್ಟರ ಮಗಳಾದ ಚೆನ್ನಮ್ಮಾಜಿಯನ್ನು ಸೋಮಶೇಖರ ನಾಯಕನಿಗೆ ಕೊಟ್ಟು ವಿವಾಹ ಮಾಡಲಾಯ್ತು. ಹೆಬ್ಬೆ ಮಹಂತಯ್ಯನ ಕುಮಾರಿ ಚೆನ್ನಮ್ಮಾಜಿ ಹಾಗೂ ಚನ್ನವೀರಪ್ಪನ ಪುತ್ರಿ ಬಸವಮ್ಮಾಜಿಯರನ್ನು ಕೆಳದಿ ಬಸಪ್ಪನಾಯಕನಿಗೆ ಕೊಟ್ಟು ವಿವಾಹ ಮಾಡಲಾಯ್ತು. ವಿವಾಹ ಸಮಾರಂಭಗಳಿಗೆ ರಾಜ್ಯದ ಹಲವೆಡೆಯ ಅರಸರು, ಬಂಧು ಬಾಂಧವರೆಲ್ಲರೂ ಬರುತ್ತಿದ್ದರು. ಇಟಲಿ ಪ್ರವಾಸಿ ಕರೇರಿಯು ರಾಣಿ ಚೆನ್ನಮ್ಮಾಜಿಯು ಸಾಕು ಮಗಳಾದ 'ಮರಿಚೆನ್ನಮ್ಮಾಜಿಯ' ವಿವಾಹ ಸಂದರ್ಭಕ್ಕೆ ಆಗಮಿಸಿದ ಸೋದೆ ಸದಾಶಿವನಾಯಕನು ತಾನು ಕಳೆದುಕೊಂಡ ಹಲವು ಸೀಮೆಗಳನ್ನು ಮರಳಿ ಕೊಡಬೇಕೆಂದು ಕೇಳಲು, 'ದಯೆಯಿಂ

ಮುನ್ನಧೀನಂಗೈದ ಬನವಸೆ ಮುಂತಾದ ಸೀಮೆಗಳನ್ನಿತ್ತು"[೧೭೩] ಎಂದು ದಾಖಲಿಸಿದ್ದಾನೆ. ರೇವಣ ಒಡೆಯರ ಕುಮಾರಿ ಕೊಲ್ಲುರಮ್ಮಾಜಿಯನ್ನು ಕೆಳದಿ ವೀರಭದ್ರನಾಯಕನಿಗೆ ಕೊಟ್ಟು ವಿವಾಹ ಮಾಡಲಾಯ್ತು.

ಬೆಳವಡಿ ಸಂಸ್ಥಾನದಲ್ಲಿ ಸ್ತ್ರೀಯರಿಗೆ ತಮ್ಮ ಬಾಳಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿದ್ದಿತು. ಈ ಹಿನ್ನೆಲೆಯಲ್ಲಿ ರಾಣಿ ಮಲ್ಲಮ್ಮನ ಮದುವೆಗೆ 'ಸ್ವಯಂವರ'ವನ್ನೇರ್ಪಡಿಸಿದ್ದು ವಿಶೇಷ. 'ಸ್ವಯಂವರ'ವೆಂಬುದು ಪ್ರಾಚೀನ ವಿವಾಹ ಪದ್ಧತಿಗಳಲ್ಲಿ ಒಂದಾಗಿದೆ. ಅತೀ ಹೆಚ್ಚು ಹುಲಿಗಳನ್ನು ಕೊಂದ ವೀರನನ್ನು ವರಿಸಿದ ರಾಣಿಯ ವಿವಾಹ ವಿಜೃಂಭಣೆಯಿಂದ ಜರುಗಿತು. ನಾಡಿನ ವಿವಿಧೆಡೆಗಳಿಂದ ಪ್ರಮುಖರ ಆಗಮನವಾಗಿತ್ತು. ಕೆಳದಿ, ಮೈಸೂರು, ಆನೆಗೊಂದಿ ಮೊದಲಾದೆಡೆಯಿಂದ ರಾಜರೂ, ರಾಜಕುಮಾರರೂ, ರಾಜದಂಪತಿಗಳು ಆಗಮಿಸಿದರು. ಹತ್ತು ದಿನಗಳ ಕಾಲ ಜರುಗಿದ ಈ ವಿವಾಹ ಮಹೋತ್ಸವಕ್ಕೆ ಆಗಮಿಸಿದ ಪ್ರಮುಖರೆಲ್ಲರಿಗೂ ಅಮೂಲ್ಯ ವಸ್ತುಗಳನ್ನು ನೀಡಿ ಗೌರವಿಸಲಾಯ್ತು. ಇಂದು ವಿವಾಹವೆಂಬುದು ಒಂದೇ ದಿನದ ಉತ್ಸವವಾಗಿದೆ. ದೇಶೀಯ ರಾಜರುಗಳಲ್ಲದೆ, ಅಂಗ್ರೇಜಿ ವ್ಯಾಪಾರಿಗಳು, ಗೋವಳಕೊಂಡದ ಬಾದಶಹನ ಮಂತ್ರಿಗಳು ಆಗಮಿಸಿದ್ದರು. ಅಲ್ಲದೆ ಹೂಲಿ, ಕೆಳದಿ, ಕೂಡಲಗಿ, ಸಂಕೇಶ್ವರ, ಉತ್ತರಾದಿ ಸಿಂಹಾಸನದ ಪ್ರತಿನಿಧಿಗಳು ಆಗಮಿಸಿದ್ದರು. ಮಲ್ಲಮ್ಮನ ತಂದೆಯಾದ ಮಧುಲಿಂಗ ನಾಯಕನು ಸುಂದರ ಕುದುರೆ, ಒಂಟೆ, ಆನೆಗಳನ್ನು ಕೊಟ್ಟು ಬೆಳವಡಿ ಸಂಸ್ಥಾನಕ್ಕೆ ಕಳಿಸಿದನು. ಕೆಳದಿ ಸಂಸ್ಥಾನದ ವೆಂಕಟರಾಯ ಬಿಳಗಿ ಸಂಸ್ಥಾನದ ಘಂಟೆ ನೃಪಾಲನನ್ನು ಸನ್ಮಾನಿಸಿ "ಮುಂಗೈ ಮುರಾರಿ" ಎಂಬ ಬಿರುದನ್ನಿತ್ತು ಗೌರವಿಸಿ, ತನ್ನ ಮಗಳು ರಾಮಾದೇವಿಯನ್ನು ಕೊಟ್ಟು ವಿವಾಹ ಮಾಡಿ ೧೯ ಕಂಪಣಗಳ ವಿಶಾಲ ಭೂಮಿಯನ್ನು ಉಡುಗೊರೆಯಿತ್ತನು.

ಸಿರಸಂಗಿ ಸಂಸ್ಥಾನದ ಮದುವೆ ಸಮಾರಂಭ ವಿಶೇಷವಾದುದಾಗಿತ್ತು. ಇಲ್ಲಿಯ ಪದ್ಧತಿ ಯೆಂದರೆ ಒಂದೇ ಹಸೆಮಣೆಯ ಮೇಲೆ ಒಂದೇ ಹಂದರದಲ್ಲಿ ಇಬ್ಬರನ್ನು ವಿವಾಹವಾಗುವುದು. ಈ ಪ್ರಕಾರ ಲಿಂಗರಾಜರು ಕ್ರಿ.ಶ.೧೮೭೪ರಲ್ಲಿ 'ಉಕ್ಕಲಿಯ ಬಸನಗೌಡರ ಮಗಳು ಲಿಂಗವ್ವ ಹಾಗೂ ಚೆನ್ನಮ್ಮರನ್ನು ವಿವಾಹವಾದರು."[೧೭೪]

ಕಿತ್ತೂರಿನ ದೊರೆ ಮಲ್ಲಸರ್ಜನು ತಲ್ಲೂರಿನ ರುದ್ರಮ್ಮನನ್ನು ಮೊದಲ ಪತ್ನಿಯನ್ನಾಗಿ ಮತ್ತು ಕ್ರಿ.ಶ.೧೮೦೦ರಲ್ಲಿ ಕಾಕತಿ ದೇಸಾಯರ ಮಗಳು ಚೆನ್ನಮ್ಮಾಜಿಯನ್ನು ಎರಡನೆಯ ಹೆಂಡತಿಯಾಗಿ ವಿವಾಹವಾದನು. ಇವರ ವಿವಾಹಕ್ಕೆ ತೋಲಗಿ, ಹೆಗ್ಗೇರಿ, ಮರಿಕಟ್ಟಿ, ಹುಣಸಿಕಟ್ಟಿ ತಿಗಡಿ, ವಣ್ಣೂರು, ತಲ್ಲೂರು, ಮಾಸ್ತಮರಡಿಗಳ ದೇಸಾಯರು, ಶ್ರೀಮಂತರು ಚಕ್ಕಡಿ, ಕುದುರೆಗಳ ಮೇಲೆ ಬಂದರು. ಅಲ್ಲದೆ ರಾಜಗುರುಗಳಾದ ಕಲ್ಮಠ ಶ್ರೀಗಳು ಆಗಮಿಸಿ ಆಶೀರ್ವದಿಸಿದರು. ವಿವಾಹ ಸಂಭ್ರಮದಲ್ಲಿ ವಾದ್ಯಗಳು ಮೊಳಗಿದವು.

ಕಳಲೆಯ ಕಾಂತ ಒಡೆಯರ ಮಗನಾದ ಮಲ್ಲರಾಜ(ಕೃಷ್ಣ ಒಡೆಯ)ರಿಗೆ ಅಚ್ಯುತಣ್ಣನ ಕುಮಾರಿ ನಂಜಮ್ಮಣ್ಣಿಯರನ್ನು ಕೊಟ್ಟು ವಿವಾಹ ಮಾಡಲಾಯ್ತು. ಮೈಸೂರು ವಿಜಯಚಾಮರಾಜ ಒಡೆಯರ ಪುತ್ರಿ ದೇವೀರಮ್ಮಣ್ಣಿಯನ್ನು ಕಾಂತರಾಜರಿಗೆ ಕೊಟ್ಟು ವಿವಾಹ ಮಾಡಲಾಯ್ತು.

ಹುರದ ಕೃಷ್ಣ ಒಡೆಯರ ಪುತ್ರಿ ಗೌರಮ್ಮಣ್ಣಿಯನ್ನು ಎರಡನೇ ಮಲ್ಲರಾಜನಿಗೆ ಕೊಟ್ಟು ವಿವಾಹ ಮಾಡಲಾಯ್ತು. ಅಲ್ಲದೆ ಮುಗೂರು ಬಸಪ್ಪ ಒಡೆಯರ ಪುತ್ರಿ ದೊಡ್ಡಮ್ಮಣ್ಣಿಯನ್ನು ಕಳಲೆ ನಂದಿನಾಥರಿಗೆ ಕೊಟ್ಟು ವಿವಾಹ ಮಾಡಲಾಯ್ತು. ತಗಡೂರು ಸಿದ್ಧರಾಜೇ ಅರಸಿನವರ ಪುತ್ರಿ ಸಿದ್ಧಾಜಮ್ಮಣ್ಣಿಯವರನ್ನು ಕೃಷ್ಣರಾಜರಿಗೆ ಕೊಟ್ಟು ವಿವಾಹ ಮಾಡಲಾಯ್ತು. ಹುರದ ದೊಡ್ಡ ಲಿಂಗಪಾದ ಒಡೆಯರ ಪುತ್ರಿ ದೊಡ್ಡಮ್ಮಣ್ಣಿಯನ್ನು ತಿಮ್ಮರಾಜ ಒಡೆಯರಿಗೆ, ತಗಡೂರು ಮಲ್ಲರಾಜ ಒಡೆಯರ ಪುತ್ರಿ ಚೆನ್ನಾಜಮ್ಮಣ್ಣಿಯನ್ನು ತಿಮ್ಮರಾಜರಿಗೆ, ಕೋಟೆ ದೇವರಾಜ ಒಡೆಯರ ಪುತ್ರಿ ದೊಡ್ಡತಿಮ್ಮಣ್ಣಿ, ಮೈಸೂರು ಅರಸರ ಬೋಳ ಚಾಮರಾಜ ಒಡೆಯರ ಪುತ್ರಿ ದೇವಮ್ಮಣ್ಣಿಯರನ್ನು ತಿಮ್ಮರಾಜ ಒಡೆಯರಿಗೆ ಕೊಟ್ಟು ವಿವಾಹ ಮಾಡಲಾಯ್ತು. ಬಿಳಗಿ ಇನೇ ಘಂಟೇಂದ್ರನ ಪುತ್ರಿ ಮತ್ತು ಕೆಳದಿ ಭದ್ರಯ್ಯನ ಪತ್ನಿ "ಘಂಟೆ ಅಮ್ಮಾಜಿ ತನ್ನ ತವರು ಮನೆಯಿಂದ ಬಂದ ಬಳುವಳಿ ಬಿಳಗಿ ಸೀಮೆಯ ೫೦ ವರಹ ಉತ್ಪನ್ನವಿರುವ ನಜರ ಮತ್ತು ಅರಂದೂರ ಪ್ರದೇಶವನ್ನು ಮಹಾಮಹತ್ತಿಗೊಳಗಾದ ಪೆನುಗೊಂಡೆಯ ವಿರೂಪಾಕ್ಷದೇವನ ಮುಖಾಂತರ ಮಹತ್ತಿನ ಮಠಕ್ಕೆ ಉಂಬಳಿಯಾಗಿ ನೀಡಿದಳು.[೧೭೫] ಬಿಳಗಿ ದೊರೆ ನರಸಿಂಹನ ಶೌರ್ಯಕ್ಕೆ ಮೆಚ್ಚಿದ ವಿಜಯನಗರದ ದೊರೆ ಕೃಷ್ಣದೇವರಾಯನು ತನ್ನ ಮಗಳಾದ ಹರಿಯಮ್ಮಳನ್ನು ಧಾರೆಯೆರೆದುಕೊಟ್ಟು ೩ ಲಕ್ಷ ಗದ್ಯಾಣ ಉತ್ಪನ್ನ ಬರುವ ಪೆನುಗೊಂಡೆ ಸೀಮೆಯನ್ನು ಬಳುವಳಿಯಾಗಿ ಕೊಟ್ಟನು."[೧೭೬] ಕಳಲೆ ಅರಸರು ನೆರೆಯ ಮೈಸೂರು, ಕೆಳದಿ, ಸ್ವಾದಿ ಅರಸ ರೊಂದಿಗೆ ವೈವಾಹಿಕ ಸಂಬಂಧವನ್ನೇರ್ಪಡಿಸಿದ್ದರು. ಕಳಲೆ ಚಾಮರಾಜನಿಗೆ ಮೂಗೂರ ಬಾಳಲೋಚನನ ಗ್ರತನೂಭವೆ ರೂಪು ಸಂಪನ್ನೆಯಾದ ಕೆಂಪನಂಜಾನೆಯು, ಹುರಕ್ಕಿ ನಂಜರಾಜ ತನೂಭವೆಯು, ಕೋಕಿಲಾಲಾಪಿಯುಮಾಗಿ ರತಿದೇವಿಯ ರೂಪ ಗೆಲ್ವ ಕೆಂಪದೇವಾಂಬಿಕೆಯನ್ನು ಕೊಟ್ಟು ವಿವಾಹಮಾಡಲಾಯ್ತು."[೧೭೭]

ಹಾಗಲವಾಡಿ ರಾಮಪ್ಪನು ಕಲ್ಲಮ್ಮವ್ವನನ್ನು ವಿವಾಹವಾದನು. ಅಲ್ಲದೆ ಮುದ್ದುವೀರಪ್ಪ ನಾಯಕನು ರುದಿರಾಣಮ್ಮನನ್ನು ವಿವಾಹವಾದನು. ಈ ರಾಣಿಯರ ತಂದೆ, ತಾಯಿ ಹಾಗೂ ತವರೂರ ಬಗ್ಗೆ ಉಲ್ಲೇಖಗಳು ದೊರೆಯುವುದಿಲ್ಲ.

ಮಹಾನಾಡ ಪ್ರಭುವಾದ ತೋಟೇಂದ್ರನು ತನ್ನ ಮಗಳಾದ ಶಾಂತಮ್ಮನನ್ನು ಕರಿಯಪ್ಪಗೌಡನಿಗೆ ಕೊಟ್ಟು ವಿವಾಹ ಮಾಡಿದನು. ಅಲ್ಲದೆ 'ಕರಿಕೆರೆ ಗ್ರಾಮ'ವನ್ನು ಬಳುವಳಿ ಕೊಟ್ಟನು. ಕೊಡಗಿನ

ಮುದ್ದುರಾಜನ ಮಗಳು ನೀಲಮ್ಮಾಜಿಯನ್ನು ಉತ್ತುನಾಯಕ ಮದುವೆಯಾದನು. “ಕ್ರಿ.ಶ.೧೭೯೬ರ ಇಸ್ವಿಯಲ್ಲಿ ಶ್ರೀ ಒಡೆಯರ್‌ರು ಎರಡನೇ ಬಾರಿಗೆ ಮಹಾದೇವಮ್ಮಾಜಿಯರನ್ನು ಮದುವೆಯಾಗಿ ಅವರ ಪ್ರೀತಿ ದ್ಯೋತಕವಾಗಿ ಮಡಿಕೇರಿಯಲಿ ‘ಮಹದೇವಪೇಟೆ’ ಕಟ್ಟಿಸಿದನು.”[೧೭೮]

ವಿವಾಹ ಸಂದರ್ಭದಲ್ಲಿ ಹೆಣ್ಣು-ಗಂಡಿನ ಕೊಡುಕೊಳ್ಳುವಿಕೆಯ ಸಂಬಂಧವಾಗಿ ಸ್ವಾದಿ ಅರಸಿನ ತಂಗಿಯಾದ ಚೆನ್ನಮ್ಮಾಜಿಯು ಕೊಡಗಿನ ರಾಜನಿಗೆ ಬರೆದ ಕಾಗದ. “ತಮಗೆ ಕುಮಾರತಿ ಉಂಟುಯಂತಾ ಕೇಳಿ ಇದ್ದೇನೆ. ಆ ಕುಮಾರತಿಯರನ್ನು ನಮ್ಮ ಅಣ್ಣಾಜಿಯವರಾದ ಬಸವಲಿಂಗರಾಜರಿಗೆ ವಿವಾಹ ಮಾಡಿಕೊಟ್ಟು ಬಂಧುತ್ವ ಬೆಳೆಸುವಂಥಾ ಪ್ರೀತಿ ಮಡಗಿ ನಾವು ಇಲ್ಲಿಗೆ ಬರುವಂತೆ ಅನುಕೂಲ ಮಾಡಿ ತಂಮ ಮಿತ್ರರ ಸಂಗಡ ಮಿತ್ರತ್ವ ಸಂಪಾದಿಸಿಕೊಟ್ಟು ಇವರನ್ನು ಆರೈಕೆ ಮಾಡಬೇಕು ಎಂದು ಬರೆದು ಕಳಿಸಿದ್ದಳು.”[೧೭೯] ಇದಕ್ಕೆ ಒಪ್ಪಿದ ವೀರ ರಾಜೇಂದ್ರನು ರಾಜಮ್ಮಾಜಿಯ ವಿವಾಹಕ್ಕೆ ಇಂಗ್ರೇಜ ಸರದಾರರನ್ನು ಬರಮಾಡಿಕೊಂಡು, ಸಮಸ್ತರನ್ನು ಕರೆಸಿ, ರಾಜನೀತಿ ಪ್ರಕಾರ ವೇದೋಕ್ತಿಯಿಂದ ೯ ದಿನಗಳ ಕಾಲ ವಿಜೃಂಭಣೆಯಿಂದ ವಿವಾಹ ಕಾರ್ಯ ನಡೆಯಿತು. ವೀರ ರಾಜೇಂದ್ರನು ತನ್ನ ಮಗಳು ಗೌರಮ್ಮನನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಿಸಿದನು. ಈಕೆ ರಾಣಿ ವಿಕ್ಟೋರಿಯಾಳ ಆಶ್ರಯದಲ್ಲಿ ಇಂಗ್ಲೆಂಡಿನಲ್ಲೇ ಬೆಳೆದು, ಜಾನ್ ಕ್ಯಾಂಪಬೆಲ್ ಎಂಬ ನಿವೃತ್ತ ಮಿಲಿಟರಿ ಅಧಿಕಾರಿಯೊಂದಿಗೆ ವಿವಾಹವಾದಳು. ಭಿನ್ನ ಸಂಸ್ಕೃತಿಗೆ ಹೊಂದುವುದು ಕಷ್ಟವಾದ್ದರಿಂದ ಇವಳ ವೈವಾಹಿಕ ಬದುಕು ಸುಖಕರವಾಗಿರಲಿಲ್ಲ.

**ಬಹುಪತ್ನಿತ್ವ:** ಪ್ರಾಚೀನ ಕರ್ನಾಟಕದಲ್ಲಿ ಬಹುಪತ್ನಿತ್ವಕ್ಕೆ ಸಾಮಾಜಿಕ ಮನ್ನಣೆಯಿತ್ತು. ರಾಜರು ಬಹುವಲ್ಲಭರು, ಬಹುವಲ್ಲಭರಾದ ಶ್ರೀಕೃಷ್ಣ ಹಾಗೂ ಭರತ ಚಕ್ರವರ್ತಿ ಇವರಿಬ್ಬರು ಇಹದ ಬದುಕಿಗೆ ಆದರ್ಶರಾದವರು. ಶ್ರೀಕೃಷ್ಣನಿಗೆ ಹದಿನಾರು ಸಾವಿರ ಜನ ಪತ್ನಿಯರಿದ್ದರೆ, ಭರತ ಚಕ್ರವರ್ತಿಗೆ ತೊಂಬತ್ತಾರು ಸಾವಿರ ಪತ್ನಿಯರು. ವಡ್ಡಾರಾಧನೆಯ ಕಥೆಯೊಂದರಲ್ಲಿ ಬರುವ ಪದ್ಮರಥ ಎಂಬುವನಿಗೆ ಏಳುನೂರು ಜನ ಅರಸಿಯರು. ಇದರ ಫಲವಾಗಿ ಕೆಲವು ಜನ ಸ್ತ್ರೀಯರು, ಪುರುಷನ ಸೂಳು ಪಾಳೆಯವನ್ನೇ ಕಾಣದ ನಮಗೆಲ್ಲಿಯ ಮಕ್ಕಳು’ ಎಂದು ವ್ಯಥೆ ಪಡುವುದನ್ನು ಕಾಣುತ್ತೇವೆ. ನಾಗದೇವನು ಅತ್ತಿಮಬ್ಬೆ ಹಾಗೂ ಗುಂಡಮಬ್ಬೆ ಎಂಬ ಅಕ್ಕತಂಗಿಯರನ್ನು ವಿವಾಹವಾಗಿದ್ದ. ಪಾಂಡು ಮಹಾರಾಜ ಕುಂತಿ, ಮಾದ್ರಿಯನ್ನು ವಿವಾಹವಾಗಿದ್ದ. ಬಹುಪತ್ನಿಯರನ್ನು ಹೊಂದುವುದು ಒಪ್ಪಿತ ಮೌಲ್ಯವಾಗಿದ್ದು, ಅದು ಪ್ರತಿಷ್ಠೆಯ ದ್ಯೋತಕವಾಗಿತ್ತು. ಒಂದು ಬಗೆಯ ಧಾರ್ಮಿಕ ನೀತಿಯೇ ಆಗಿತ್ತು. ಹೀಗಾಗಿ ಅರಸರು, ಸಾಮಂತರು, ಅಧಿಕಾರಿಗಳಲ್ಲಿ ಬಹುಪತ್ನಿತ್ವವು ಅಧಿಕ ಪ್ರಮಾಣದಲ್ಲಿತ್ತು. ಕೆಳದಿ ಸಂಸ್ಥಾನದ ಸದಾಶಿವನಾಯಕನು ವೀರಮಾಂಬೆ, ಭದ್ರಾಂಬೆಯರನ್ನು, ವೀರಭದ್ರನಾಯಕನು ವೀರಮ್ಮಾಜಿ, ಕೊಲ್ಲೂರಮ್ಮಾಜಿಯನ್ನು ಶಿವಪ್ಪ ನಾಯಕನು ಬಸವೂರ

ಸೋಮಯ್ಯನ ಮಗಳು ಭದ್ರಮ್ಮಾಜಿ, ಬಾದಾಮಿ ಲಿಂಗಪ್ಪ ಶೆಟ್ಟರ ಮಗಳು ಬಸವಲಿಂಗಮ್ಮಾಜಿಯನ್ನು, ರಾಣಿ ಚೆನ್ನಮ್ಮಾಜಿಯ ದತ್ತುಪುತ್ರನಾದ ಬಸಪ್ಪನಾಯಕನಿಗೆ ಹೆಬ್ಬೆ ಮಹಂತಯ್ಯನ ಮಗಳು ಚೆನ್ನಮ್ಮಾಜಿ, ಮಳಿಗೆ ಚೆನ್ನವೀರಪ್ಪನ ಮಗಳು ಚೆನ್ನಬಸವಮ್ಮಾಜಿ, ಕುಟರಹಳ್ಳಿ ಚೆನ್ನಮ್ಮಾಜಿಯನ್ನು ಮತ್ತು ಹೆಬ್ಬೆಯ ವೀರಮ್ಮಾಜಿ ಎಂಬ ನಾಲ್ವರನ್ನು ವಿವಾಹ ಮಾಡಿದ ಸಂಗತಿ ಕೆಳದಿ ನೃಪವಿಜಯದಿಂದ ತಿಳಿದುಬರುತ್ತದೆ. ಸೋದೆಯ ಅರಸಪ್ಪನಾಯಕನಿಗೆ ಒಂಬತ್ತು ಜನ ರಾಣಿಯ ರಿದ್ದರು. ಸಿರಸಂಗಿ ಸಂಸ್ಥಾನದ ದೊರೆ ಲಿಂಗರಾಜನಿಗೆ ಚೆನ್ನವ್ವ, ಲಿಂಗವ್ವ ಎಂಬ ರಾಣಿಯರೂ, ಸಿರಸಂಗಿಯ ೨೨ನೇ ದೊರೆ ಜಾಯಪ್ಪ ದೇಸಾಯಿಗೆ ಲಿಂಗವ್ವ ಮತ್ತು ಚೆನ್ನಾಂಬೆ ಎಂಬ ರಾಣಿಯರಿದ್ದರು. ಸಿರಸಂಗಿಯ ೨೬ನೇ ದೊರೆಯಾದ ಜಾಯಪ್ಪದೇಸಾಯಿಗೆ ಗಂಗಾಬಾಯಿ, ಉಮಾಬಾಯಿ ಎಂಬ ರಾಣಿಯರಿದ್ದರು. ೨ನೇ ದೊರೆ ಲಿಂಗರಾಜರು ೧೮೪೫ರಲ್ಲಿ ಉಕ್ಕಲಿಯ ಲಿಂಗವ್ವ, ಶಿರಹಟ್ಟಿ ಚೆನ್ನವ್ವರನ್ನು ಏಕಕಾಲದಲ್ಲಿ ವಿವಾಹವಾದನು. ಕೆಲಕಾಲದ ನಂತರ ಇವರು ತೀರಿದ ಬಳಿಕ ತಿಕೋಟೆಯ ಭಾಗೀರಥಿಬಾಯಿ, ಸೌಳಭಾವಿಯ ಗಿರಿಜಾಬಾಯಿಯನ್ನು ವಿವಾಹ ವಾದನು. ಇವರು ತೀರಿದ ನಂತರ ಐದನೇ ಹೆಂಡತಿಯಾಗಿ ಜಮಖಂಡಿ ಆಸ್ಥಾನದ ಸುಂದರಾ ಬಾಯಿಯನ್ನು ವಿವಾಹವಾದನು. ಸಿರಸಂಗಿ ೪ನೇ ಜಾಯಪ್ಪದೇಸಾಯಿ ಮೂರು ಜನ ಪತ್ನಿಯರನ್ನು ಹೊಂದಿದ್ದ. ಒಬ್ಬಳು ಕುಮಟೆಯ ಗಂಗಾಬಾಯಿ, ಇನ್ನೊಬ್ಬಳು ನಾಗರಹಳ್ಳಿ ಉಮನಾಬಾಯಿ. ಮತ್ತೊಬ್ಬಳು ಯಾರೆಂದು ತಿಳಿದುಬಂದಿಲ್ಲ.

"ಕಿತ್ತೂರಿನ ದೊರೆ ಮಲ್ಲಸರ್ಜನಿಗೆ ಮೊದಲ ಹೆಂಡತಿಯಾಗಿ ರುದ್ರಮ್ಮ, ೨ನೇ ಹೆಂಡತಿಯಾಗಿ ಚೆನ್ನಮ್ಮ, ೩ನೇ ಹೆಂಡತಿಯಾಗಿ ನೀಲವ್ವ, ೪ನೇ ಹೆಂಡತಿಯಾಗಿ ಶಿವಲಿಂಗವ್ವ ಇದ್ದರು."[೧೮೦]

ಕಳಲೆಯ "ಒಂದನೇ ಕೃಷ್ಣರಾಜ ಒಡೆಯರು ಕಳಲೆ ಮನೆತನದ ನಾಲ್ವರು ಹೆಣ್ಣು ಮಕ್ಕಳು ಸೇರಿದಂತೆ ಎಂಟು ಜನ ಅಷ್ಟಮಹಿಷಿಯರನ್ನು ಹೊಂದಿ ಐಶಾರಾಮಿ ಬದುಕನ್ನು ಸಾಗಿಸುತ್ತಿದ್ದರು."[೧೮೧] ಕಳಲೆ ದೊಡ್ಡ ಕೃಷ್ಣರಾಜ ಒಡೆಯರಿಗೆ "ಕಳಲೆ ಚಿಕ್ಕ ಅರಸಿನವರ ಕುಮಾರಿ ಚೆಲುವಾಜಮ್ಮಣ್ಣಿ, ದೇವಾಜಮ್ಮಣ್ಣಿ, ಕಳಲೆ ದೊಡ್ಡ ಚೆಲುವೆ ಅರಸಿನವರ ಪುತ್ರಿ ಚೆಲುವಾಜಮ್ಮಣ್ಣಿ, ಕೊತ್ತೆಗಾಲದ ಕೃಷ್ಣ ಅರಸಿನವರ ಪುತ್ರಿ ಕಾಂತಮ್ಮಣ್ಣಿ, ಹುಲ್ಲನಹಳ್ಳಿ ಚಿಕ್ಕೆ ಅರಸಿನವರ ಪುತ್ರಿ ನಂಜಮ್ಮಣ್ಣಿ, ನಿಲಸೋಗೆ ದೊಡ್ಡೆ ಅರಸಿನವರ ಕುಮಾರತಿ ದೇವೀರಮ್ಮಣ್ಣಿ, ಮೂಗೂರು ಕೆಂಪಮ್ಮಣ್ಣಿ ಎಂಬ ೯ ಜನರು ಅಲ್ಲದೆ ಪಾಳೆಗಾರರ ಮಕ್ಕಳು, ಶಿವಾಚಾರದ ಶೆಟ್ಟಿಗಳ ಮಕ್ಕಳು, ೩೦ ಜನ ಲಿಂಗಾಯತದ ಸ್ತ್ರೀಯರನ್ನು ವಿವಾಹವಾದನು."[೧೮೨] ಕಳಲೆಯಲ್ಲಿ ಪಂಚಕಲ್ಯಾಣೋತ್ಸವ ನಡೆಯುತ್ತಿತ್ತೆಂಬ ವಿವರವನ್ನು

"ಇಡಿದಿರೆ ಕಾಂತಾವಿರಹದ
ಕಡುಗತ್ತಲೆ ಚಾಮನೃಪನ ಮಾನಸದೊಳಗಂ
ಕಿಡಿಸಲ್ ರತ್ನಂಗಳೊಳ್ಳೆ
ಸೊಡರಂ ಪಿಡಿದಂತೆ ಚಿತ್ತ ಬೆಳಗಿದುದಾಗಳ್"[೧೮೩]

ಎಂಬಂತೆ ಚಾಮರಾಜನು ಕೀಲಾಪುರದ ರಾಜಪುತ್ರಿ ಚೆಲುವಾಂಬೆ, ಅರಸಣಗಿ ರಾಜಪುತ್ರಿ ದೇವಾಂಬಿಕೆ, ಹುರದ ರಾಜಪುತ್ರಿ ದೇವೀರಾಂಬಿಕೆ, ತೋಂಟವಾಡಿ ಪುತ್ರಿ ಲಕ್ಷ್ಮಣಾಂಬೆ, ಹುಲ್ಲನಹಳ್ಳಿ ರಾಜಪುತ್ರಿ ನಂಜಾಂಬೆಯರನ್ನು ಒಟ್ಟಿಗೆ ವಿವಾಹವಾದನು. ಬಿಳಗಿ ಶಿವಪ್ಪನಾಯಕನ ರಾಣಿಯರಾಗಿ ಶಾಂತಮ್ಮ, ಗೌರಮ್ಮ ಇದ್ದರು. ಸೋಮಶೇಖರ ನಾಯಕನು ಚೆನ್ನಮಲ್ಲಾಂಬೆ ಮತ್ತು ವೀರಮ್ಮಾಜಿಯನ್ನು ವಿವಾಹವಾದನು. ವಿವಾಹವು ಧಾರ್ಮಿಕ, ಸಾಂಸ್ಕೃತಿಕ ಚೌಕಟ್ಟಿನ ರೂಪದಲ್ಲಿ ಏಕಸತಿ ಅಥವಾ ಏಕಪತಿ ಅಳವಡಿಸಿಕೊಳ್ಳುವುದು ಯೋಗ್ಯವೆನ್ನಬಹುದು.

**ಪಾತಿವ್ರತ್ಯ ನಿಷ್ಠೆ:** 'ಪತಿಯೇ ಪರದೈವ' ಎಂಬ ಮೌಲ್ಯವನ್ನು ತಮ್ಮ ಉಸಿರಾಗಿಸಿಕೊಂಡವರು ಭಾರತೀಯ ಮಹಿಳೆಯರು. ಸಮಾಜದಲ್ಲಿ ಗಂಡನ ವಿರುದ್ಧ ಮಾತನಾಡುವುದು ಪಾಪಕರ ಎಂಬ ಪೂರ್ವನಿರ್ದರಿತ ಪರಿಕಲ್ಪನೆಯನ್ನು ಒಪ್ಪಿಕೊಂಡವರು. ಹೀಗಾಗಿಯೇ ಕರ್ನಾಟಕದ ಶಾಸನಗಳು ಕೂಡಾ ಪಾತಿವ್ರತ್ಯವನ್ನು ಎತ್ತಿಹಿಡಿಯುತ್ತವೆ. ಹೆಣ್ಣುಮಕ್ಕಳು ಹುಟ್ಟಿದ ಮನೆಗೂ, ಕೊಟ್ಟ ಮನೆಗೂ ಕೀರ್ತಿಯನ್ನು ತರಬೇಕೆಂದು ಹಾರೈಸುವ ತಾಯಂದಿರು ನಮ್ಮ ನಾಡಿನಲ್ಲಿದ್ದಾರೆ. ಹೆಣ್ಣಿನ ಪಾತಿವ್ರತ್ಯದ ಪರೀಕ್ಷೆಗಾಗಿ ಘಟಸರ್ಪದ ಹುತ್ತಕ್ಕೆ ಕೈ ಹಾಕಿಸುವುದು. ಕೈಗೆ ಕೆಂಡವನ್ನು ಹಾಕುವುದು ಇತ್ಯಾದಿ ಅಗ್ನಿದಿವ್ಯ, ನಾಗದಿವ್ಯದಂಥ ದಿವ್ಯಗಳನ್ನು ಹಾಯ್ದು ಹೆಣ್ಣು ತನ್ನ ಪಾತಿವ್ರತ್ಯವನ್ನು ಸಾಬೀತುಗೊಳಿಸುವ ಅನಿವಾರ್ಯವಿತ್ತು. ಘಟಸರ್ಪದ ಪವಾಡವನ್ನು ಮೆರೆದು ರಾಣಿ ಸುಗ್ಗಲೆ ತನ್ನ ಪಾತಿವ್ರತ್ಯವನ್ನು ಸಾರ್ವಜನಿಕರಿಗೆ ಪ್ರಕಟಿಸಿದಳು.

ಪಾತಿವ್ರತ್ಯವೆಂಬುದು ಕೇವಲ ಹೆಣ್ಣಿಗೆ ಮಾತ್ರ ಮೀಸಲಾದ ಮೌಲ್ಯವಾಗಿದ್ದು, ಗಂಡಿಗೆ ಪಾತಿವ್ರತ್ಯ ನಿಷ್ಠೆ ಎಂಬುದು ಇಲ್ಲ. ಹೆಣ್ಣು ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಹೀಗೆಯೇ ಬದುಕಬೇಕೆಂಬ ಆದರ್ಶಗಳಿದ್ದು, ಗಂಡಿಗೆ ಯಾವುದೇ ನಿರ್ಬಂಧಗಳಿರಲಿಲ್ಲ. ಹೆಣ್ಣು ಮಾತ್ರ ಪತಿವ್ರತೆ ಆಗಬೇಕು ಗಂಡು ಪತ್ನೀವ್ರತವಾಗುವ ಅಗತ್ಯವಿರಲಿಲ್ಲ. ಆತ ಹೇಗೆ ಬದುಕಿದರೂ ಪ್ರಶ್ನಿಸುವಂತಿರಲಿಲ್ಲ. ಹೀಗಾಗಿ ಹೆಣ್ಣಿನ ಶೀಲದ ಬಗ್ಗೆ 'ದ್ವಿಸ್ತರ ನೀತಿ' ಹುಟ್ಟಿಕೊಂಡಿತು. ಪುರುಷರು ಪೋಷಿತ ಹಾಗೂ ಅಪೋಷಿತ ನೆಲೆಯಲ್ಲಿ ಹಲವು ಹೆಂಡಿರನ್ನು ಹೊಂದಬಹುದಾಗಿತ್ತು.

ಇಟಲಿಯ ಪ್ರವಾಸಿಯಾದ ಪಿಯಾಟ್ರೊ ಡೆಲ್ಲಾವೆಲ್ಲಿ ಕೆಳದಿ ರಾಣಿ ಭದ್ರಮ್ಮಾಜಿಯ ಪಾತಿವ್ರತ್ಯ ನಿಷ್ಠೆಯನ್ನು ದಾಖಲಿಸಿದ್ದಾನೆ. ಈಕೆಯ ಪತಿ ವೆಂಕಟಪ್ಪ ನಾಯಕನು ಮೂರ್/

ಮುಸ್ಲಿಂ ಸ್ತ್ರೀಯಲ್ಲಿ ಅನುರಕ್ತನಾಗಿದ್ದನು. ಈ ವಿಷಯ ತಿಳಿದ ರಾಣಿ ಭದ್ರಜಿ "ಸ್ವಜಾತೀಯ ಬೇರೆ ಸ್ತ್ರೀಯಲ್ಲಿ ಅನುರಕ್ತನಾಗಿದ್ದರೆ, ಅವಳು ಸಂತೋಷದಿಂದ ಸಹಿಸುತ್ತಿದ್ದಳಂತೆ. ಆದರೆ ಸುರಾಪಾನ, ಮಾಂಸಾಹಾರ ಸೇವಿಸುವ ಈ ಸ್ತ್ರೀಯನ್ನು ಕೂಡಿ ಜಾತಿ, ಕುಲವನ್ನು ಕೆಡಿಸಿ ಕೊಂಡಿರುವ ಪತಿಗೆ ಇನ್ನು ಮುಂದೆ ನಾನು ಹೆಂಡತಿಯಾಗಿರದೆ, ಮಗಳ ಸಮನಾಗಿ ಇರುತ್ತೇನೆಂದು ಪ್ರತಿಜ್ಞೆ ಮಾಡುತ್ತಾಳೆ. ಇಂಥ ಪ್ರತಿಜ್ಞೆಯಿಂದ ಭದ್ರಮ್ಮಾಜಿಯನ್ನು ಹೊರತರಲು ವಿಶ್ವಪ್ರಯತ್ನ ಮಾಡಿದರೂ, ಅವಳ ನಿರ್ಧಾರವನ್ನು ಬದಲಿಸುವಲ್ಲಿ ವೆಂಕಟಪ್ಪನಾಯಕ ಸೋತನು. ಹೀಗೆ ರಾಣಿ ಪಾತಿವ್ರತ್ಯ ನಿಷ್ಠೆ ಮೆರೆದಳೆಂಬುದಾಗಿ ಡೆಲ್ಲಾವೆಲ್ಲಿ ದಾಖಲಿಸುತ್ತಾನೆ. ರಾಣಿ ಭದ್ರಮ್ಮಾಜಿಯು ಸ್ವಜಾತೀಯ ಹೆಣ್ಣಾಗಿದ್ದರೆ, ನಕ್ಕರೆ ನಗಲೇಳು ನಗೆಮುಖದ ಕೇದಗಿ। ನಾ ಮುಚ್ಚಿ ಮುಡಿದ ಪರಿಮಳದ ಹೂ। ಆ ನಾರಿ ಒಂದ್ಗಳಿಗೆ ಮುಡಿಯಲೇಳು" ಎನ್ನುತ್ತಿದ್ದಳಂತೆ. ಆದರೆ ಆಕೆ ಮೂರ್ ಜಾತಿಯ ಹೆಣ್ಣಾದ್ದರಿಂದ ರಾಣಿ ಕೈಗೊಂಡ ಪ್ರತಿಜ್ಞೆ ಪ್ರತಿಭಟನಾತ್ಮಕ ಸ್ವರೂಪದ್ದು. ಇಲ್ಲಿ ಹೆಣ್ಣಿನ ತ್ಯಾಗದ ಪ್ರತೀಕವಾಗಿಯೇ ರಾಣಿಯನ್ನು ಚಿತ್ರಿಸಲಾಗಿದೆ.

ಸ್ತ್ರೀಯರ ಅಧಿಕಾರವನ್ನು ಸಹಿಸದ ಪುರುಷವರ್ಗ ರಾಣಿಯರ ಶೀಲವನ್ನು ಶಂಕಿಸಿದ ಬಗೆಗೂ ದಾಖಲೆಗಳು ಸಿಗುತ್ತವೆ. ಕೆಳದಿಯ ರಾಣಿ ವೀರಮ್ಮಾಜಿಯು ಮಂತ್ರಿ ನಿರ್ವಾಣಯ್ಯ ನೊಂದಿಗೆ ಅನೈತಿಕ ಸಂಬಂಧ ಹೊಂದಿದ್ದಳೆಂಬುದಾಗಿ ಶಂಕಿಸಲಾಗುತ್ತದೆ. ಆದರೆ ಇದಕ್ಕೆ ಆಧಾರಗಳಿಲ್ಲ. ಹೀಗೆ ತನ್ನದಲ್ಲದ ಸಾರ್ವಜನಿಕ ವಲಯದಲ್ಲಿ ಸ್ತ್ರೀ ಕಾಲಿಟ್ಟರೆ, ಅವಳಿಗೆ ಪಾತಿವ್ರತ್ಯದ ಕಳಂಕವನ್ನು ಅಂಟಿಸುವುದೇ ಪುರುಷರ ಕೆಲಸವಾಗಿತ್ತು. ಪಾತಿವ್ರತ್ಯವೆಂಬುದು ಸ್ತ್ರೀಯರಿಗಾಗಿ ನಿರ್ದಿಷ್ಟಪಡಿಸಿದ ಮೌಲ್ಯವಾಗಿತ್ತು.

**ಸತಿಪದ್ಧತಿ:** ಸಮಾಜೋ-ಧಾರ್ಮಿಕ ಪ್ರಭಾವ ಬೀರಿದ ಬಹು ಚರ್ಚಿತವಾದ ಸಾಮಾಜಿಕ ಕಟ್ಟಳೆ ಸತಿ. ಸತಿಪದ್ಧತಿಯು ಒತ್ತಾಯಪೂರ್ವಕವಾಗಿರಲಿಲ್ಲ. ವಿದವೆ ಸ್ವಯಂ ಇಚ್ಛೆಯಿಂದ ಪತಿಯ ಚಿತೆಯನ್ನೇರುತ್ತಿದ್ದಳು. "ಪಂಜಾಬ ಪ್ರಾಂತ್ಯದ ಕಥೈ ಜನಾಂಗದಲ್ಲಿ ಸತಿ ಇರುವುದನ್ನು 'ಓನಿಸಿಕ್ರೆಟಿಸ್'ನು ಗುರುತಿಸಿದ್ದಾನೆ. ಕ್ರಿ.ಶ.ಪೂ.೩೧೬ರಲ್ಲಿ ಹಿಂದೂ ಸೇನಾನಾಯಕ ಕೆತ್ಯುಸನು ವೀರಾವೇಶದಿಂದ ಹೋರಾಡಿ ಮಡಿದಾಗ, ಅವನೊಡನೆ ಬಂದ ಹೆಂಡತಿಯರಿಬ್ಬರೂ ಸಹಗಮನ ಮಾಡಲು ಬಯಸಿದರು. ಗಂಡನೊಡನೆ ಸಾಯಲು ಒಬ್ಬಳಿಗೆ ಮಾತ್ರ ಅವಕಾಶವಿತ್ತು. ಆಗ ಹಿರಿಯ ಹೆಂಡತಿ ಗರ್ಭಿಣಿಯಾಗಿರುವುದರಿಂದ ಕಟ್ಟಳೆಯಂತೆ ಆಕೆ ಚಿತೆಯೇರಲು ಅವಕಾಶವಿಲ್ಲೆಂದು ಕಿರಿಯವಳಿಗೆ ಸಹಗಮನಕ್ಕೆ ಅವಕಾಶ ಕೊಡಲಾಯಿತು. ಇದನ್ನು ಕೇಳಿ ಹಿರಿಯ ಹೆಂಡತಿ ಮುಖದ ಮುಸುಕನ್ನು ಹರಿದು, ತಲೆಯ ಕೂದಲನ್ನು ಕಿತ್ತುಗೊಂಡು ಬಿಕ್ಕಿ ಬಿಕ್ಕಿ ಅಳುತ್ತಾ ಹೋದಳು. ಕಿರಿಯವಲು ಸಂತೋಷಭರಿತಳಾಗಿ ತಲೆಗೆ ಕಿರೀಟ ಧರಿಸಿ, ಮೈಗೆಲ್ಲ ಆಭರಣ

ತೊಟ್ಟು, ಮಧುವಣಗಿತ್ತಿಯಂತೆ ತನ್ನ ಬಂಧು ಬಳಗದೊಡಗೂಡಿ ವಾದ್ಯ ಸಮೇತ ಚಿತಾಗ್ನಿಯ ಕಡೆಗೆ ಹೊರಟಳು" ಎಂಬ ಅಂಶವನ್ನು ಗಮನಿಸಿದಾಗ, ಸತಿ ಪ್ರತಿಷ್ಠೆಯ ಮಾತಾಗಿತ್ತು. ಹಾಗಾಗಿಯೇ ಮನು ಸತಿ ಹೋಗುವ ಸ್ತ್ರೀಯನ್ನು 'ಸಾಧ್ವಿ' ಎಂದಿರುವನು. ಸತಿ ಸಹಗಮನ ಹೊಂದುವ ಸ್ತ್ರೀಯು ದೃಢಮನಸ್ಕಳಾಗಿರಬೇಕು.

"ದಂಡೆಯ ಕಟ್ಟಿಕೊಂಡು ಬಂಡೆಯ ಪಿಡಿದು
ತಂಡ ತಂಡದ ಮುಂದೆ ಮೆರೆದು
ಕಿಚ್ಚಿನ ಕೊಂಡವ ಕಂಡು ಹೆದರಿ
ಹಿಮ್ಮೆಟ್ಟಿದರೆ ಅವಳಿಗದೇ ಭಂಗ"[೧೪೪]

ಎಂಬ ಅಖಂಡೇಶ್ವರನ ವಚನವು ಸತಿಹೋಗುವ ಸ್ತ್ರೀಯ ಮನಃಸ್ಥಿತಿಯನ್ನು ದಾಖಲಿಸುತ್ತದೆ. ಬೆಳಗಾಂ ಜಿಲ್ಲೆಯ ಗೋಕಾಕ ತಾಲ್ಲೂಕಿನ ಕೊಣ್ಣೂರ ಗ್ರಾಮದಲ್ಲಿ ಒಬ್ಬ ಸ್ತ್ರೀಯನ್ನು ಬಲವಂತವಾಗಿ ಪಂಜಿನಿಂದ ಮತ್ತು ಭರ್ಚಿಯಿಂದ ಇಬ್ಬರು ಭಟರು ತಿವಿಯುವ, ಅಕೆಯನ್ನು ಚಿತೆಯೇರಲು ಬಲವಂತಿಸುವ, ಅವಳ ಮುಂದೆ ಕಟ್ಟಿಗೆ ದಿನ್ನೆಯ ಮೇರಿಸಿದ ಪತಿಯ ಶವವಿದೆ. ಆಕೆ ರೊಚ್ಚಿಗೆದ್ದು, ಪತಿಯ ಪ್ರೇತದ ಕಾಲೆಳೆದಿದ್ದಾಳೆ. ಅದರ ರಭಸಕ್ಕೆ ಶವ ಬೋರಲಾದ ಮನಕಲಕುವ ದೃಶ್ಯವನ್ನು ಸೆರೆಹಿಡಿಯಲಾದ ಪ್ರಥಮ ದೃಶ್ಯ ಇದಾಗಿದೆಯೆಂದು ಡಾ.ಸ್ಮಿತಾ ಸುರೇಬಾನಕರರು ಹೇಳುತ್ತಾರೆ. ಹೀಗೆ ಕೆಲ ಸಂದರ್ಭಗಳಲ್ಲಿ ಕೆಲ ಸ್ತ್ರೀಯರು ಸತಿಪದ್ಧತಿಯನ್ನು ನಿರಾಕರಿಸಿರುವ ಸಾಧ್ಯತೆಯಿದೆ. ಜನಪದದಲ್ಲಿ ಬರುವ ಈರೋಬಿ ಸತಿ ಹೋಗುವಾಗ ನೊಂದುಕೊಳ್ಳುತ್ತಾಳೆ. 'ಅಪ್ಪ ಬಂದರ ಬರಲಿ ತುಪ್ಪ ತಂದರ ತರಲಿ। ತುಪ್ಪದಂಥ ಬದುಕು ಅಡವೀಲಿ ಈಡಾಡುವಾಗ। ನಮ್ಮಪ್ಪನ ಗೊಡವೆ ನನಗೇನು? ಎಂದು ಪರಲೋಕ ಸುಖದ ಸುಪ್ಪತ್ತಿಗೆ ಕಲ್ಪನೆಯನ್ನು ಸತಿ ಹೋಗುವವರ ತಲೆಯಲ್ಲಿ ಅದೆಷ್ಟೂ ತುರುಕಿದರೂ, ಸಾವಿನ ವಾಸ್ತವಕತೆ ಮುಂದೆ ಆ ಕಾಲ್ಪನಿಕ ಸುಖ ಕೆಲವೊಮ್ಮೆ ಹಿಂದಕ್ಕೆ ಸರಿದು ನಿಲ್ಲುತ್ತದೆ. ಆದರೂ ಸತಿಪದ್ಧತಿಯು ನಮ್ಮ ಸಮಾಜದಲ್ಲಿ ಪ್ರಚಲಿತದಲ್ಲಿತ್ತೆಂಬುದನ್ನು ಮರೆಯುವಂತಿಲ್ಲ.

ಪ್ರಾಚೀನ ಕರ್ನಾಟಕದ ಒಂದು ಅನಿಷ್ಟ ಪದ್ಧತಿ ಇದಾಗಿದ್ದು, ಪತಿಯ ಮರಣಾನಂತರ ಪತ್ನಿಯು ಅಗ್ನಿಪ್ರವೇಶ ಮಾಡುತ್ತಿದ್ದರು. ಸಮಾಜದಲ್ಲಿ ವಿಧವೆಯಾಗಿರುವವರಿಗೆ ಎರಡೇ ಮಾರ್ಗಗಳು ಅವರ ಮುಂದಿದ್ದವು. ೧. ಪತಿಯ ಹಿಂದೆ ಸಹಗಮನ ಹೋಗುವುದು. ೨. ಧಾರ್ಮಿಕ ಜೀವನ ನಡೆಸುವುದು. ಈ ಸಹಗಮನ ಪದ್ಧತಿಯು ಭಾರತದಲ್ಲಷ್ಟೇ ಅಲ್ಲದೇ ಚೀನಾದಲ್ಲೂ ಅಸ್ತಿತ್ವದಲ್ಲಿದ್ದು ಸತಿ ಹೋದ ಸ್ತ್ರೀಯ ವಿಗ್ರಹಗಳನ್ನು ರಾಜರು ದೇವಾಲಯದಲ್ಲಿ ರಿಸುತ್ತಿದ್ದರೆಂದು, "ಪ್ರಾಚೀನ ಈಜಿಪ್ಟ್ ಮತ್ತು ಯೂರೋಪ್‌ನಲ್ಲಿ ವಿಧವೆಯನ್ನು ಬಲವಂತದಿಂದ ಸಾಯುವಂತೆ

ಮಾಡುವ ಪದ್ಧತಿ ಇತ್ತೆಂದು ಡಾ.ಎಂ.ಚಿದಾನಂದಮೂರ್ತಿಯವರು ದಾಖಲಿಸಿದ್ದಾರೆ."[೧೮೫] ಬದುಕಿನ ಬದಲಾದ ಪರಿಸ್ಥಿತಿಯಲ್ಲಿ ಪತಿಯೇ ಪರದೈವವಾಗಿರುವ ಹೆಣ್ಣಿಗೆ ಪತಿಯೇ ಇಲ್ಲದ ಬದುಕು ಕಷ್ಟವಾಯ್ತು. ತಾರ್ಕಿಕವಾಗಿ ಬದುಕುವಲ್ಲಿ ಅರ್ಥವೂ ಇಲ್ಲ ಎಂತಲೋ, ಸಮಾಜ ತನ್ನನ್ನು ಕಾಣುವ ದೃಷ್ಟಿಕೋನದಿಂದಲೋ ಸಮಾಜಕ್ಕೆ ವಿಮುಖವಾಗಿ ಸ್ತ್ರೀ ಈ ದಾರಿಯನ್ನು ಹಿಡಿದಿರಬಹುದು. ಸತಿಪದ್ಧತಿಯೆಂಬುದು ಇಂದು ನಿನ್ನೆಯದಲ್ಲ. ತನ್ನ ಪತಿ ಶಿವನಿಗಾದ ಅವಮಾನವನ್ನು ಸಹಿಸದೆ ಹೋಮಕುಂಡಕ್ಕೆ ಹಾರಿಕೊಂಡ ಪಾರ್ವತಿಯಲ್ಲಿಯೇ ಸತಿಪದ್ಧತಿಯ ಬೇರುಗಳನ್ನು ಕಾಣುತ್ತೇವೆ. ಮಹಾಭಾರತದಲ್ಲಿಯ ಮಾದ್ರಿ ಸಹಗಮನ ಹೊಂದಿದಳು. ರಾಮಾಯಣದಲ್ಲಿಯ ಸೀತಾದೇವಿಯ ಅಗ್ನಿಪ್ರವೇಶವು ಸಮಾಜವನ್ನೆದುರಿಸಲು ಕಂಡುಕೊಂಡ ಸರಳಮಾರ್ಗ.

ಸತಿಪದ್ಧತಿಯು ತುಂಬಾ ಸರಳ ಆಚರಣೆಯಾಗಿದ್ದು ಸಾಮಾನ್ಯ ಮಹಿಳೆಯರು, ಶ್ರೀಮಂತ ಮಹಿಳೆಯರು ಸತಿ ಹೋಗುವ ಆಚರಣೆಗಳಲ್ಲಿ ಭಿನ್ನತೆಯಿದ್ದವು. ಸಾಮಾನ್ಯ ಮಹಿಳೆಯರು ಯಾವುದೇ ಆಡಂಬರವಿಲ್ಲದೆ ಸ್ವಸಂತೋಷದಿಂದ ಚಿತೆ ಏರಿದರೆ, ಶ್ರೀಮಂತ ವರ್ಗದ ಮಹಿಳೆಯರು ಆಡಂಬರದ ಪದ್ಧತಿ ಅನುಸರಿಸುತ್ತಿದ್ದರು. ಚಿತೆಗೆ ಏರುವ ಮುನ್ನ ನೆಂಟರಿಷ್ಟರನ್ನೆಲ್ಲ ಸೇರಿಸಿ, ಊಟೋಪಚಾರವನ್ನು ಮಾಡಿಸುತ್ತಿದ್ದರು. ಬಿಳಿ ಅಥವಾ ಬೂದುಬಣ್ಣದ ಕುದುರೆಯ ಮೇಲೆ ಕುಳಿತು ಒಂದು ಕೈಯಲ್ಲಿ ಕನ್ನಡಿಯನ್ನು ಮತ್ತೊಂದು ಕೈಯಲ್ಲಿ ನಿಂಬೆಹಣ್ಣನ್ನು ಹಿಡಿದು ಊರೆಲ್ಲ ಮೆರವಣಿಗೆ ಮಾಡುತ್ತಿದ್ದರು. ಹೀಗೆ ಮೆರವಣಿಗೆ ಹೋಗುತ್ತಿರುವ ಮಹಿಳೆಯರನ್ನು ಸಂಬಂಧಿಕರು, ಹಲವಾರು ಸ್ತ್ರೀ-ಪುರುಷರು ಹಿಂಬಾಲಿಸುತ್ತಿದ್ದರು. ಅವಳ ತಲೆಯ ಮೇಲೆ ಛತ್ರಿಯನ್ನು ಸೂರ್ಯನ ಕಿರಣಗಳಿಂದ ರಕ್ಷಣೆಗಾಗಿ ಹಿಡಿದಿದ್ದರೆಂದು, ನಿಗದಿತ ಸ್ಥಳಕ್ಕೆ ಬಂದು ತಾನು ಧರಿಸಿದ ಆಭರಣಗಳನ್ನು ಆಪ್ತರಿಗೆ ನೀಡಿ, ಸರಳ ಉಡುಪು ಧರಿಸಿ, ಸಂಬಂಧಿಕರಿಗೆಲ್ಲ ಹೇಳಬೇಕಾದ ಮಾತುಗಳನ್ನು ಹೇಳಿ, ದೇವರನ್ನು ಪ್ರಾರ್ಥಿಸಿ ಚಿತೆಯನ್ನೆರುತ್ತಿದ್ದರು. ಇದಕ್ಕೆ ವಿಪರ್ಯಾಸವೆಂಬಂತೆ ಕಳಲೆ ರಾಣಿ ಲಿಂಗಾಜಮ್ಮಣ್ಣಿಯವರು ತನ್ನ ಪತಿ ಲಕ್ಷ್ಮೀಕಾಂತನ ಮರಣದ ನಂತರ ತಾನು ಬದುಕುವುದು ವ್ಯರ್ಥವೆಂದು ತಿಳಿದು, ತನ್ನ ಧರ್ಮಕ್ಕಾಗಿ, ತನ್ನ ಸ್ವಾಮಿಗಾಗಿ ಪ್ರಾಣ ಬಲಿದಾನಕ್ಕೆ ಮುಂದಾದಳು. ವೈಧವ್ಯ ದುಃಖಗಳಿಗೆ ಗುರಿಯಾಗಿ ಹಂಗಿನ ಕೂಳಿಗಿಂತ ಸಾವೇ ಮೇಲೆಂದು ನಿರ್ಧರಿಸಿ ಸತಿ ಸಹಗಮನಕ್ಕೆ ಶರಣಾದಳು. ತಾನೇ ಸ್ವತಃ ಗಂಧ ಪುಷ್ಪಗಳಿಂದ ಅಲಂಕರಿಸಿಕೊಂಡು ಕೆಂಪು ಕಣಗಿಲೆಯ ದಂಡೆಯನ್ನು ಹಾರವಾಗಿ ಹಾಕಿಕೊಂಡು ಕುಂಕುಮ. ಅರಿಶಿಣಗಳಿಂದ ಮೈಯೆಲ್ಲ ಲೇಪಿಸಿಕೊಂಡು ತನ್ನ ಪತಿಗೆಂದು ಸಿದ್ಧವಾದ ಚಿತೆಯನ್ನು, ಮೂರು ಪ್ರದಕ್ಷಿಣೆ ಹಾಕಿ ತನ್ನ ಪತಿಯ ಸಾವಿಗೆ ಕಾರಣರಾದವರನ್ನು ಶಪಿಸಿ, ಶಾಪ ಕೊಡುವಳು. ಸಮಜದಲ್ಲಿ ಶಾಪ ಕೊಡುವ ಪ್ರವೃತ್ತಿ ಇತ್ತೆಂದು ಕಂಡುಬರುತ್ತದೆ.

"ಕೂಡಲಾಪುರದ ಗದ್ದೇ ಅಕ್ಕಿ ರಕ್ತದ ಕೂಳ ಕಲಸಿದಂತೆ ಇರಲೆಂದೂ ತನ್ನ ಗಂಡನನ್ನು ಕೊಲ್ಲಿಸಿದ ಚೆನ್ನಾಜಮ್ಮಣ್ಣಿಯ ಮಕ್ಕಳ ವಂಶ ಬೆಳೆಯದಿರಲೆಂದೂ, ಮೈಸೂರು ಅರಸರು ಬೋಳ ಚಾಮರಾಜ ಒಡೆಯರ ಪುತ್ರಿ ದೇವಮ್ಮಣ್ಣಿಯವರ ವಂಶ ಬೆಳೆಯಲಿ"[೧೮೬] ಎಂದು ನುಡಿದುದು ಇತಿಹಾಸದಲ್ಲೇ ದಾಖಲಾರ್ಹ ಸಂಗತಿಯಾಗಿದೆ. ಇಟಲಿ ಪ್ರವಾಸಿಯಾದ ಪಿಯಾಟ್ರೊ ಡೆಲ್ಲಾವೆಲ್ಲಿಯು ಇಕ್ಕೇರಿಗೆ ಭೇಟಿ ನೀಡಿ, ಅಲ್ಲಿ ನಡೆದ 'ಸತಿ ಸಹಗಮನ' ಪದ್ಧತಿಯನ್ನು ದಾಖಲಿಸಿದ್ದಾನೆ. ಆಕೆ ಕೈಯಲ್ಲಿ ಕನ್ನಡಿಯನ್ನು, ಮತ್ತೊಂದು ಕೈಯಲ್ಲಿ ಲಿಂಬೆಹಣ್ಣನ್ನು ಹಿಡಿದಿದ್ದಳು. ಆಕೆಯನ್ನು ಕುದುರೆಯ ಮೇಲೆ ಮೆರವಣಿಗೆ ಮಾಡಲಾಗುತ್ತಿತ್ತೆಂದು, ಆ ಹೆಣ್ಣು ಮಗಳು ಲೋಕವನ್ನು ಕುರಿತು ಅದೇನೊ ನಿವೇದನೆ ಮಾಡಿಕೊಳ್ಳುತ್ತಿದ್ದಳೆಂದೂ, ಅದು ತನಗೆ ಅರ್ಥವಾಗಲಿಲ್ಲವೆಂದೂ ಹೀಗೆ ದಾಖಲಿಸಿದ್ದಾನೆ. "I know not for what purpose: and be holding herself in the Glass, with a lamentable tone Sufficiently pitiful to hear. went along I know note whitter, Speaking or Singing certain words, which I understood not. but they told  me they were a kind of farewell to the world and herself"[೧೮೭] ಎಂದು ಇತ್ಯಾದಿಯಾಗಿ ದಾಖಲಿಸುತ್ತಾ ಆಕೆ ಜಗತ್ತನ್ನು ಕುರಿತು ನಿವೇದನೆ ಮಾಡುತ್ತಿರುವ ಮಾತುಗಳೆಲ್ಲ ಅಲ್ಲಿಯ ವಾದ್ಯಗಳ ಸಪ್ಪಳದಲ್ಲಿ ಮರೆಯಾಗುತ್ತಿತ್ತು. ಆಕೆಯ ಮುಖದಲ್ಲಿ ಒಂದು ಬಗೆಯ ನಿರ್ಲಿಪ್ತತೆ ಇತ್ತು. ಕಣ್ಣಲ್ಲಿ ಒಂದು ಹನಿಯೂ ನೀರಿಲ್ಲದೆ, ಮತ್ತೊಂದು ಜಗತ್ತಿನಲ್ಲಿ ತನ್ನ ಪತಿಯನ್ನು ಸೇರುವೆನೆಂಬ ಆಸೆಯಿಂದ ಚಿತೆಯೇರಲು ಬಯಸುತ್ತಿದ್ದಳು. ಹೀಗೆ ಕೆಳದಿ ಸಂಸ್ಥಾನದಲ್ಲಿ ಅಲ್ಪಮಟ್ಟಿಗೆ ಸತಿಪದ್ಧತಿ ಜಾರಿಯಲ್ಲಿದ್ದು, ರಾಣಿ ಕೊಲ್ಲೂರಮ್ಮಾಜಿಯು ಸತಿಸಹಗಮನ ಹೊಂದಿದಳೆಂದು ಕೆಳದಿನೃಪವಿಜಯ ದಾಖಲಿಸಿದೆ. ಸೋದೆ ಅರಸ ಅರಸಪ್ಪನಾಯಕನ ಪತ್ನಿಯರಾದ ರುಮಾಯಿ, ಸಾತಕ್ಕ, ನಾಗಕ್ಕ, ಲಕುಮಾಯಿ, ಮಸಣಾಯಿ, ಕಾತ್ಯಾಯಿ, ಸಾತಾಯಿ ಇತ್ಯಾದಿ ೭ ಜನ ರಾಣಿಯರು ಸತಿ ಹೋದರು.

ಸ್ವಾದಿ ಸಂಸ್ಥಾನ ಭಾಗವಾದ ಪೊಂಡಾದಲ್ಲಿ ಸತಿಸಹಗಮನ ಪದ್ಧತಿ ಜಾರಿಯಲ್ಲಿತ್ತೆಂದು ಜೆಮಿಲ್ ಕರೇರಿಯು ದಾಖಲಿಸಿದ್ದಾನೆ. ಬೀಳಗಿ ಸಂಸ್ಥಾನದ ಮೊದಲನೇ ಸೋಮಶೇಖರ ದೊರೆ ಮರಣ ಹೊಂದಿದಾಗ ರಾಣಿ ವೀರಮಾಂಬೆ ತನ್ನ ಗಂಡನೊಡನೆ ಸತಿಸಹಗಮನ ಮಾಡಿದಳು. ಆತನ ಮತ್ತೊಬ್ಬ ಪತ್ನಿ ಮಲ್ಲಮ್ಮಾಜಿಯು ಸಹಗಮನಕ್ಕೆ ಮುಂದಾದಾಗ ಜನರೆಲ್ಲ ಅವಳನ್ನು ತಡೆದು ಮಗನನ್ನು ಕಾಪಾಡುವ ಹೊಣೆಯನ್ನು ಅವಳಿಗೊಪ್ಪಿಸಿದರು.

ಹೀಗೆ ಸತಿಪದ್ಧತಿಯೆಂಬುದು ಒಂದು ಒಪ್ಪಿತ ಮೌಲ್ಯವಾಗಿತ್ತೆಂದು, ನಮ್ಮ ಜನಪದ ಖಂಡ ಕಾವ್ಯಗಳಲ್ಲೂ ಕೂಡ ಸತಿಪದ್ಧತಿಯ ಉಲ್ಲೇಖಗಳು ಕಂಡುಬರುತ್ತವೆ. ಕನ್ನಡದ ಜನಪದ 'ಈರೋಬಿ ಖಂಡ ಕಾವ್ಯವು'

"ಗಂಡ ಸಾಯೋಕ್ಕಿಂತ ಮುಂಡ್ಯಾಗೋಕ್ಕಿಂತ
ಕಂಡೂರ ಮನೆಯ ಕಸನ್ಹಾಕೆ ಸಾಯೋಕಿಂತ
ಕೊಂಡವನ್ನೋದೆ ಕಡುಲೇಸು!"[೧೮೮]

ಎಂದು ಅವಳು ಕೈಯಲ್ಲಿ ಲಿಂಬೆಹಣ್ಣು ಹಿಡಿದು ಬಂದು, ದಾರಿಯುದ್ದಕ್ಕೂ ಬಾಳೆಹಣ್ಣು, ಅರಿಶಿಣ, ಸೀಗೇಕಾಯಿ ಚೆಲ್ಲುತ್ತಾ ಬಂದು ಎಲ್ಲರ ಮುಂದೆ ಅಗ್ನಿಪ್ರವೇಶ ಮಾಡುತ್ತಾಳೆ. ಒಬ್ಬ ಹೆಣ್ಣು ಮಗಳು ಅಗ್ನಿಪ್ರವೇಶ ಮಾಡಿದ ನಂತರ ವಸ್ತ್ರ, ಅಕ್ಕಿ, ಕನ್ನಡಿ, ಬಾಚಣಿಗೆ, ವೀಳ್ಯೆದೆಲೆಗಳನ್ನು ಅಲ್ಲಿ ನೆರೆದವರು ಹೊಂಡಕ್ಕೆ ಹಾಕುತ್ತಿದ್ದರೆಂಬ ಅಂಶವನ್ನು ಚಿದಾನಂದಮೂರ್ತಿಯವರು ದಾಖಲಿಸಿದ್ದಾರೆ. ಸತಿಹೋದ ಸ್ತ್ರೀಯರ ಸ್ಮರಣೆಗಾಗಿ 'ಮಾಸತಿ ಕಲ್ಲುಗಳು ಹುಟ್ಟಿಕೊಂಡವು. ಬಹುತೇಕ ಮಾಸ್ತಿಕಲ್ಲುಗಳು ಸಾಮಾನ್ಯ ಮಹಿಳೆಯ ಸ್ಮರಣಾರ್ಥವಾದವೇ ಹೊರತು ಸಮಾಜದ ಉನ್ನತ ವರ್ಗದ, ಶ್ರೀಮಂತ ಮಹಿಳೆಯರ, ರಾಣಿಯರ ಉಲ್ಲೇಖಗಳು ಹೇರಳವಾಗಿ ದೊರೆಯುವುದಿಲ್ಲ. ಹೀಗಾಗಿ ಸತಿ ಹೋಗುವುದು ಸಾಮಾನ್ಯ ಜನರ ಮೌಲ್ಯವಾಗಿತ್ತು. ಕೆಳದಿಯ ಒಬ್ಬ ರಾಣಿ, ಕಳಲೆಯ ಒಬ್ಬ ರಾಣಿ ಸತಿ ಹೋದ ಉಲ್ಲೇಖ ದೊರೆಯುವುವು. ಹೀಗಾಗಿ ಕರ್ನಾಟಕದ ತುಂಬೆಲ್ಲ ಸಾಕಷ್ಟು ಮಾಸ್ತಿಕಲ್ಲುಗಳು ದೊರೆತರೂ ರಾಣಿಯ ಉಲ್ಲೇಖವಿರದ ಸಂಗತಿಯನ್ನು ಗಮನಿಸಿದಾಗ ರಾಣಿಯರು ಪ್ರಗತಿಪರರಾಗಿದ್ದು, ವೈಚಾರಿಕ ಚಿಂತನೆ ಮಾಡುವಂಥವರಾಗಿದ್ದಿರಬಹುದು. ಹೀಗಾಗಿಯೇ ಆಸ್ತಿಯ ಹಂಚಿಕೆಯಲ್ಲಿ ಸಮಾನ ಸ್ಥಾನಮಾನವನ್ನು ಪುರುಷರಂತೆಯೇ ಸ್ತ್ರೀಯರು ಪಡೆಯಬೇಕು ಎಂಬ ಇವತ್ತಿನ ಮೌಲ್ಯಕ್ಕೆ ಅಂದೇ ರಾಣಿಯರ ಅಂಕಿತ ಬಿದ್ದಿತ್ತು. ಹೀಗಾಗಿಯೇ ಇದನ್ನು ಒಪ್ಪಿಕೊಂಡಂತೆ ಒಂದು ಸಂಸ್ಥಾನಕ್ಕೆ ರಾಣಿ ಆಗಿ ಸಮರ್ಥ ಆಡಳಿತ ನಡೆಸಿದ ಉಲ್ಲೇಖಗಳು ದೊರೆಯುತ್ತವೆ. ಮಾಸ್ತಿಕಲ್ಲುಗಳು ಕ್ರಿ.ಶ.೧೭, ೧೮ನೇ ಶತಮಾನದಲ್ಲಿ ಇಳಿಮುಖವಾಗಿರುವುವು. ಇದಕ್ಕೆ ಕಾರಣ ಅಂದಿನ ಪರಿಸರ, ರಾಣಿಯರ ಒಟ್ಟು ಪರಿಸರ ಇಲ್ಲಿ ಮುಖ್ಯ ಹೀಗಾಗಿ ರಾಣಿಯರು ಪ್ರಜ್ಞಾವಂತರಾಗಿದ್ದರು. ಕವಿ ಪರಮೇಶ್ವರಿಯಾದ ಗಂಗಾದೇವಿಯು 'ಕೆಳದಿ ರಾಜ್ಯಾಭ್ಯುದಯಂ' ಎಂಬ ಕೃತಿಯನ್ನು ರಚಿಸಿದಳು. ಈ ಹೊತ್ತಿಗಾಗಲೇ ಬ್ರಿಟಿಷರು ಭಾರತದಲ್ಲಿ ಪ್ರವೇಶ ಪಡೆದು, ತಮ್ಮ ಆಡಳಿತದ ಛಾಪನ್ನು ದೇಶದೆಲ್ಲೆಡೆ ಪಸರಿಸಿದ್ದರು. ಬ್ರಿಟಿಷರ ಶಿಕ್ಷಣ ನೀತಿ, ಸಾಮಾಜಿಕ ಸುಧಾರಣೆಗಳು, ಸಾಮಾಜಿಕ ಅನಿಷ್ಟಗಳನ್ನು ತಡೆಗಟ್ಟುವ ಪ್ರಕ್ರಿಯೆಗಳು ನಡೆದಿದ್ದವು. ೧೭೮೯ರಲ್ಲಿ ಶಾಹದಾಬಾದ್‌ನ ಕಲೆಕ್ಟರನಾಗಿದ್ದ ಎಮ್.ಎಚ್.ಬ್ರೂಕ್ ಸತಿಗೆ ಒಳಪಡಬೇಕಾಗಿದ್ದ ವಿಧವೆಯೊಬ್ಬಳನ್ನು ತಾನು ರಕ್ಷಿಸಿ, ಗೌರ್ನರ ಜನರಲ್ ಲಾರ್ಡ್ ಕಾರ್ನ್‌ವಾಲಿಸನಿಗೆ ತಿಳಿಸಿ ಆ ಬಗೆಗಿನ ಕೆಲಸಕ್ಕೆ ಅನುಮತಿ ಕೋರಿದನು. ಕ್ರಿ.ಶ.೧೮೦೫ರಲ್ಲಿ ಲಾರ್ಡ್ ವೆಲ್ಲಸ್ಲಿ ಇಂಗ್ಲೆಂಡಿನ ಸುಪ್ರಿಂಕೋರ್ಟ್‌ನಲ್ಲಿ ಈ ವಿಷಯ ಪ್ರಸ್ತಾಪಿಸಿದ್ದನು. ಲಾರ್ಡ್ ವಿಲಿಯಂ ಬೆಂಟಿಂಕ್(೧೮೨೮–೧೮೩೫)ನಂಥ ಬ್ರಿಟಿಷರು ಪುರಾತನ ಕ್ರೂರಪದ್ಧತಿಯಾದ

'ಸತಿಸಹಗಮನ' ಪದ್ಧತಿಯನ್ನು ತೊಡೆದು ಹಾಕಲು ಕ್ರಿ.ಶ.೧೮೨೯ರ ಡಿಸೆಂಬರ್ ೪ರಂದು 'ಸತಿಸಹಗಮನ ನಿಷೇಧ ಕಾಯ್ದೆ'ಯನ್ನು ಜಾರಿಗೆ ತಂದನು. ಆ ಕಾನೂನಿನ ಮೂಲಕ ಸತಿಪದ್ಧತಿ ನ್ಯಾಯ ವಿರೋಧವಾದುದೆಂದೂ ಸತಿಸಹಗಮನ ಮಾಡುವ ಮತ್ತು ಅದಕ್ಕೆ ಪ್ರಚೋದನೆ ನೀಡುವುದು ಎರಡೂ ನ್ಯಾಯಾಲಯಗಳಿಂದ ಶಿಕ್ಷಾರ್ಹ ಅಪರಾಧವೆಂದು ಘೋಷಿಸಿದನು. ಈತ ಶಿಕ್ಷಣಕ್ಕೂ ಹೆಚ್ಚು ಮಹತ್ವವನ್ನು ಕೊಟ್ಟನು. ಬಂಗಾಲದ ಶ್ರೀಮಂತ ಕುಟುಂಬದ, ಆಧುನಿಕ ಶಿಕ್ಷಣ ಪಡೆದ ರಾಜಾರಾಮ ಮೋಹನರಾಯ್ 'ಸತಿಸಹಗಮನ ಪದ್ಧತಿ'ಯನ್ನು ತೀವ್ರವಾಗಿ ವಿರೋಧಿಸಿದರು. ಸ್ವತಃ ಸಹೋದರನ ಪತ್ನಿ ಸತಿಗೆ ಬಲಿಯಾದುದನ್ನು ಕಂಡು, ಅದನ್ನು ತಡೆಯಲು ಯತ್ನಿಸಿದರು. ವ್ಯವಸ್ಥಿತವಾದ ಹೋರಾಟಕ್ಕೆ ಕಾಲಿಟ್ಟರು. ಕ್ರಿ.ಶ.೧೮೧೮ರಲ್ಲಿ "conference between an advocate for and on opponent of the practice of burning widows alive" ಎಂಬ ಗ್ರಂಥ ಬರೆದರು. ದಯಾನಂದ ಸರಸ್ವತಿಯವರೂ ಕೂಡ ಇಂಥ ಅನಿಷ್ಟ ಪದ್ಧತಿಯನ್ನು ತೊಡೆದು ಹಾಕಲು ಪ್ರಯತ್ನಿಸಿದರು. ಕ್ರಿ.ಶ.೧೮೨೯ರ 'ಸತಿಸಹಗಮನ ನಿಷೇಧ ಕಾಯ್ದೆ'ಯು ಸಾಂಪ್ರದಾಯಿಕ ಜನತೆಯನ್ನು ಸಿಟ್ಟಿಗೆಬ್ಬಿಸಿತು. ಅನಂತರ ಕ್ರಿ.ಶ.೧೮೩೨ರಲ್ಲಿ ಸತಿಪದ್ಧತಿ ಅಂತಿಮವಾಗಿ ಜಾರಿಗೆ ಬಂದಿತು. ಹೀಗಾಗಿ ಇಂಥ ಸುಧಾರಣಾ ಚಳುವಳಿಗಳ ಪೂರ್ವದಲ್ಲಿಯೇ ಸತಿಪದ್ಧತಿಯು ಇಳಿಮುಖವಾದುದನ್ನು ಗಮನಿಸಬಹುದು. ಕೆಳದಿಯ ರಾಣಿ ಕೊಲ್ಲೂರಮ್ಮಾಜಿ, ಕಳಲೆಯ ರಾಣಿ ಲಿಂಗಾಜಮ್ಮಣ್ಣಿ ಇವರನ್ನು ಹೊರತುಪಡಿಸಿದರೆ, ರಾಣಿಯರು ಸಹಗಮನ ಮಾಡಿದ ಉಲ್ಲೇಖಗಳಿಲ್ಲ. ಕಿತ್ತೂರು, ಸಿರಸಂಗಿ, ಬೆಳವಡಿ, ಹಾಗಲವಾಡಿ, ಗೆಜ್ಜಲಗಟ್ಟ, ಮಾನ್ವಿ, ಜವಳಗೆರೆಗಳಲ್ಲಿ ಸತಿಪದ್ಧತಿಯ ಒಂದೂ ಕುರುಹು ದೊರೆಯುವುದಿಲ್ಲ.

ಕರ್ನಾಟಕ ಲಿಂಗಾಯತ ರಾಣಿಯರ ಸಾಂಸ್ಕೃತಿಕ ಅಧ್ಯಯನದಲ್ಲಿ ಅವರ ರಾಜಕೀಯ ಅಧ್ಯಯನ ತುಂಬಾ ಮಹತ್ವದ್ದು. ಬಹುತೇಕ ರಾಣಿಯರು ರಾಜಕೀಯ ನಿಪುಣತೆಯನ್ನು ಮೈಗೂಡಿಸಿಕೊಂಡಿರುವುದು ತಿಳಿದುಬರುತ್ತದೆ. ಸಾಹಿತ್ಯ ಅಧ್ಯಯನದಲ್ಲಿ ಸ್ವತಃ ರಾಣಿಯರು ಬರೆದ ಸಾಹಿತ್ಯ ಕಡಿಮೆಯಿನಿಸಿದರೂ, ಅವರನ್ನು ಕುರಿತಾದ ಸಾಹಿತ್ಯದಲ್ಲಿ ಕಿತ್ತೂರ ಸಂಸ್ಥಾನ ಸಾಹಿತ್ಯ ರಾಣಿಯರ ಸಾಧನೆಯನ್ನು ಬಿಚ್ಚಿಡುತ್ತವೆ. ಅವರ ಜನನ, ಬಾಲ್ಯ, ಮದುವೆ ಹಾಗೂ ಮರಣದವರೆಗೆ ದಾಖಲಿಸುವ ಕೃತಿಗಳಿಗೆ ಚಾರಿತ್ರಿಕ ಮಹತ್ವವಿದೆ. ಧಾರ್ಮಿಕವಾಗಿ ಸರ್ವ ಜನಾಂಗಕ್ಕೆ ಆಶ್ರಯ ನೀಡುವುದು, ಪ್ರೋತ್ಸಾಹಿಸುವುದು ಆ ಕಾಲದ ರಾಜನೀತಿ. ಇದನ್ನು ರಾಣಿಯರೂ ಮುಂದುವರಿಸಿದ್ದಾರೆ. ಸಾಮಾಜಿಕವಾಗಿ ಗುಡಿಗುಂಡಾರ, ದೇವಾಲಯ, ಕೆರೆಬಾವಿಗಳನ್ನು ನಿರ್ಮಿಸಿದ ರಾಣಿಯರು ಸಾಂಘಿಕ ಜೀವನಕ್ಕೆ ಅಡಿಪಾಯ ಹಾಕಿದ್ದಾರೆ. 'ಕರ್ನಾಟಕ ಸಾಂಸ್ಕೃತಿಕ ರಾಣಿಯರ ಕೊಡುಗೆ' ಕುರಿತು ಪ್ರತ್ಯೇಕ ಅಧ್ಯಯನಕ್ಕೆ ಇವರ ಬದುಕು ಆಕರವಾಗಬಲ್ಲದೆಂಬುದನ್ನು ಹೇಳಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಮುಳಗುಂದ ಚ.ವಿ., **ಮಾತೋಶ್ರೀ**, ೨೯೮೬, ಪು.೧೬೭

೨. ಕಲಬುರ್ಗಿ ಎಂ.ಎಂ., **ಕರ್ನಾಟಕ ಕೃಫಿಯತ್ತುಗಳು**, ೧೯೯೪, ಪು.೧೨೦

೩. ಶಾಮಾಶಾಸ್ತ್ರಿ ಆರ್., ಕೆಳದಿ ನೃಪವಿಜಯ-ಲಿಂಗಣ್ಣಕವಿ, ೧೯೭೩, ಪು.೧೪೦

೪. ಚಟ್ನೀಸ್ ಕೆ.ಎಸ್., **ಕೆಳದಿ ಪೊಲಿಟಿ**, ೧೯೭೪, ಪು.೨೦

೫. ಚೆನ್ನಕ್ಕ ಎಲಿಗಾರ, **ಬಂಕಾಪುರ ಶೋಧನ**, ೧೯೯೦, ಪು.೩೭

೬. ಸೂರ್ಯನಾಥ್ ಕಾಮತ್, **ಕರ್ನಾಟಕ ಸಂಕ್ಷಿಪ್ತ ಇತಿಹಾಸ**, ೧೯೯೯, ಪು.೨೧೪

೭. **ವೀರರಾಣಿ ಮಲ್ಲಮ್ಮ ಬೆಳವಡಿ**, ೩ನೇ ಸ್ಮರಣ ಸಂಚಿಕೆ, ೧೯೭೮-೧೯೭೮, ಪು.೩೩

೮. **ಗೆಝೆಟಿಯರ್ ಆಫ್ ಇಂಡಿಯಾ**, ಕರ್ನಾಟಕ ರಾಜ್ಯ, ಬೆಳಗಾಂ ಜಿಲ್ಲೆ, ೧೯೮೭, ಪು.೮೬೧

೯. ಶ್ರೀನಿವಾಸ ಶೇಷೋ, ಚಟ್ನೀಸ್, ಎಸ್.ಕೆ.ಶಿವಾಜಿ, **ಮಲ್ಲಮ್ಮಾಜಿ ಸಮರೋತ್ಸವ**, ೧೯೯೩, ಪು.೨೬

೧೦. ಅದೇ, ಪು.೨೭

೧೧. ಚೆನ್ನಕ್ಕ ಪಾವಟೆ, **ಕರ್ನಾಟಕ ಶಾಸನೋಕ್ತ ಮಹಿಳೆ**, ೨೦೦೭-೦೮

೧೨. ಶ್ರೀನಿವಾಸ ಶೇಷೋ, ಚಟ್ನಿಸ್ ಎನ್.ಕೆ., **ಪೂರ್ವೋಕ್ತ**, ಪು.೨೯.

೧೩. ಮುಳಗುಂದ ಚ.ವಿ., **ಪೂರ್ವೋಕ್ತ**, ಪು.೨೨೩

೧೪. ವಿರೂಪಾಕ್ಷ ಬಡಿಗೇರ, **ಶಿರಸಂಗಿ ಸಂಸ್ಥಾನ: ಒಂದು ಅಧ್ಯಯನ**, ೧೯೮೮, ಪು.೨೫

೧೫. ಕಲಬುರ್ಗಿ ಎಂ.ಎಂ., **ಸಾರಂಗಶ್ರೀ**, ೧೯೯೫, ಪು.೪೦೧

೧೬. ಹನುಮಾಕ್ಷಿ ಗೋಗಿ, **ಅನುಶಾಸನ**, ೨೦೦೨, ಪು.೩೧೧

೧೭. ಅದೇ, ಪು.೩೧೧

೧೮. ಯೋಗೀಶ್ವರಪ್ಪ ಡಿ.ಎನ್., **ಹಾಗಲವಾಡಿನಾಯಕರು**, ೧೯೯೯, ಪು.೪೬

೧೯. ಶಿವಣ್ಣ ಕೆ.ಎಸ್., **ಕಳಲೆ ಮನೆತನದ ವೀರಶೈವ ದಳವಾಯಿಗಳು**, ೧೯೯೪, ಪು.೨೯

೨೦. **ಇತಿಹಾಸ ದರ್ಶನ**, ಸಂ.೧೨, ೧೯೯೭, ಪು.೧೦೯

೨೧. ಮಳವಂಕಿ ಕೆ.ಆರ್., **ಸಂಸ್ಥಾನಿಕರ ಐತಿಹಾಸಿಕ ಸಾಹಿತ್ಯ**, ೨೦೦೭, ಪು.೬೪

೨೨. ರವೀಂದ್ರನಾಥ ಕೆ., **ಚರಿತ್ರೆ-ಚಾರಿತ್ರ್ಯ**, ೨೦೦೮, ಪು.೮೩

೨೩. ಸದಾಶಿವ ಒಡೆಯರ, **ರಾಣಿ ಚೆನ್ನಮ್ಮ**, ೩ನೇ ಮುದ್ರಣ, ೧೯೯೬, ಪು.೧೪

೨೪. ಕಲಬುರ್ಗಿ ಎಂ.ಎಂ., **ಪೂರ್ವೋಕ್ತ**, ೧೯೯೪, ಪು.೩೨೧

೨೫. ಹಾಲಪ್ಪ ಗ.ಸ., ಕೃಷ್ಣರಾವ್ ಎಂ.ವಿ., **ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ**, ಸಂ.೧, ೧೯೬೨, ಪು.೧೪೬

೨೬. ಹಾಲಪ್ಪ ಗ.ಸ., **ಭಾರತ ಸ್ವತಂತ್ರದ ಬೆಳ್ಳಿಚುಕ್ಕಿ**, ೧೯೬೭, ಪು.೭೦

೨೭. ಮೂಗಿ ದೊಡ್ಡಬಾವೆಪ್ಪ, **ಕಿತ್ತೂರ ಕಾಳಗ**, ೧೯೫೫, ಪು.೩೨.

೨೮. ಅದೇ, ಪು.೩೫,

೨೯. ಕೃಷ್ಣಮೂರ್ತಿ ಪಿ.ವಿ., **ಸುಗಟೂರು ವೀರಶೈವ ಅರಸು ಮನೆತನ**, ೧೯೯೪, ಪು.೨೦

೩೦. ಶಾಶ್ವತಸ್ವಾಮಿ ಮುಕ್ಕುಂಡಿಮಠ, **ಲಿಂಗಾಯತ ನಾಡಗೌಡ ಮನೆತನಗಳು: ರಾಣಿಯರು**, ೨೦೦೮, ಪು.೩೩

೩೧. ಕೃಷ್ಣಮೂರ್ತಿ ಪಿ.ವಿ., **ಪೂರ್ವೋಕ್ತ**, ಪು.೩೧

೩೨. ಶಾಶ್ವತಸ್ವಾಮಿ ಮುಕ್ಕುಂಡಿಮಠ,, **ಪೂರ್ವೋಕ್ತ**, ಪು.೭

೩೩. ಅದೇ, ಪು.೩೩

೩೪. ಕಲಬುರ್ಗಿ ಎಂ.ಎಂ., **ಕರ್ನಾಟಕ ಕೈಫಿಯತ್ತುಗಳು**, ೧೯೯೪, ಪು.೪೫೮

೩೫. ಪಾಟೀಲ ಎಸ್.ಸಿ., **ವೀರಶೈವ ಹಂಡೆ ವಜೀರ ಜನಾಂಗದ ಪರಿಚಯ**, ೨೦೦೪, ಪು.೧೭

೩೬. ಚಿದಾನಂದ ಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ೪ನೇ ಮುದ್ರಣ, ೨೦೦೮, ಪು.೨೬೩

೩೭. ಮುಳಗುಂದ ಚ.ವಿ., **ಪೂರ್ವೋಕ್ತ**, ೧೯೮೬, ಪು.೧೬೭

೩೮. ವಸಂತಮಾಧವ ಕೆ.ಜಿ., **ಶರಣ ಸಾಹಿತ್ಯ**, ಪು.೧೨

೩೯. ಷೇಕ್ ಅಲಿ, **ಕರ್ನಾಟಕ ಚರಿತ್ರೆ**, ಸಂ.೨, ೧೯೯೭, ಪು.೨೦೦

೪೦. ಚೆನ್ನಸ್ವಾಮಿ ಸೋಸಲೆ, **ಸಾಮ್ರಾಜ್ಯ ಮತ್ತು ಸಂಸ್ಥಾನ**, ೨೦೦೪, ಪು.೧೮೪

೪೧. ಮರುಳಯ್ಯ ಸಾ.ಶಿ., **ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ**, ೧೯೮೦, ಪು.೪೬

೪೨. ಮುಳಗುಂದ ಚ.ವಿ., **ಪೂರ್ವೋಕ್ತ**, ೧೯೮೬, ಪು.೨೦೩

೪೩. ರಾಮಭಟ್ಟ ಬಿ.ಎಸ್., **ಶಿವಮೊಗ್ಗ ಜಿಲ್ಲೆ ಇತಿಹಾಸ ಮತ್ತು ಸಂಸ್ಕೃತಿ**, ೨೦೦೧, ಪು.೭೧

೪೪. ಶಾಸ್ತ್ರಿ ಬಿ.ಎಸ್., **ಕೆಳದಿ ಅರಸರು ಮತ್ತು ಪೋರ್ಚುಗೀಸರು**, ೧೯೭೨, ಪು.೧೩೧

೪೫. ಶಿವಣ್ಣ ಕೆ.ಎಸ್., ಕಳಲೆ ಮನೆತನದ ವೀರಶೈವ, ದಳವಾಯಿಗಳು, ೧೯೯೪, ಪು.೧೧೮

೪೬. ಕ.ಸಾ.ಪ., ಕನ್ನಡ ನಿಘಂಟು ಸಂ.೮, ೧೯೯೫, ಪು.೮೩೩೨

೪೭. ಶಾಮಾಶಾಸ್ತ್ರಿ ಆರ್., ಕೆಳದಿ ನೃಪವಿಜಯ, ೧೯೮೩, ಪು.೬, ಪ್ರಥಮಾಶ್ವಾಸ.

೪೮. ಲಕ್ಷ್ಮಣ ತೆಲಗಾವಿ, ಕರ್ನಾಟಕ ಪಾಳೇಗಾರರ ನ್ಯಾಯಾಡಳಿತ, ೨೦೦೮, ಪು.೧೯೫

೪೯. ಅದೇ, ಪು.೨೦೦

೫೦. ಕಲಬುರ್ಗಿ ಎಂ.ಎಂ., ಸುಂದರ ಅ., ಸ್ವಾದಿ ಅರಸು ಮನೆತನ, ೧೯೯೫, ಪು.೭೦

೫೧. ಮುಳಗುಂದ ಚ.ವಿ., ಪೂರ್ವೋಕ್ತ, ೧೯೮೬, ಪು.೨೧೯.

೫೨. ಕ.ಸಾ.ಪ, ಕನ್ನಡ ನಿಘಂಟು, ಸಂ.೩, ೧೯೭೭, ಪು.೨೬೬೨

೫೩. ವಿರೂಪಾಕ್ಷ ಬಡಿಗೇರ, ಪೂರ್ವೋಕ್ತ, ೧೯೮೮, ಪು.೨೯

೫೪. ಕಲಬುರ್ಗಿ ಎಂ.ಎಂ., ರಘುನಾಥ ಭಟ್ ಎಚ್.ಆರ್., ಬಿಳಗಿ ಅರಸುಮನೆತನ, ೧೯೯೫, ಪು.೫೩

೫೫. ಬೇಲಿ ಪಂಡಿತೆ ಸೀತಮ್ಮ, ಕೆಳದಿ ರಾಣಿ ಚೆನ್ನಮ್ಮಾಜಿ, ೧೯೬೩, ಪು.೫೫

೫೬. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೨ನೇ ಮುದ್ರಣ, ೧೯೭೪, ಪು.೧೭೭

೫೭. ಬೌರಿಂಗ್ ಲೆವಿನ್ ಬಿ., ಹೈದರಲಿ ಆ್ಯಂಡ್ ಟಿಪ್ಪುಸುಲ್ತಾನ್ ಆ್ಯಂಡ್ ಡಿ ದಿ ಸ್ಟ್ರಗಲ್ ವಿತ್ ದಿ ಮುಸಲ್ಮಾನ್ ಪಾವರ್ಸ್ ಆಫ್ ದಿ ಸೌತ್, ೨೦೦೩, ಪು.೩೭

೫೮. ಸಣ್ಣಯ್ಯ ಬಿ.ಎಸ್., ದೇವಚಂದ್ರನ ರಾಜಾವಳಿ ಕಥಾಸಾರ, ೧೯೮೮, ಪು.೩೫೩

೫೯. ಕಿತ್ತೂರು ನಾಡಿನ ಇತಿಹಾಸ ಮತ್ತು ಸಂಸ್ಕೃತಿ ಏಳು ಉಪನ್ಯಾಸಗಳು, ೨೦೦೪, ಪು.೧೧೭

೬೦. ಹಾಲಪ್ಪ ಗ.ಸ., ಕೃಷ್ಣರಾವ್ ಎಂ.ವಿ., ಪೂರ್ವೋಕ್ತ, ಪು.೧೨೫

೬೧. ಅದೇ, ಪು.೧೨೫

೬೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೪ನೇ ಮುದ್ರಣ, ೨೦೦೮, ಪು.೩೬೦

೬೩. ಅದೇ, ಪು.೩೬೦

೬೪. ಶಾಮಾಶಾಸ್ತ್ರಿ ಆರ್., ಕೆಳದಿ ನೃಪವಿಜಯ, ೧೯೭೩, ಪು.೧೧೬

೬೫. ವಿರೂಪಾಕ್ಷ ಬಡಿಗೇರ, ಸಿರಸಂಗಿ ಸಂಸ್ಥಾನ: ಒಂದು ಅಧ್ಯಯನ, ೧೯೮೮, ಪು.೮೬

೬೬. ಮರುಳಯ್ಯ ಸಾ.ಶಿ., **ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ**, ೧೯೮೦, ಪು.೩

೬೭. ಅದೇ, ಪು.೪೬

೬೮. ಶಿವಾನುಭವ ಸಂ.೯, ಸಂ.೫, ಬಿಜಾಪುರ, ೧೯೩೫, ಪು.೧೩

೬೯. ಕಲಬುರ್ಗಿ ಎಂ.ಎಂ., ಬಸವರಾಜು ಕೆ.ಆರ್., ಪರಶಿವಮೂರ್ತಿ ಎಸ್., **ಮಹಾನಾಡ ಪ್ರಭುಗಳು**, ೧೯೯೫, ಪು.೧೪೩

೭೦. ಕಲಬುರ್ಗಿ ಎಂ.ಎಂ., ರಘುನಾಥ ಭಟ್ ಎಚ್.ಆರ್., **ಪೂರ್ವೋಕ್ತ**, ೧೯೯೫, ಪಪು.೯

೭೧. ಶಾಮಾಶಾಸ್ತ್ರಿ ಆರ್., **ಕೆಳದಿ ನೃಪವಿಜಯ**-ಲಿಂಗಣ್ಣ ಕವಿ, ೧೯೭೩, ಪು.೧೬೭

೭೨. ಕಲಬುರ್ಗಿ ಎಂ.ಎಂ., ಚೆನ್ನಕ್ಕ ಪಾವಟೆ, **ಕಿತ್ತೂರು ಸಂಸ್ಥಾನ ಸಾಹಿತ್ಯ, ಭಾಗ-೧**, ೧೯೯೯, ಪು.೭೮

೭೩. ಅದೇ, ಪು.೯೭

೭೪. ಅದೇ, ಪು.೧೦೧

೭೫. ಅದೇ, ಪು.೧೩೯

೭೬. ಅದೇ, ಪು.೧೪೫

೭೭. ಅದೇ, ಪು.೧೪೯

೭೮. ಅದೇ ಪು.೧೫೯

೭೯. ಅದೇ, ಪು.೧೬೧

೮೦. ಅದೇ, ಪು.೧೬೩

೮೧. ಅದೇ, ಪು.೧೮೮

೮೨. ಅದೇ, ಪು.೧೮೯

೮೩. ಅದೇ, ಪು.೧೯೨

೮೪. ಅದೇ, ಪು.೧೯೩

೮೫. ಅದೇ, ಪು.೧೯೪

೮೬. ಅದೇ, ಪು.೨೦೧

೮೭. ಅದೇ, ಪು.೨೧೧

೮೮. ಅದೇ, ಪು.೨೧೨

೮೯. ಅದೇ, ಪು.೨೨೨

೯೦. ಅದೇ, ಪು.೨೨೪

೯೧. ಅದೇ, ಪು.೨೨೪

೯೨. ಅದೇ, ಪು.೨೨೬

೯೩. ಅದೇ, ಪು.೨೨೭

೯೪. ಅದೇ, ಪು.೨೩೬

೯೫. ಅದೇ, ಪು.೨೪೩

೯೬. ಅದೇ, ಪು.೨೫೧

೯೭. ಅದೇ, ಪು.೨೬೪

೯೮. ಅದೇ, ಪು.೨೬೭

೯೯. ಅದೇ, ಪು.೨೯೬

೧೦೦. ಕಲಬುರ್ಗಿ ಎಂ.ಎಂ., ಚೆನ್ನಕ್ಕ ಪಾವಟೆ, ಹತ್ತಿಮತ್ತೂರ ಅನ್ನಪೂರ್ಣ, ಕಿತ್ತೂರ ಸಂಸ್ಥಾನ ಸಾಹಿತ್ಯ, ಭಾಗ-೨, ೨೦೦೫, ಪು.೫೪

೧೦೧. ಅದೇ, ಪು.೭೮

೧೦೨. ಅದೇ, ಪು.೭೮

೧೦೩. ಕಲಬುರ್ಗಿ ಎಂ.ಎಂ., ರಘುನಾಥಭಟ್ ಎಚ್.ಆರ್., ಪೂರ್ವೋಕ್ತ, ೧೯೯೫, ಪು.೯

೧೦೪. ಸೂರ್ಯನಾಥ ಕಾಮತ್, ಭಾರತದ ಗೆಝೆಟಿಯರ್, ಕರ್ನಾಟಕ ರಾಜ್ಯ, ಭಾಗ ೨, ೧೯೮೫, ಪು.೪೮೧.

೧೦೫. ಕ.ಸಾ.ಪ.ಪತ್ರಿಕೆ, ಜುಲೈ ೧೯೧೭, ಪು.೧೩೭-೧೫೪

೧೦೬. ಶಾಮಾಶಾಸ್ತ್ರಿ ಆರ್. ಕೆಳದಿ ನೃಪವಿಜಯ ೧೯೭೩, ಪು.೧೯೨

೧೦೭. ಎ.ಕ.V ಮೈಸೂರ ಕ್ರಿ.ಶ.೧೮೧೫, ಪು.೬೪.

೧೦೮. ವಿರೂಪಾಕ್ಷ ಬಡಿಗೇರ, ಪೂರ್ವೋಕ್ತ, ೧೯೮೮, ಪು.೧೫೬

೧೦೯. ಮುಳಗುಂದ ಚ.ವಿ., ಪೂರ್ವೋಕ್ತ, ೧೯೮೬, ಪು.೧೩೩

೧೧೦. ಕಲಬುರ್ಗಿ ಎಂ.ಎಂ., ಮಹಾರಾಷ್ಟ್ರ ಕನ್ನಡ ಶಾಸನಗಳು, ೧೯೮೭, ಪು.೨೩

೧೧೧. ಶಾಮಾಶಾಸ್ತ್ರಿ ಆರ್., ಕೆಳದಿ ನೃಪವಿಜಯ, ೧೯೭೩, ಪು.೧೪೬

೧೧೨.ಚೆನ್ನಕ್ಕ ಪಾವಟೆ, ಪ್ರಾಚೀನ ಕರ್ನಾಟಕ ರಾಣಿಯರು, ೧೯೯೦, ಪು.೧೨೯

೧೧೩.ಎ.ಕ.ಸಂ.೧೩, ಪು.೩೦೬

೧೧೪.ಅದೇ, ಪು.೩೩೦

೧೧೫.ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., ಕೆಳದಿ ಸಂಸ್ಥಾನ: ಸಮಗ್ರ ಅಧ್ಯಯನ, ೧೯೯೪, ಪು.೧೦೪

೧೧೬.ಕೆಳದಿ ವೆಂಕಟೇಶ ಜೋಯಿಸ್, ಕೆಳದಿ ಶಾಸನಗಳ ಸಾಂಸ್ಕರತಿಕ ಅಧ್ಯಯನ, ೧೯೯೪, ಪು.೧೦೪

೧೧೭.ಶಿವರಾಜಪ್ಪ ಎಸ್., ಸದಾಶಿವಮೂರ್ತಿ ಎಸ್., ನಿರಂಜನ, ೨೦೦೦, ಪು.೬೯೦

೧೧೮.ಎ.ಕ.೧೩, ಪು.೩೧೨

೧೧೯.ಅದೇ, ಪು.೨೮೮

೧೨೦.ಶಾಮಾಶಾಸ್ತ್ರಿ ಆರ್., ಕೆಳದಿ ನೃಪವಿಜಯ, ೧೯೭೩, ಪು.೧೪೯

೧೨೧.ಮಲ್ಲೇಪುರಂ ಜಿ. ವೆಂಕಟೇಶ, ಶಿವತತ್ವ ರತ್ನಾಕರ, ೧೯೯೯, ಪು.೮೩

೧೨೨.ಯೋಗಿಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು, ೧೯೯೯, ಪು.೧೧೭

೧೨೩.ಕೃಷ್ಣಮೂರ್ತಿ ಪಿ.ವಿ., ಸುಗಟೂರು ವೀರಶೈವ ಮನೆತನ, ೧೯೯೪, ಪು.೯೯

೧೨೪.ಶ್ಯಾಮಲ ಸಿ.ಆರ್., ಪೂರ್ವ ಕರ್ನಾಟಕದ ಪಾಳೇಗಾರರು: ಒಂದು ಅಧ್ಯಯನ, ೨೦೦೮, ಪು.೧೩೧

೧೨೫.ಅದೇ, ಪು.೧೧೧

೧೨೬.ಶಿವರಾಜಪ್ಪ ಎಸ್., ಸದಾಶಿವಮೂರ್ತಿ ಎಸ್., ಪೂರ್ವೋಕ್ತ, ೨೦೦೦, ಪು.೬೯೬

೧೨೭.ಹಾಲಪ್ಪ ಗ.ಸ., ಕೃಷ್ಣರಾವ್ ಎಂ.ವಿ., ಪೂರ್ವೋಕ್ತ, ೧೯೭೨, ಪು.೧೩೦

೧೨೮.ಮುಳಗುಂದ ಚ.ವಿ., ಪೂರ್ವೋಕ್ತ, ೧೯೮೬, ಪು.೨೦೭

೧೨೯.ನಾಗೇಗೌಡ ಎಚ್.ಎಲ್., ಪ್ರವಾಸಿಕಂಡ ಇಂಡಿಯಾ, ಸಂ.೭, ೧೯೮೩, ಪು.೨೦೬

೧೩೦.ಅದೇ, ಪು.೪೨೦

೧೩೧.ಶಿವರಾಜಪ್ಪ ಎಸ್., ಸದಾಶಿವಮೂರ್ತಿ ಎಸ್., ಪೂರ್ವೋಕ್ತ, ೨೦೦೦, ಪು.೬೯೧

೧೩೨.ಕಲಬುರ್ಗಿ ಎಂ.ಎಂ., ಸುಂದರ ಅ., ಸ್ವಾದಿ ಅರಸುಮನೆತನ, ಪು.೪೮

೧೩೩.ಎಡ್ವರ್ಡ್ ಗ್ರೆ ಹಾವೆರ್ಸ್ ಜಿ, ದಿ ಟ್ರಾವೆಲ್ಸ್ ಆಫ್ ಪಿಯಾಟ್ರೊ ಡೆಲ್ಲಾವೆಲ್ಲಿ ಇನ್

**ಇಂಡಿಯಾ**, ೧೯೯೧, ಪು.೨೨೩

೧೩೪. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ೨೦೦೮, ಪು.೧೮೨

೧೩೫. ಕಲಬುರ್ಗಿ ಎಂ.ಎಂ., ರಾಜಭಟ್ಟ ಬಿ.ಎಸ್., **ಪೂರ್ವೋಕ್ತ**, ೧೯೯೪, ಪು.೨೩೫

೧೩೬. ರವೀಂದ್ರನಾಥ ಕೆ., **ಕರ್ನಾಟಕ ಮಠಗಳು ಮತ್ತು ಕನ್ನಡ ಸಾಹಿತ್ಯ**, ೨೦೦೭, ಪು.೧೪

೧೩೭. ಅದೇ, ಪು.೧೬

೧೩೮. ಎ.ಕ.ಸಂ.೧೩, ಪು.೮೬

೧೩೯. ಕೆಳದಿ ವೆಂಕಟೇಶ ಜೋಯಿಸ, **ಪೂರ್ವೋಕ್ತ**, ೧೯೯೬, ಪು.೯೮

೧೪೦. ಎ.ಕ.VIII ಸಾಗರ ಕ್ರಿ.ಶ.೧೬೭೪, ಪು.೫೩

೧೪೧. **ಮೈಸೂರು ಪುರಾತತ್ವ ವರದಿ**, ೧೯೪೫, ಪು.೮೯

೧೪೨. ವಸಂತಮಾಧವ ಕೆ.ಜಿ., **ರಿಲಿಜನ್ಸ್ ಇನ್ ಕೋಸ್ಟಲ್ ಕರ್ನಾಟಕ**, ೧೭೬೩, ಪು.೧೫೦೦

೧೪೩. ಚೆನ್ನಕ್ಕ ಪಾವಟೆ, **ರಾಣಿ ಬೆಳವಡಿ ಮಲ್ಲಮ್ಮ**, ೨೦೧೦, ಪು.೫೫

೧೪೪. ಮುಳಗುಮದ ಚ.ವಿ., **ಪೂರ್ವೋಕ್ತ**, ೧೯೮೬, ಪು.೨೧೯

೧೪೫. ಬಡಿಗೇರ ವಿರೂಪಾಕ್ಷ, **ಪೂರ್ವೋಕ್ತ**, ೧೯೮೮, ಪು.೩೭

೧೪೬. ಅದೇ, ಪು.೭೧

೧೪೭. ಅದೇ, ಪು.೫೩

೧೪೮. ಶಾಶ್ವತಸ್ವಾಮಿ ಮುಕ್ಕುಂದಿ ಮಠ, **ಪೂರ್ವೋಕ್ತ**, ೨೦೦೮, ಪು.೧೨

೧೪೯. ಶಿವಣ್ಣ ಕೆ.ಎಸ್., **ಕಳಲೆ ವೀರಶೈವ ದಳವಾಯಿಗಳು**, ೧೯೯೪, ಪು.೨೨೧

೧೫೦. ಅದೇ, ಪು.೨೨೧

೧೫೧. ಕೃಷ್ಣರಾವ್ ಎಂ.ವಿ., ಹಾಲಪ್ಪ ಗ.ಸ., **ಪೂರ್ವೋಕ್ತ**, ೧೯೬೨, ಪು.೧೩೦

೧೫೨. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ೨೦೦೮, ಪು.೧೯೨

೧೫೩. ಅದೇ, ಪು.೧೯೩

೧೫೪. ಕೆಳದಿ ವೆಂಕಟೇಶ ಜೋಯಿಸ, **ಪೂರ್ವೋಕ್ತ**, ೧೯೯೧, ಪು.೨೮೨

೧೫೫. ಅದೇ, ಪು.೨೮೩

೧೫೬. ಅದೇ, ಪು.೩೦೧

೧೫೭. ಅದೇ, ಪು.೩೦೭

೧೫೮. ಅದೇ, ಪು.೪೧೨

೧೫೯. ಕಲಬುರ್ಗಿ ಎಂ.ಎಂ., ಮಾರ್ಗ ಸಂ.೩, ೨೦೧೦, ಪು.೧೦೯

೧೬೦. ಚನ್ನಬಸವಯ್ಯ ಹಿರೇಮಠ, ಕುರಗೋಡ ಸಿಂಧರು: ಒಂದು ಅಧ್ಯಯನ, ೧೯೯೫, ಪು.೫೨

೧೬೧. ಮರುಳಯ್ಯ ಸಾ.ಶಿ., ಪೂರ್ವೋಕ್ತ, ೧೯೮೦, ಪು.೪೬

೧೬೨. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗೆಝೆಟಿಯರ್, ಭಾಗ ೩, ೧೯೮೫, ಪು.೪೮೦

೧೬೩. ಶಾಸ್ತ್ರಿ ಬಿ.ಎಸ್., ಕೆಳದಿ ಅರಸರು ಮತ್ತು ಪೋರ್ಚುಗೀಸರು, ಪು.೧೨೩

೧೬೪. ಕಲಬುರ್ಗಿ ಎಂ.ಎಂ., ಸುಂದರ ಅ., ಪೂರ್ವೋಕ್ತ, ೧೯೯೫, ಪು.೬

೧೬೫. ಎ.ಕ.VIII, ತೀರ್ಥಹಳ್ಳಿ, ನಂ.೭೦

೧೬೬. ಎ.ಕ.VIII, ಹಾಸನಜಿಲ್ಲೆ, ೧೯೮೪, ಪು.೧

೧೬೭. ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., ಪೂರ್ವೋಕ್ತ, ೧೯೯೪, ಪು.೩೪೩

೧೬೮. ಕಲಬುರ್ಗಿ ಎಂ.ಎಂ., ಪೂರ್ವೋಕ್ತ, ೧೯೯೪, ಪು.೭೯

೧೬೯. ಕಲಬುರ್ಗಿ, ಎಂ.ಎಂ., ಸುಂದರ ಅ., ಪೂರ್ವೋಕ್ತ, ೧೯೯೫, ಪು.೧೧೭

೧೭೦. ಅದೇ, ಪು.೧೦೩

೧೭೧. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ೨೦೦೮, ಪು.೪೯೦

೧೭೨. ಕಲಬುರ್ಗಿ ಎಂ.ಎಂ., ಸುಂದರ ಅ., ಪೂರ್ವೋಕ್ತ, ೧೯೯೫, ಪು.೨೯

೧೭೩. ವಿರೂಪಾಕ್ಷ ಬಡಿಗೇರ, ಪೂರ್ವೋಕ್ತ, ೧೯೮೮, ಪು.೮೫

೧೭೪. ಕಲಬುರ್ಗಿ ಎಂ.ಎಂ., ರಘುನಾಥಭಟ್ ಎಚ್.ಆರ್., ಪೂರ್ವೋಕ್ತ, ೧೯೯೫, ಪು.೧೧

೧೭೫. ಅದೇ, ಪು.೪೬

೧೭೬. ಸಣ್ಣಯ್ಯ ಬಿ.ಎಸ್., ದೇವಚಂದ್ರನ, ರಾಜಾವಳಿ ಕಥಾಸಾರ, ೧೯೮೮, ಪು.೩೫೩

೧೭೭. ಸೂರ್ಯನಾಥ ಕಾಮತ್, ಕೊಡಗಿನ ವಿಚಾರ ಸಂಕಿರಣ, ೧೯೮೦, ಪು.೪೦

೧೭೮. ಕೃಷ್ಣಯ್ಯ ಡಿ.ಎಸ್., ಕೊಡಗಿನ ಇತಿಹಾಸ, ೧೯೯೫, ಪು.೩೨೯

೧೭೯. ಶ್ರೀಕಂಠಶಾಸ್ತ್ರಿ ಎಸ್., ಸಂಶೋಧನ ಲೇಖನಗಳು, ೧೯೭೫, ಪು.೧೫೦

೧೮೦. ಸಣ್ಣಯ್ಯ ಬಿ.ಎಸ್., ಸಂಶೋಧನ ಲೇಖನಗಳು, ೧೯೭೫, ಪು.೧೫೦

೧೮೧. ಅದೇ, ಪು.

೧೮೨. ಅದೇ, ಪು.೩೫೩

೧೮೩. ಶೇಠ ಬಿ.ಎಸ್., **ಕರ್ನಾಟಕದಲ್ಲಿ ಸತಿಪದ್ಧತಿ,** ೧೯೯೧, ಪು.೧೯

೧೮೪. ಚೆನ್ನಕ್ಕ ಪಾವಟೆ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,** ಪು.೨೪೬

೧೮೫. ಚಿದಾನಂದಮೂರ್ತಿ ಎಂ., **ವೀರಗಲ್ಲುಗಳು ಮತ್ತು ಮಾಸ್ತಿ ಕಲ್ಲುಗಳು,** ೧೯೮೪, ಪು.೩೮

೧೮೬. ಶಿವಣ್ಣ ಕೆ.ಎಸ್., **ಕಳಲೆ ವೀರಶೈವ ದಳವಾಯಿಗಳು,** ೧೯೯೪, ಪು.೩೦

೧೮೭. ಎಡ್ವರ್ಡ್ ಗ್ರೆ ಹಾವೆರ್ಸ್ ಜಿ. **ಪೂರ್ವೋಕ್ತ,** ೧೯೯೧, ಪು.೨೬೬

೧೮೮. ಚಿದಾನಂದಮೂರ್ತಿ ಎಂ., **ಪೂರ್ವೋಕ್ತ,** ೧೯೮೪, ಪು.೪೬

# ಅಧ್ಯಾಯ ಐದು

# ಸಮಾರೋಪ

'ಕರ್ನಾಟಕ ಲಿಂಗಾಯತ ರಾಣಿಯರು: ಒಂದು ಅಧ್ಯಯನ' ಎಂಬ ಮಹಾಪ್ರಬಂಧದಲ್ಲಿ ರಾಣಿಯರ ಚರಿತ್ರೆಯನ್ನು ಮತ್ತು ಅವರ ಬದುಕಿನ ಗುಣವಿಶೇಷತೆಯನ್ನು ಸಂಶೋಧನಾತ್ಮಕವಾಗಿ ನಿರ್ವಚಿಸುವ ಪ್ರಯತ್ನ ಮಾಡಲಾಗಿದೆ. ಯಶಸ್ವಿ ಪುರುಷನ ಹಿಂದೆ ಒಬ್ಬ ಮಹಿಳೆಯ ಪಾತ್ರ ಇರುತ್ತದೆ. ಅದೇ ರೀತಿ ರಾಜರ ಯಶಸ್ವಿಗೆ ರಾಣಿಯರೂ ಭಾಗಿಗಳಾಗಿದ್ದಾರೆ. ಸಪ್ತಕರ್ತವ್ಯಗಳಲ್ಲಿ ಒಂದಾದ ರಾಣಿಯರ ಪೋಷಣೆ, ಪ್ರೇರಣೆ, ಅವರ ಕರ್ತವ್ಯಪ್ರಜ್ಞೆಯ ಭಾಗವಾಗಿರುವದನ್ನು ಗಮನಿಸಬಹುದು.ಅಂದರೆ ಚಕ್ರವರ್ತಿಗಳಿಗೆ, ಸಾಮಂತರಿಗೆ, ಪಾಳೇಗಾರರಿಗೆ ಸದಾಕಾಲ ಬೆಂಗಾವಲಾಗಿ ನಿಂತ ಕರ್ನಾಟಕ ರಾಣಿಯರ ಬದುಕು ಚಾರಿತ್ರಿಕವಾದುದು. ಕಾಂತಾಸಂಹಿತೆಯಾದ ಮಹಿಳೆ ಹುಟ್ಟಿದ ಮಕ್ಕಳಿಗೆ ಮಾರ್ಗದರ್ಶನ ಮಾಡುವ ಗುರುವಾಗಿ ಕಾರ್ಯ ನಿರ್ವಹಿಸಿರುವುದನ್ನು ಕಾಣಬಹುದು. ಇದಕ್ಕೆ ಉತ್ತಮ ನಿದರ್ಶನ 'ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ನಿರ್ಮಿಸು' ಎಂದು ಮುಂತಾಗಿ ಸಾಮಾಜಿಕ ಬದುಕಿಗೆ ಲಕ್ಷ್ಮೀಧರಾಮಾತ್ಯನನ್ನು ಅಣಿಗೊಳಿಸುವ ಪ್ರಯತ್ನದ ಹಿಂದೆ ಸಿಂಗಲೆಯ ಸಾಮಾಜಿಕ ಬದುಕಿನ ಹೊಣೆಗಾರಿಕೆಯನ್ನು ಗುರುತಿಸಬಹುದಾಗಿದೆ. ಇಂಥ ಕೌಟುಂಬಿಕ ಹಾಗೂ ಸಾಮಾಜಿಕ ಬದ್ಧತೆಯಿಂದ ಬದುಕನ್ನು ಸಾಗಿಸಿದ ಕರ್ನಾಟಕ ಲಿಂಗಾಯತ ರಾಣಿಯರನ್ನು ಕುರಿತಾದ ಮಹಾಪ್ರಬಂಧ ಇದಾಗಿದೆ. ಈ ಅಧ್ಯಯನದ ಫಲಿತಗಳನ್ನು ಈ ಕೆಳಗಿನಂತೆ ಕ್ರೂಢೀಕರಿಸಿ ಕೊಡಲಾಗಿದೆ.

೧. ಒಂದು ನಾಡಿನ ರಾಜವಂಶೀಯ ಇತಿಹಾಸದಲ್ಲಿ ರಾಜರಿಗೆ ದೊರೆಯುವ ಮಹತ್ವ, ಅವರ ಸಾಧನೆ ಮತ್ತು ಕೊಡುಗೆಗಳ ಹಿಂದೆ ಆ ಮನೆತನದ ರಾಣಿವಾಸದವರ ಕೊಡುಗೆಯು ಮಹತ್ವದ್ದಾಗಿರುತ್ತದೆ. ಬಹು ಪ್ರಾಚೀನ ಕಾಲದಿಂದಲೂ ಪುರುಷಪ್ರಧಾನ ಸಮಾಜದಲ್ಲಿ ಸ್ತ್ರೀಪ್ರಾಧಾನ್ಯತೆಯನ್ನು ಗುರುತಿಸುವ, ಕಂಡುಕೊಳ್ಳುವ ಪ್ರಯತ್ನ ನಡೆದಿದೆ. ಮಹಾಭಾರತದ ದ್ರೌಪದಿಯ ಶ್ರೀಮುಡಿ ಮಹಾಭಾರತಕ್ಕಾದಿ ಯಾಯಿತು. ಅಂದರೆ

ರಾಜ್ಯ, ರಾಷ್ಟ್ರ, ಕೋಶ, ಪ್ರದೇಶ ಕಳೆದುಕೊಂಡಾಗಲೂ ವಿಚಲಿತರಾಗದ ಅರಸರು ತಮ್ಮ ಅರಸಿಯರ ವಿಚಾರಕ್ಕೆ ಕೈ ಹಾಕಿದಾಗ ತೆಗೆದುಕೊಳ್ಳುವ ನಿಲುವುಗಳು ಬೇರೆಯೇ ಆಗಿರುತ್ತವೆ. ಇದು ಇತಿಹಾಸದುದ್ದಕ್ಕೂ ನಡೆದುಕೊಂಡು ಬಂದ ಪ್ರಮೇಯವಾಗಿದೆ. ಅಂದರೆ ಸ್ತ್ರೀಸಂವೇದನೆ ಎನ್ನುವುದು ಯಾವ ಕಾಲಕ್ಕೂ ಪ್ರಚಲಿತದಲ್ಲಿ ಇದ್ದ ಪ್ರಧಾನ ಗುಣವಾಗಿದೆ. ಆದರೆ ಇತಿಹಾಸದ ರಚನೆಯಲ್ಲಿ ಇಂಥ ಪ್ರಧಾನ ಗುಣವನ್ನು ಗೌಣ ಮಾಡಿರುವುದು ನಮ್ಮ ಇತಿಹಾಸದ ವಿಪರ್ಯಾಸ ಎಂಬುದನ್ನು ಈ ಅಧ್ಯಯನ ನಿರೂಪಿಸಿದೆ.

೨. ಕರ್ನಾಟಕ ರಾಜಕೀಯ ಚರಿತ್ರೆಯನ್ನು ಅವಲೋಕಿಸಿದಾಗ ವಿಜಯನಗರ ಸಾಮ್ರಾಜ್ಯದ ಅವನತಿಯ ಕಾಲ ತುಂಬಾ ವಿಶಿಷ್ಟವಾಗಿ ಕಂಡುಬರುತ್ತದೆ. ಇಡೀ ದಕ್ಷಿಣಭಾರತವನ್ನೇ ನಿಯಂತ್ರಿಸಿದ ಆವರೆಗಿನ ಕರ್ನಾಟಕ ಸಾಮ್ರಾಜ್ಯಗಳ ಚರಿತ್ರೆ ವಿಜಯನಗರೋತ್ತರ ಕಾಲದಲ್ಲಿ ಭಿನ್ನ ನೆಲೆಯಲ್ಲಿ ಚಾಚಿಕೊಳ್ಳುತ್ತದೆ. ಸಾಮ್ರಾಜ್ಯಗಳು ಸಾಮಂತ ಮತ್ತು ಸಂಸ್ಥಾನಗಳಾಗಿ ಒಡೆದು ನಿಂತವು. ಹೀಗೆ ಸಣ್ಣ–ಪುಟ್ಟ ಸಂಸ್ಥಾನಗಳಲ್ಲಿ ಕೆಳದಿ, ಕಿತ್ತೂರು, ಕುರಗೋಡು, ಬೆಳವಡ ಬಿಳಗಿ,ಕಳಲೆ, ಹಾಗಲವಾಡಿ, ಹಾಲೇರಿ, ಬಿಜ್ಜಾವರ, ಸುಗಟೂರು ಮುಂತಾದವುಗಳು. ಈ ಸಾಮಂತರ ಅಡಿಯೊಳಗೆ ಪಾಳೇಗಾರರಾಗಿ, ದೇಸಾಯಿಗಳಾಗಿ, ನಾಡದೇಸಾಯಿಗಳಾಗಿ ಅದೆಷ್ಟೋ ಮನೆತನಗಳು ಕರ್ನಾಟಕದಲ್ಲಿ ತಲೆ ಎತ್ತಿದವು. ಇವುಗಳಲ್ಲಿ ಹಂಡೆಪಾಳೇಗಾರರು, ಗೆಜ್ಜಲಗಟ್ಟೆ ನಾಡಗೌಡ ಮನೆತನ, ಕೆಂಚನಗುಡ್ಡದ ನಾಡಗೌಡ ಮನೆತನ ಮುಂತಾದವು ಪ್ರಮುಖವಾದವು. ಇದರಿಂದ ಆಡಳಿತದ ಅನುಕೂಲತೆ, ಸ್ಥಳೀಯ ಭೌಗೋಳಿಕ ಅಭಿವೃದ್ಧಿಗಳ ಜೊತೆಗೆ ಕೇಂದ್ರೀಕೃತ ಸಾಮ್ರಾಜ್ಯಶಾಹಿ ವ್ಯವಸ್ಥೆ ಹಿಂದೆ ಸರಿದು ವಿಕೇಂದ್ರೀಕೃತ ಪ್ರಜಾಶಾಹಿ ಆಡಳಿತ ವ್ಯವಸ್ಥೆಗೆ ಅಡಿಪಾಯ ಹಾಕಿದಂತಾಯಿತು. ಇದರಿಂದ ಮಹಿಳೆಯರೂ ರಾಜ್ಯಪಾಲನೆಯ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತಾಯಿತು. ಈ ಹೊತ್ತಿಗೂ ಕೂಡ ಬ್ರಿಟಿಷ್ ಮಾದರಿಯನ್ನು ಅನುಸರಿಸಿ ಆಡಳಿತ ವ್ಯವಸ್ಥೆಯನ್ನು ರೂಪಿಸಿಕೊಂಡ ಗ್ರಾಮಮಟ್ಟದ ಗೌಡ, ಕುಲಕರ್ಣಿ, ತಳವಾರ ಹೀಗೆ ಪುರುಷರೇ ಅಧಿಕಾರಿಗಳಾಗಿ ಇದ್ದುದನ್ನು ನಮ್ಮ ಚರಿತ್ರೆಯಿಂದ ತಿಳಿದಿದ್ದೇವೆ. ಇತ್ತೀಚಿನ ಪ್ರಜಾಪ್ರಭುತ್ವದಲ್ಲಿ ಗ್ರಾಮಪಂಚಾಯಿತಿಯ ಅಧ್ಯಕ್ಷೆಯಾಗಿ ಒಬ್ಬ ಮಹಿಳೆ ಅದರಲ್ಲೂ ದಲಿತ ಮಹಿಳೆ ಅಧಿಕಾರಕ್ಕೆ ಬರುವುದು ಸಂವಿಧಾನದಲ್ಲಿ ಮಹಿಳೆಯರಿಗೆ ಕೊಟ್ಟ ಪ್ರಾಶಸ್ತ್ಯವೆನಿಸಿದೆ. ಹಾಗೆಯೇ ಸಾಮ್ರಾಜ್ಯಶಾಹಿ ಕಾಲದಲ್ಲಿ ಅಸ್ತಿತ್ವವಿಲ್ಲದ ಅದೆಷ್ಟೋ ರಾಣಿಯರು ೧೬–

೧೭ನೆಯ ಶತಮಾನದ ಸಂಸ್ಥಾನಿಕರ ಯುಗದಲ್ಲಿ ರಾಜ್ಯಭಾರ ಮಾಡಿದ್ದು, ಮಕ್ಕಳನ್ನು ದತ್ತು ಪಡೆದದ್ದು, ಸಂಸ್ಥಾನದ ಸಮಗ್ರ ಅಭಿವೃದ್ಧಿಗೆ ತಮ್ಮ ಬದುಕನ್ನು ಮೀಸಲಿರಿಸಿದ್ದು, ಇತಿಹಾಸದ ದೃಷ್ಟಿಯಿಂದ ದಾಖಲಿಸಬೇಕಾದ ಸಂಗತಿ. ಆ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

೩. ಸಂಶೋಧನೆಯಲ್ಲಿ ಆಕರಗಳು ಪ್ರಧಾನ. ಒಂದು ಕಾಲಕ್ಕೆ ಆಕರಗಳ ಶೋಧವೇ ಸಂಶೋಧನೆ ಯಾಗಿತ್ತು. ಇತ್ತೀಚೆಗೆ ಆಕರಗಳನ್ನು ವಿಶ್ಲೇಷಿಸುವ ಮತ್ತು ವ್ಯಾಖ್ಯಾನಿಸುವ ಉಪಕ್ರಮಗಳಿಂದ ಸಂಶೋಧನೆ ವಿಮರ್ಶಾ ಸ್ವರೂಪವನ್ನು ಪಡೆದುಕೊಂಡಿದೆ. ಹೀಗಾಗಿ ಕರ್ನಾಟಕ ಲಿಂಗಾಯತ ರಾಣಿಯರು ಎಂಬ ಈ ಅಧ್ಯಯನ ಆಕರಗಳನ್ನು ವ್ಯಾಖ್ಯಾನಿಸುವ ಮೂಲಕ ಅವುಗಳ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚುವ ವಿಮರ್ಶಾ ಮಾದರಿಯನ್ನು ಅನುಸರಿಸಿದೆ. ರಾಣಿಯರನ್ನು ಕುರಿತ ಇದುವರೆಗಿನ ಆಕರಗಳಲ್ಲಿ ಕಾವ್ಯಪುರಾಣಗಳು, ಶಾಸನಗಳು, ಕಾಗದಪತ್ರಗಳಂಥ ದಾಖಲೆಗಳು, ಪ್ರವಾಸಿಗರ ವರದಿಗಳು, ಸ್ಮಾರಕಗಳು ಈಗಾಗಲೇಅಧ್ಯಯನಕಾರರಿಂದ ದಾಖಲಾಗಿವೆ. ಇವುಗಳ ಸಾಧಕ-ಬಾಧಕಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಇತಿಹಾಸದಲ್ಲಿ ರಾಣಿಯರ ಕುರಿತಾದ ಆಕರಗಳ ಪ್ರಮಾಣ ಮತ್ತು ಅವುಗಳ ಸ್ವರೂಪ, ವೈಶಿಷ್ಟ್ಯತೆಯನ್ನು ಈ ಅಧ್ಯಾಯದಲ್ಲಿ ಪರಾಮರ್ಶಿಸಲಾಗಿದೆ.

೪. ರಾಣಿಯರ ಕುರಿತು ಅಧ್ಯಯನ ಮಾಡುವಾಗ ಸೈದ್ಧಾಂತಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನ ವನ್ನು ಮುಖ್ಯವಾಗಿ ಈ ಮಹಾಪ್ರಬಂಧದಲ್ಲಿ ಒತ್ತು ಕೊಡಲಾಗಿದೆ. ಅಂದರೆ ನಮ್ಮ ಚರಿತ್ರೆಯ ನಿರೂಪಣೆಯಲ್ಲಿ ರಾಣಿಯರ ಸಹಭಾಗಿತ್ವ ಮತ್ತು ರಾಜ್ಯಾಧಿಕಾರದ ಸಂದರ್ಭ, ಇವುಗಳ ಜೊತೆಗೆ ಅವರ ಸಾಂಸ್ಕೃತಿಕ ಅನನ್ಯತೆಯ ದಾಖಲೀಕರಣ ಯಾವ ಪ್ರಮಾಣದಲ್ಲಿ ನಡೆದಿದೆಯೆಂಬುದು ಈ ಅಧ್ಯಯನದ ಆಶಯವಾಗಿದೆ.ಪುರುಷರಷ್ಟೇ ಸರಿಸಮಾನರಾಗಿ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ ಸಂಬಂಧವನ್ನು ಕಾಯ್ದುಕೊಂಡು ಆಡಳಿತಮಾಡಿದ ಕರ್ನಾಟಕ ಲಿಂಗಾಯತ ರಾಣಿಯರ ವಸ್ತುನಿಷ್ಠ ಚರಿತ್ರೆಯನ್ನು ಇಲ್ಲಿ ಕಟ್ಟಿಕೊಡಲಾಗಿದೆ.

೫. ಕೆಳದಿ, ಬಿಳಗಿ, ಸ್ವಾದಿ, ಕಿತ್ತೂರು, ಬೆಳವಡಿ, ಸಿರಸಂಗಿ, ಕುರುಗೋಡು, ಹಾಲೇರಿಯಂಥ ಪ್ರಮುಖ ಸಂಸ್ಥಾನಿಕ ರಾಣಿಯರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ರಾಣಿಯರು ಆಡಳಿತ ವಹಿಸಿಕೊಂಡ ಸಂದರ್ಭ ಎಂಥಹುದು? ಸಾಂಪ್ರದಾಯಿಕ ರಾಣಿಯರ ಸ್ವರೂಪ ಎಂಥದ್ದು? ಇತ್ಯಾದಿ ಸಮಸ್ಯೆಗಳಿಗೆ ಪ್ರಾಮಾಣಿಕ ಉತ್ತರ

ನೀಡುವ ಪ್ರಯತ್ನ ನಡೆದಿದೆ. ರಾಣಿಯರ ಮಿತಿಗಳಾವವು? ನಿರ್ದಿಷ್ಟ ಚೌಕಟ್ಟಿನಲ್ಲಿ ಸಾಮ್ರಾಜ್ಯದ ಒಡೆತನವನ್ನು ಪಡೆದರೂ ಕೂಡಾ ಆ ಒಡೆತನವನ್ನು ರಾಣಿಯರು ನಿರ್ವಹಿಸಿದ ಬಗೆ ಎಂಥರನ್ನು ರೋಚಕಗೊಳಿಸುತ್ತದೆ.' ತೊಟ್ಟಿಲು ತೂಗುವ ಕೈ ಇಡೀ ಜಗತ್ತನ್ನೇ ತೂಗಬಲ್ಲುದು' ಎಂಬ ಮಾತಿಗೆ ನಿದರ್ಶನವಾಗಿ ಕೆಳದಿ ರಾಣಿ ಚೆನ್ನಮ್ಮ, ವೀರಮ್ಮ, ಕಿತ್ತೂರಿನ ರಾಣಿ ಚೆನ್ನಮ್ಮ, ಮಲ್ಲಮ್ಮ, ರುದ್ರಮ್ಮ, ಬೆಳವಡಿಯ ರಾಣಿ ಮಲ್ಲಮ್ಮ, ಸಿರಸಂಗಿ ರಾಣಿ ಚೆನ್ನಮ್ಮ, ಕುರಗೋಡಿನ ಏಚಲದೇವಿ, ಕಳಲೆಯ ರಾಣಿ ಲಕ್ಷ್ಮಮ್ಮಣ್ಣಿ ದೇವೀರಮ್ಮಣ್ಣಿ ಕೊಡಗಿನ ಹಾಲೇರಿಯ ರಾಣಿ ದೇವಮ್ಮಾಜಿಯಂಥ ರಾಣಿಯರ ಆಡಳಿತಾತ್ಮಕ ವೈಖರಿ ಮತ್ತು ವೈಶಿಷ್ಟ್ಯವನ್ನು ಇಲ್ಲಿ ದಾಖಲಿಸಲಾಗಿದೆ.

೬. ಪ್ರಭುತ್ವಸಂಬಂಧಿ ನೆಲೆಯಲ್ಲಿ ಬಹುಮುಖ್ಯವಾಗಿ ಎದುರಾಗುವ ರಾಜತ್ವದ ಒಡೆತನ ಹಾಗೂ ವಂಶವಾಹಿನಿಯ ಸಮಸ್ಯೆಗಳನ್ನು ರಾಣಿಯರು ಎದುರಿಸಿದ ಬಗೆ ಎಂಥದು? ರಾಜತ್ವ, ಒಡೆತನ ಇವೆಲ್ಲವುಗಳಲ್ಲಿ ಸ್ತ್ರೀಯರಿಗೆ ಅವಕಾಶವೇ ಇಲ್ಲದ ಸಂದರ್ಭದಲ್ಲಿ ರಾಣಿಯರು ಒಡೆತನವನ್ನು ತಮ್ಮದಾಗಿಸಿಕೊಂಡಿರುವುದೇ ಒಂದು ದೊಡ್ಡ ಸವಾಲು. ವಂಶವಾಹಿನಿಯದು ಎರಡನೇಯ ದೊಡ್ಡ ಸವಾಲು. 'ಶ್ರೀಮಂತರಿಗೆ ಮಕ್ಕಳು ಕಡಿಮೆ' ಎಂಬಂತೆ ಈ ರಾಣಿಯರಿಗೆ ಮಕ್ಕಳ ಭಾಗ್ಯ ಇಲ್ಲವೆಂದೇ ಹೇಳಬೇಕು. ಇದ್ದರೂ ಕೂಡಾ ಅವು ಅಕಾಲ ಮರಣವನ್ನಪ್ಪಿ, ರಾಜ್ಯಕ್ಕೆ ವಾರಸುದಾರರಿಲ್ಲದಂತೆ ಆಗುವುದು ಸಹಜಕ್ರಿಯೆಯಾಗಿದ್ದು, ರಾಜತ್ವದ ವಾರಸುದಾರಿಕೆಯೆಂಬುದು ಕೇವಲ ಪುರುಷನಿಗೆ ಮಾತ್ರ ಸಂಬಂಧಿಸಿದ್ದು, ರಾಜತ್ವವೆಂಬುದು ಪಿತೃವಿನಿಂದ ಮಗನಿಗೆ ಹಸ್ತಾಂತರವಾಗುತ್ತಿತ್ತೇ ಹೊರತಾಗಿ ಮಗಳಿಗಾಗಲೀ, ರಾಣಿಗಾಗಲೀ ಅಲ್ಲ. ರಾಣಿಯರ ದತ್ತು ಸ್ವೀಕಾರ ಪದ್ಧತಿ ಇತ್ಯಾದಿ ಸಮಸ್ಯೆಗಳನ್ನು ಧೃತಿಗೆಡದೇ ಎದುರಿಸಿದ ರಾಣಿಯರ ಚಿತ್ರಣವನ್ನು ಈ ಅಧ್ಯಯನ ನಿರೂಪಿಸಿದೆ.

೭. ಭಾರತೀಯರ ಬದುಕನ್ನು ರೂಪಿಸಿದ ಪ್ರಬಲ ಶಕ್ತಿಗಳಲ್ಲಿ ಒಂದು ಧರ್ಮ. ಧಾರ್ಮಿಕ ಕಾರ್ಯಗಳಲ್ಲಿ ಬಹುತೇಕ ಪಾಲ್ಗೊಳ್ಳುವಿಕೆ ಮಹಿಳೆಯರದೇ. ಹೀಗಾಗಿ ಪಾಪ-ಪುಣ್ಯಗಳ ಪರಿಕಲ್ಪನೆಯಲ್ಲಿ ಧಾರ್ಮಿಕ ಮನೋಭಾವ ರಾಣಿಯರ ಅವಿಭಾಜ್ಯ ಅಂಗವಾಗಿದೆ. ಧಾರ್ಮಿಕ ವಿಧಿಗಳಿಂದ ದಾನ-ದತ್ತಿಗಳನ್ನು ನೀಡುವುದು, ಭಗವಂತನ ಹೆಸರಿನಲ್ಲಿ ಛತ್ರ ಮುಂತಾದ ಸಾರ್ವಜನಿಕ ಕಲ್ಯಾಣ ಕಾರ್ಯಗಳನ್ನು ಜರುಗಿಸಿದರು. ದಾನ ಮಾಡುವುದರಿಂದ ಪುಣ್ಯ ಬರುತ್ತದೆಂಬ, ಸಾಮಾಜಿಕ ಮನ್ನಣೆ ಹೆಚ್ಚುವುದೆಂಬ ನಂಬಿಕೆ ಅವರಲ್ಲಿ ದೃಢವಾಗಿತ್ತು. ಹೀಗಾಗಿ ವೈಷ್ಣವ, ಜೈನ, ಶೈವ, ಕ್ರೈಸ್ತ, ಇಸ್ಲಾಂ

